ಬಿಡಿ ಪ್ರಕಟಣೆ – ೯

# ಪಾತ್ರಗ

## ಸಾಮಾಜಿಕ ಕಾದಂಬರಿ

"Some people wish to shine at all cost"

—Alfred

ಲೇಖಕರು:

ಬಸವರಾಜ ಕಟ್ಟೀಮನಿ

ಮುದ್ರಣ ಮತ್ತು ಪ್ರಕಾಶನ

ಶಾರದಾ ಪ್ರಕಟನಾಲಯ

ಅರಳೀಪೇಟೆ, :: ಬೆಂಗಳೂರು – ೨.

ಜಿ. ಕೆ. ಮೂರ್ತಿ

ಮುಖಚಿತ್ರ ಮುದ್ರಣ:
ಶ್ರೀ ರಾಮಕೃಷ್ಣ ಪ್ರೆಸ್
ಬೆಂಗಳೂರು – ೨.

ಪ್ರಥಮ ಮುದ್ರಣ: ಜುಲೈ ೧೯೫೫



ಬೆಲೆ:
ಒಂದೂವರೆ ರೂಪಾಯಿ

# ಮೊದಲ ಮಾತು

ಸಂಸ್ಕೃತಿಯ ಕುರಿತಾಗಿ ಇತ್ತೀಚೆಗೆ ದೊಡ್ಡ ದೊಡ್ಡ ಮಾತುಗಳು ಕೇಳಿಬರುತ್ತಿವೆ. ನಮ್ಮ ಭಾರತೀಯ ಸಂಸ್ಕೃತಿ ಅತ್ಯಂತ ಉಚ್ಚ ತರಗತಿಯದು, ಉದಾತ್ತವಾದುದು, ವಿಶ್ವಕ್ಕೇ ಮಾದರಿಯಾಗುವಂಥದು," ಎಂದೂ ಪ್ರಚಾರ ನಡೆದಿದೆ. "ಕಥೆ ಕಾದಂಬರಿಗಳಲ್ಲಿ ಈ ನಮ್ಮ ಮಹಾ ಸಂಸ್ಕೃತಿಯ ಪ್ರತಿಬಿಂಬ ಕಾಣಿಸುತ್ತಿಲ್ಲವಲ್ಲಾ!" ಎಂದು ಆಕ್ರೋಶ ಮಾಡುವ ಪ್ರಭೃತಿಗಳೂ ತಲೆಯೆತ್ತುತ್ತಿದ್ದಾರೆ. "ಕಾದಂಬರಿಕಾರರೂ ಸಂಸ್ಕೃತಿ ಪ್ರಚಾರಕರಾಗಬೇಕು," ಎಂದು ಬೋಧಿಸುವ ಪಂಡಿತರೂ ಹುಟ್ಟಿಕೊಂಡಿದ್ದಾರೆ.

ಈ ಮಹನೀಯರೆಲ್ಲ ಹಾಡಿ ಹೊಗಳುವ ಈ ಸಂಸ್ಕೃತಿ ಎಂಬುದು ಇಂದು ಔಷಧಿಗಾದರೂ ಕಾಣಿಸುತ್ತಿದೆಯೆ ನಮ್ಮ ಸಮಾಜದಲ್ಲಿ? ಎಂದಿನದು ಈ ಸಂಸ್ಕೃತಿ? ಸಾವಿರಾರು ವರ್ಷಗಳ ಹಿಂದೆ ಇದ್ದುದೋ? ಅಥವಾ ಈಗ ಇರುವುದೋ? ಹಿಂದಿನದನ್ನು ಕುರಿತು ಹಾಡುವುದೇ ಆದರೆ ಯಾರೂ ಬೇಡವೆನ್ನಲಾರರು. ಆದರೆ, ಇಂದಿನ ನಮ್ಮ ಸಮಾಜದಲ್ಲಿ ಲೋಕಕ್ಕೆಲ್ಲ ಆದರ್ಶಪ್ರಾಯವಾದ ಉಚ್ಚ ತರಗತಿಯ ಸಂಸ್ಕೃತಿಯಿದೆಯೆಂದು ಹೇಳುವುದು ಮಾತ್ರ ಸತ್ಯಕ್ಕೆ ದೂರವಾದ ಮಾತಾಗುವುದು, ಡಾಂಭಿಕತನದ ಮಾತಾಗುವುದು.

ಅಸ್ತಿತ್ವದಲ್ಲಿಲ್ಲದ ಈ ಸಂಸ್ಕೃತಿಯನ್ನು ಕಥೆ ಕಾದಂಬರಿಗಳಲ್ಲಿ ತುಂಬಿಸಬೇಕೆಂದು ಹೇಳುವುದಂತೂ ಮೂಢತನವೇ ಸರಿ.

ಅನೇಕ ಕಾರಣಗಳಿಂದಾಗಿ, ಮುಖ್ಯವಾಗಿ ಆರ್ಥಿಕ ಕಾರಣಗಳಿಂದಾಗಿ, ಇಂದು ನಮ್ಮ ಸಮಾಜದ ನೀತಿಯ ನೆಲೆಗಟ್ಟು ಸಡಿಲಾಗಿ ಹದಗೆಟ್ಟುಹೋಗಿದೆಯೆಂಬ ಸತ್ಯ ಸಂಗತಿಯನ್ನು ಪ್ರಾಮಾಣಿಕರಾದವರೆಲ್ಲರೂ ಒಪ್ಪಿಕೊಳ್ಳುತ್ತಾರೆ. ಜೀವನದ ಮೌಲ್ಯಗಳು ಗುರುತೂ ಸಿಕ್ಕದಂತೆ ಅಳಿಸಿಹೋಗಿವೆ. ನೂರರಲ್ಲಿ ತೊಂಭತ್ತೊಂಭತ್ತರಷ್ಟು ಜನರು ಧ್ಯೇಯಶೂನ್ಯ, ಪ್ರವಾಹಪ್ರತಿತ, ದ್ವಿಮುಖ-ಬಾಳು, ಬಾಳುತ್ತಿದ್ದಾರೆ. ಸತ್ಯ, ನ್ಯಾಯ, ನೀತಿ, ಶೀಲ, ಸಚ್ಚಾರಿತ್ರ್ಯ ಮೊದಲಾದುವುಗಳೆಲ್ಲ ಭಾಷಣದ ಬದನೆಕಾಯಿಗಳೋ ಪುಸ್ತಕದ ಬದನೆಕಾಯಿಗಳೋ ಆಗಿವೆ.

ವೇದಿಕೆಯ ಮೇಲೆ, ದೊಡ್ಡ ಸಾಧುವಿನಂತೆ ನಿಂತು ಜನಕ್ಕೆ ಶೀಲ, ನೀತಿ, ಸಂಸ್ಕೃತಿಗಳ ಉಪದೇಶವೀಯುವ ವ್ಯಕ್ತಿಗಳೇ ತಮ್ಮ ದೈನಂದಿನ ಜೀವನದಲ್ಲಿ ಅತ್ಯಂತ ಹೇಯವೆನಿಸುವ ಅನೈತಿಕ ರೀತಿಯಿಂದ ವರ್ತಿಸುವುದನ್ನು ನಾವು ನಿತ್ಯವೂ ನೋಡುತ್ತಿದ್ದೇವೆ....

ನಮ್ಮ ಸಮಾಜದ 'ಉಚ್ಚ ತರಗತಿ'ಯ, 'ಸುಸಂಸ್ಕೃತ' ಜನರೆಂದರೆ ಇಂಥವರು.... ಇವರ 'ಸಂಸ್ಕೃತಿ'ಯೆಂದರೆ ಇಂಥದು....

'ಸಂಸ್ಕೃತಿ ಪ್ರಚಾರಕ'ರೆಂದು ಮೆರೆದಾಡುವವರೂ ಇಂಥವರೇ....

೨

ಕಥೆಗೇ ಆಗಲಿ, ಕಾದಂಬರಿಗೇ ಆಗಲಿ, ಇನ್ನಾವ ಕಲಾಕೃತಿಗೇ ಆಗಲಿ, ಸುತ್ತಲಿನ ಜೀವನವೇ ಕಚ್ಚಾ ಮಾಲು. ಐತಿಹಾಸಿಕ ಕಾದಂಬರಿಯಲ್ಲಿ ಹಿಂದೆ ನಡೆದುಹೋದ ಜೀವನ

ಕಾಣಿಸಿಕೊಂಡರೆ, ಸಾಮಾಜಿಕ ಕಾದಂಬರಿಯಲ್ಲಿ ಇತ್ತೀಚಿಗೆ ನಡೆದ, ನಡೆಯುತ್ತಿರುವ ಜೀವನ ಕಾಣಿಸಿಕೊಳ್ಳುತ್ತದೆ. ಸಾಹಿತ್ಯ ಕೃತಿಗೆಂದು ಈ ಜೀವನವನ್ನಾಯ್ದುಕೊಳ್ಳುವ ರೀತಿ, ಅದನ್ನು ನಿರೂಪಿಸುವ ವಿಧಾನ, ಮಂಡಿಸುವ ತಂತ್ರ ಇವುಗಳೆಲ್ಲವೂ ಕಲೆಗೆ ಸೇರಿದ ಅಂಶಗಳು. ಆದರೆ, ಮುಖ್ಯವಾದುದು – ಅತ್ಯಂತ ಮುಖ್ಯವಾದುದು – ಕಲಾಕೃತಿಯಲ್ಲಿ ಕಾಣಿಸಿಕೊಳ್ಳುವ ಜೀವನವೇ ಆಗಿದೆ.

"ಸಾಹಿತ್ಯ ಕೃತಿಯೆಂಬುದು ಜೀವನದ ವರದಿಯಾಗಬಾರದು, ಫೋಟೋಗ್ರಫಿಯಾಗಬಾರದು," ಎಂದು ಯಾರೋ ಎಲ್ಲಿಯೋ ಹೇಳಿದ ಒಂದು ಮಾತನ್ನು ಇಂದು ಪ್ರತಿಯೊಬ್ಬ ನಾಣ ವೆಂಕ ಶೀನರೂ ಉರುಹೊಡೆಯುತ್ತಿದಾರೆ. ಈ ಮಾತಿನ ಪೂರ್ಣ ಅರ್ಥವನ್ನು ಮಾತ್ರ ಹೆಚ್ಚು ಜನರು ಗಮನಿಸುವುದಿಲ್ಲ. ಕಾದಂಬರಿಯೆಂದರೆ ಜೀವನದ ವರದಿಯಲ್ಲ, ಛಾಯಾ ಚಿತ್ರವಲ್ಲ – ಎಂಬ ಮಾತನ್ನು ಯಾವ ಕಾದಂಬರಿಕಾರನೂ ಅಲ್ಲಗಳೆಯುವುದಿಲ್ಲ; ಆದರೆ, ಜೀವನದ ಯಥಾರ್ಥ ಚಿತ್ರಣವಿಲ್ಲದ ಕಾದಂಬರಿ, ಕಾದಂಬರಿಯೇ ಅಲ್ಲ – ಎಂಬ ಮಾತನ್ನೂ ಆತ ಮರೆಯುವುದಿಲ್ಲ.

"ಸಾಹಿತ್ಯ ಆದರ್ಶವಾದಿಯಾಗಬೇಕು, ಸಂಸ್ಕೃತಿ ಪ್ರಚಾರಕವಾಗಬೇಕು," ಎಂದು ಗಳಿಗೆಗೊಮ್ಮೆ ಘೋಷಿಸುವ ಭಾಷಣವೀರರು ಮಾತ್ರ ಸಾಹಿತ್ಯದ ಮೂಲ ಲಕ್ಷಣವಾದ ವಾಸ್ತವತೆಯನ್ನು ಮರೆಯಿಸಿಬಿಡಲು ಯತ್ನಿಸುತ್ತಿದಾರೆ.

ಆದರ್ಶವೆಂಬುದು ಒಳ್ಳೆಯದೇ ಆದುದಾದರೂ ಶುದ್ಧ ಸಾಹಿತ್ಯ ಕೃತಿಗಳಲ್ಲೂ ಅದು ಅವಾಸ್ತವವಾದ ರೀತಿಯಲ್ಲಿ ಚಂಚುಪ್ರವೇಶ ಮಾಡುತ್ತ ಬಂದರೆ ಕಲೆಯ ಕೊಲೆಯಾಗಲು ವಿಲಂಬವಾಗದು.

೩

"ಜೀವನ ಹೇಗೆ ಇದೆಯೆಂಬುದನ್ನು ತೋರಿಸುವುದರ ಜತೆಯಲ್ಲೇ ಅದು ಹೇಗೆ ಆಗಬೇಕೆಂಬುದನ್ನೂ ತೋರಿಸುವುದು ಸಾಹಿತ್ಯದ ಕೆಲಸ," ಎಂದು ಕೆಲವರು ವಾದಿಸುವುದುಂಟು; ಈ ವಾದದಲ್ಲಿಯೂ ಹುರುಳಿಲ್ಲ.

ಕಾದಂಬರಿಕಾರರು ಪಾದ್ರಿಗಳಲ್ಲ, ಪ್ರವಾದಿಗಳೂ ಅಲ್ಲ. "Pilgrim's Progress," ಇಲ್ಲವೆ "Life Divine," ಇಲ್ಲವೆ 'ಭಗವದ್ಗೀತೆ', ಇಲ್ಲವೆ 'ಭಾಗವತ', ಇಲ್ಲವೆ 'ಶಿವಲೀಲಾಮೃತ' – ಇಂಥ ಕೃತಿಗಳು ಕಾದಂಬರಿಗಳೆನಿಸಿಕೊಳ್ಳುವುದಿಲ್ಲ. ಜೀವನದ ಕಥೆಯನ್ನು ಚಿತ್ರಿಸುವುದಷ್ಟೇ ಕಾದಂಬರಿಕಾರನ ಕೆಲಸವಾಗಿದೆ. ಕಲೆಯ ಆವರಣದಲ್ಲಿ ನಿಂತು ಆತ ಈ ಕೆಲಸ ಮಾಡಬೇಕಾಗುತ್ತದೆ. ಉಪದೇಶದ ಉಪದ್ವ್ಯಾಪಕ್ಕೆ ಆತ ತೊಡಗಬೇಕೆಂದು ಹೇಳುವುದು ಕೇವಲ ಅವಿವೇಕವೇ ಸರಿ.

ಲೋಕದ ಕಾದಂಬರೀ ಕ್ಷೇತ್ರದಲ್ಲಿ ಅಮರರಾಗಿರುವ ಡಾಸ್ಟೊವಸ್ಕಿ, ಹಾರ್ಡಿ, ವಿಕ್ಟರ್ ಹ್ಯೂಗೋ, ಬಾಲ್ಜಾಕ್, ಝೋಲಾ, ಮಾಮ್, ಫಾಲ್ಕನರ್ ಮೊದಲಾದವರು ಆದರ್ಶವಾದಿ ಘೋಷಣೆಗಳಿಗೆ ಬಲಿಬೀಳದೆ, ಜೀವನವನ್ನು ತಾವು ಕಂಡಂತೆ ಧೈರ್ಯದಿಂದ ಚಿತ್ರಿಸಿದರೆಂತಲೇ ಅವರ ಕೃತಿಗಳು ಇಂದಿಗೂ ಉಳಿದಿವೆ, ಎಂದೆಂದಿಗೂ ಉಳಿಯುತ್ತವೆ.

ನಮ್ಮ ಆದರ್ಶವಾದಿ ಭಾಷಣವೀರರು ಇದಾವುದನ್ನೂ ಗಮನಿಸದೆ, ಸಾಹಿತ್ಯವನ್ನು ಕುರಿತು ಅರ್ಥಶೂನ್ಯ ಅಸಂಬದ್ಧ ಮಾತುಗಳನ್ನಾಡುತ್ತ ನಡೆದಿದ್ದಾರೆ. ಶುದ್ಧ ಸಾಹಿತ್ಯದ ನಿಜವಾದ ಲಕ್ಷಣಗಳನ್ನು ಕುರಿತು ಸಮರ್ಪಕ ತಿಳಿವಳಿಕೆಯಿಲ್ಲದಿರುವ ಅನೇಕ ವಾಚಕರು, ಈ ಭಾಷಣ ವೀರರ ಮಾತಿನ ಮಳೆಯಿಂದಾಗಿ ಗೊಂದಲಕ್ಕೊಳಗಾಗುತ್ತಿದ್ದಾರೆ.

ವಾಚಕರು ನನಗೆ ಬರೆದಿರುವ ಹಲವು ಕಾಗದಗಳಲ್ಲಿ ಅವರ ಮನಸ್ಸಿನ ಗೊಂದಲ ವ್ಯಕ್ತವಾಗಿದೆ.

"ಶ್ರೀಮಾನ್....ಅವರಂಥ ಹಿರಿಯರು ಒಂದು ಕಡೆ, 'ಕಾದಂಬರಿಗಳು ಸದಭಿರುಚಿ, ಶೀಲ, ಸಚ್ಚಾರಿತ್ರ್ಯ, ಸಚ್ಚಿದಾನಂದಗಳಿಗೆ ಪ್ರೇರಕವಾಗಬೇಕು' ಎಂದು ಹೇಳುತ್ತಾರಲ್ಲ?" ಎಂದು ಒಬ್ಬ ವಾಚಕರು ನನ್ನನ್ನು ಕೇಳಿದ್ದಾರೆ.

ಈ 'ಸಚ್ಚಿದಾನಂದ'ದ ಶ್ರೀಮಾನ್‌ರವರು ಸ್ವಯಂನಿರ್ಮಿತ 'ಹಿರಿಯರಲ್ಲೊಬ್ಬರು'. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಇವರು ಮಾಡಿರುವ ಕೃಷಿಯೂ ಅಲ್ಪವೆ. ಆದರೆ, ಅವರು ದೊಡ್ಡದೊಂದು ಅಧಿಕಾರ ಸ್ಥಾನದಲ್ಲಿರುವುದರಿಂದ ಅವರ ಸುತ್ತಲೂ ಸ್ವಾರ್ಥಿಗಳಾದ ಸ್ತುತಿ ಪಾಠಕರು ಸೇರಿಕೊಂಡು, ಶ್ರೀಮಾನ್‌ರವರು ಮಹಾ ಸಾಹಿತಿಗಳೆಂದು ಪ್ರಚಾರಮಾಡಿ ಮಾಡಿ ಸಾರ್ವಜನಿಕರಿಗೆ ಮಂಕುಬೂದಿ ಎರಚಿದ್ದಾರೆ. ವಾಸ್ತವವಾಗಿ ಈ ಶ್ರೀಮಾನ್‌ರವರು ಆಧುನಿಕ ಸಾಹಿತ್ಯದ ಬಗೆಗೆ ತಿಳಿದುಕೊಂಡಿರುವುದೂ ಅಲ್ಪವೆ. ರಾಮಾಯಣ, ಮಹಾಭಾರತ, ಭಗವದ್ಗೀತೆ, ಅರವಿಂದ ವಾಙ್ಮಯಗಳನ್ನುಳಿದು ಬೇರಾವುದನ್ನೂ ಅವರು ಮನ್ನಿಸುವುದಿಲ್ಲ. ಇಂಥ ಕೂಪಮಂಡೂಕ ಮನೋವೃತ್ತಿಯವರನ್ನು 'ಹಿರಿಯ'ರೆಂದು ಒಪ್ಪಿಕೊಳ್ಳುವುದೂ ತಪ್ಪೇ. ಇಂಥವರ ಮಾತಿಗೆ ಹೆಚ್ಚು ಮಹತ್ತ್ವ ಕೊಡಬಾರದೆಂಬುದೂ ಅನೇಕರಿಗೆ ತಿಳಿಯು ವುದಿಲ್ಲ. ಎಂತಲೇ, ಕನ್ನಡದಲ್ಲಿ ಸಾಹಿತ್ಯದ ಬಗೆಗೆ ಇಂಥ ಗೊಂದಲದ ಪರಿಸ್ಥಿತಿ....

ಡಾಸ್ಟೊವಸ್ಕಿ, ಝೋಲಾ, ಹಾರ್ಡಿ, ಬಾಲ್ಝಾಕ್, ಜೇಮ್ಸ್ ಜಾಯ್ಸ್ ಮೊದಲಾದ ಮಹಾ ಕಾದಂಬರಿಕಾರರು ಜೀವಿಸಿದ್ದಾಗ ಅವರಿಗೂ ಇಂಥ ಕೂಪಮಂಡೂಕಗಳಿಂದ ಕಿರುಕುಳ ತಪ್ಪಲಿಲ್ಲ.

ಅನೇಕ ಕಷ್ಟ ಕಾರ್ಪಣ್ಯಗಳನ್ನೆದುರಿಸಿಯೂ ಕೃತಿರಚನೆಯನ್ನು ನಿಲ್ಲಿಸದೆ, ಪ್ರಾಮಾಣಿಕ ವಾದ ರೀತಿಯಲ್ಲಿ ಸಾಹಿತ್ಯಕ್ಕೆ ಸೇವೆ ಸಲ್ಲಿಸಲೆತ್ನಿಸುವ ಎಲ್ಲ ಬರೆಹಗಾರರಿಗೂ ಇಂಥ ಸಂಕುಚಿತ ಮನಸ್ಕರಿಂದ ಉಪಟಳ ತಪ್ಪುವುದಿಲ್ಲ.

ಕನ್ನಡ ಕಾದಂಬರಿಕಾರರನ್ನೂ ಕಾಡಿಸುವ ಇಂಥ ಉಪದ್ವ್ಯಾಪಿಗಳು ನಾಡಿನಲ್ಲಿ ಅಲ್ಲಿ ಇಲ್ಲಿ ತಲೆಯೆತ್ತಿದ್ದಾರೆ. ಅವರ ಹಾವಳಿ ಮಿತಿಮೀರಿ ಬೆಳೆದಿದೆಯೆಂತಲೇ ನಾನಿಲ್ಲಿ ಈ ವಿಚಾರ ಪ್ರಸ್ತಾಪಿಸಬೇಕಾಗಿ ಬಂದಿದೆ. ಇವರ ಟೀಕೆಗಳಿಗೂ ಅಪಪ್ರಚಾರಕ್ಕೂ ನಾವು ಹೆದರುವುದಿಲ್ಲ. ನಮ್ಮ ಕರ್ತವ್ಯವೇನೆಂಬುದು ನಮಗೆ ಚೆನ್ನಾಗಿ ಗೊತ್ತಿದೆ, ಅದನ್ನು ನಾವು ಎಂದಿನಂತೆಯೆ ಮುಂದುವರಿಸಿಕೊಂಡು ಹೋಗುವೆವು.

ವಾಚಕರು ನಮ್ಮ ಸಾಹಿತ್ಯ ಕೃತಿಗಳನ್ನು, ಅವುಗಳ ಯೋಗ್ಯತೆಯಿಂದ ತೂಗಿ ನೋಡ

ಬೇಕೇ ವಿನಾ, ಸಾಹಿತ್ಯದ ಲಕ್ಷಣಗಳನ್ನೂ ಅರಿತುಕೊಳ್ಳದ ಮಾತಿನಮಲ್ಲರ ಅಸಂಬದ್ಧ ಪ್ರಲಾಪಗಳಿಂದ ಅಳೆಯಬಾರದು.

ಇಂದಿನ ಜೀವನದಲ್ಲಿ ನಡೆಯಲಾರದಂಥ ಘಟನೆಗಳನ್ನೂ ಕಾಣಿಸಲಾರದಂಥ ವ್ಯಕ್ತಿಗಳನ್ನೂ ನಾವು ನಮ್ಮ ಕೃತಿಗಳಲ್ಲಿ ತರುವೆವೇ ಹೇಗೆ ಎಂದು ವಾಚಕರು ನೋಡಬೇಕು. ಕಾದಂಬರಿಯಲ್ಲಿ, ಜೀವನದ ಯಥಾರ್ಥ ಮತ್ತು ಕಲಾತ್ಮಕ ಚಿತ್ರಣವಿರಬೇಕಾದುದು ಮುಖ್ಯ ವಿಷಯವೆಂಬುದನ್ನು ವಾಚಕರು ಮರೆಯಬಾರದು. ಸಮಾಜದಲ್ಲಿ ಇಲ್ಲದುದನ್ನು ನಾವು ಚಿತ್ರಿಸಿದರೆ ವಾಚಕರು ನಮ್ಮನ್ನು ನಿಷ್ಠುರವಾದ ರೀತಿಯಲ್ಲಿ ಖಂಡಿಸಬಹುದು.

೪

ಪ್ರಸ್ತುತ ಕಾದಂಬರಿಯಲ್ಲಿ ಬರುವ ಗಿರಿಜಾ, ಕಾಶಪ್ಪರಂಥ ವ್ಯಕ್ತಿಗಳು ಇಂದಿನ ಸಮಾಜದಲ್ಲಿ ಎಲ್ಲೆಲ್ಲೂ ಕಾಣಿಸುತ್ತಾರೆ. ಅವರ ರೀತಿ ನೀತಿ ನಡವಳಿಕೆಗಳನ್ನು ಯಾರೂ ಮೆಚ್ಚಿಕೊಳ್ಳಲಾರರು. ಹಾಗೆಂದು, ಇಂಥ ಪಾತ್ರಗಳನ್ನೂ ಅವುಗಳ ಜೀವನವನ್ನೂ ಕಾದಂಬರಿಗಳಲ್ಲಿ ತರಕೂಡದೆಂದು ಯಾರಾದರೂ ಹೇಳುತ್ತ ಹೊರಟರೆ ಅವರನ್ನು ಹುಚ್ಚ ರಾಸ್ಪತ್ರೆಗೆ ರವಾನಿಸಬೇಕಾಗುವುದು.

ಗಿರಿಜಾ ಮತ್ತು ಕಾಶಪ್ಪರಂಥವರು ಸಮಾಜದಲ್ಲಿ ಎಷ್ಟು ಜನರಿಲ್ಲ? ಅವರ ನಡವಳಿಕೆಗಳನ್ನು ಎಷ್ಟು ಜನ ಕಣ್ಣು ಮುಚ್ಚಿಕೊಂಡು ನೋಡುತ್ತಲಿಲ್ಲ?

ಗಿರಿಜೆಯಂಥ ಸ್ತ್ರೀಯರು 'ಪಾತರಗಿತ್ತಿ'ಯರಾಗಲು ಹಲವು ಕಾರಣಗಳಿರುತ್ತವೆ. ಆ ಕಾರಣಗಳನ್ನು ಕಂಡುಹಿಡಿದು, 'ಪಾಪಿ'ಯಾದ ವ್ಯಕ್ತಿಯನ್ನೂ ಮಾನವೀಯ ದೃಷ್ಟಿಯಿಂದ ಕಲಾದೃಷ್ಟಿಯಿಂದ ನೋಡಿ ಕಾದಂಬರಿಯಲ್ಲಿ ಚಿತ್ರಿಸಬೇಕಾಗುತ್ತದೆ. 'ಪಾಪಿ'ಗಳನ್ನು ಕಂಡೊಡನೆ 'ಥುತ್' ಎನ್ನುವುದಾಗಲಿ ಕಲ್ಲು ಬೀರುವುದಾಗಲಿ ಸಹೃದಯರಿಗೆ ಸಲ್ಲದು. ಸಾಹಿತ್ಯಿಯಂತೂ ತನ್ನದೇ ಆದುದೊಂದು ಪೂರ್ಣದೃಷ್ಟಿಯಿಂದ ಜೀವನವನ್ನೂ ವ್ಯಕ್ತಿಗಳನ್ನೂ ನೋಡಬೇಕಾಗುತ್ತದೆ. ತಿಳಿದವರು ಇದನ್ನೇ 'Objectivity' ಎಂದು ಕರೆಯುವುದುಂಟು; ಲೇಖಕ, ವಾಚಕ, ವಿಮರ್ಶಕ ಈ ಮೂವರಿಗೂ ಈ ದೃಷ್ಟಿ ಅತ್ಯಾವಶ್ಯಕ. ಇಂಥ ಪೂರ್ಣ ದೃಷ್ಟಿಯಿದ್ದವರಿಗೆ ಮಾತ್ರವೆ ಸಾಹಿತ್ಯ ಕೃತಿಯ ನಿಜವಾದ ರಸಾಸ್ವಾದ ಸಾಧ್ಯವಾಗುವುದು....

ಪ್ರಸ್ತುತ ಕಾದಂಬರಿ ಬಹಳ ದಿನಗಳ ಹಿಂದೆಯೆ ಬರೆದಾಗಿದ್ದರೂ ಪ್ರಕಟವಾಗುವುದು ಹಲವು ಅನಿವಾರ್ಯ ಕಾರಣಗಳಿಂದಾಗಿ ಇಷ್ಟು ತಡವಾಗಿದೆ. ಇದನ್ನು ನಿರೀಕ್ಷಿಸುತ್ತಿದ್ದು ಬೇಸರಪಟ್ಟುಕೊಂಡಿರಬಹುದಾದ ವಾಚಕರು ದಯೆಯಿಟ್ಟು ಮನ್ನಿಸಬೇಕು.

ಮಲಾಮರಡಿ,
೨೦-೭-೧೯೫೫.

ಬಸವರಾಜ ಕಟ್ಟೀಮನಿ

ಹಿರಿಯ ಕಥೆಗಾರ, ಹಿರಿಯ ಜೀವ,

ಆ ನಂ ದ

ಅವರಿಗೆ – ಆದರಪೂರ್ವಕವಾಗಿ

೧

ನಾನು ಸುಂದರಿ.

ನಿಜವಾಗಿಯೂ ?

ಸಂದೇಹವೇಕೆ ? ಗಂಡಸರ ಮಾತುಗಳನ್ನೇನೋ ಪೂರ್ತಿಯಾಗಿ ನಂಬಲಾರೆ ನಾನು. ನಂಬಬಾರದು. ತಲೆಯಲ್ಲಿ ಮೆದುಳಿನ ತುಕಡಿಯಿರುವ ಯಾವ ಹೆಣ್ಣೂ ಗಂಡಸರ ಮಾತಿನ ಮೇಲೆ ಪೂರ್ಣ ವಿಶ್ವಾಸವಿಡುವುದಿಲ್ಲ. ನನಗೆ ಗೊತ್ತಿರುವ ಹಾಗೆ ನಾನು ಸಾಕಷ್ಟು ಬುದ್ಧಿವಂತೆ. ಲೋಕದ ಅನುಭವವೂ ಉಂಟು ಬೇಕಾದಷ್ಟು. ಗಂಡಸರಷ್ಟು ಸುಳ್ಳಾಡುವವರು ಪ್ರಪಂಚದಲ್ಲಿ ಇನ್ನಾರೂ ಇರಲಾರರು. ಅವರ ಮಾತನ್ನು ನಂಬಿ ಮರುಳಾಗುವಂಥ ಮುಗ್ಧತೆ ಯೇನೂ ನನ್ನಲ್ಲಿಲ್ಲ.

“ ನೀನು ಸುಂದರಿ,” ಎಂದು ಅನೇಕ ಬಾರಿ ಹೇಳಿದಾನೆ ಕಾಶಪ್ಪ.

“ ನೀನು ಸುಂದರಿ,” ಎಂದು ಅನೇಕ ಬಾರಿ ಹೇಳಿದಾರೆ ಅಬ್ದುಲ್ ಖಾನ್.

“ ನೀನು ಸುಂದರಿ,” ಎಂದು ಅನೇಕಬಾರಿ ಹೇಳಿದಾರೆ ‘ಅವರು.’

ನನ್ನನ್ನು ವಶಪಡಿಸಿಕೊಳ್ಳುವ ಉದ್ದೇಶದಿಂದಲೇ ಅಲ್ಲವೇ ಇವರೆಲ್ಲರೂ ನನ್ನನ್ನು ಹಾಗೆ ಪ್ರಶಂಸಿಸಿದ್ದು ?

ನಾನು ಬಲ್ಲೆ ಇವರನ್ನೆಲ್ಲ ! ಇವರ ಅಂತರಂಗವನ್ನೆಲ್ಲ. ನಾನು ಬಲ್ಲೆ ಇವರ ತಳಬುಡವನ್ನೆಲ್ಲ.

ನಾನು ಸುಂದರಿಯೆಂಬುದನ್ನು ಇವರೇನೂ ಹೇಳಿ ತಿಳಿಸಬೇಕಾಗಿರಲಿಲ್ಲ ನನಗೆ. ನನ್ನ ಜೀವನದ ರಂಗಭೂಮಿಯ ಮೇಲೆ ಇವರು ಅಡಿಯಿಡುವುದಕ್ಕೆ

ಮೊದಲೇ ಎಷ್ಟೋ ವರ್ಷಗಳ ಹಿಂದೆಯೆ, ನಾನಿನ್ನೂ ಹನ್ನೆರಡರ ಹುಡುಗಿಯಾಗಿದ್ದಾಗಲೆ ನನಗೆ ಅರಿವಾಗಿತ್ತು ಆ ವಿಷಯ.

"ನೀನು ಸುಂದರಿ! ನೀನು ಸುಂದರಿ!" ಎಂದು ಕಣ್ಣು ಮಿಟುಕಿಸಿ ಹೇಳಿತ್ತು ಕನ್ನಡಿ.

"ನಾನು ಸುಂದರಿ! ನಾನು ಸುಂದರಿ!" ಎಂದು ನನ್ನಷ್ಟಕ್ಕೆ ನಾನೇ ಹೇಳಿಕೊಳ್ಳುತ್ತಾ ಕಣ್ಣು ಮಿಟುಕಿಸಿದ್ದೆ ನಾನೂ.

ಇಪ್ಪತ್ತೈದು ವರ್ಷಗಳ ತರುವಾಯ ಇಂದಿಗೂ ಅದೇ ಮಾತನ್ನೇ ಪುಟು ಪುಟಿಸುತ್ತಾ ಕಣ್ಣು ಮಿಟುಕಿಸುತ್ತಿದೆ ಕನ್ನಡಿ.

"ನೀನು ಸುಂದರಿ! ನೀನು ಸುಂದರಿ!"

ನಿಜ. ನಾನು ಸುಂದರಿ. ಆಗಲೂ ಸುಂದರಿ. ಈಗಲೂ ಸುಂದರಿ. ಇಪ್ಪತ್ತು ವರ್ಷಗಳ ಸಂಸಾರಿಕಜೀವನದ ಬೇಗೆಗೂ ಬಾಡದೆ ಮಾಟವಾಗಿ ಉಳಿದಿದೆ ನನ್ನ ದೇಹ. ಮೊದಲಿನಂತೆಯೇ ಮುದ್ದಾಗಿದೆ ಮೊಗವೂ.

ಕನ್ನಡಿಯಲ್ಲಿ ಮೂಡಿದ ನನ್ನ ಪ್ರತಿಬಿಂಬವನ್ನು ಗಂಟೆಗಳ ಕಾಲ ಒಂದೇ ಸವನೆ ದಿಟ್ಟಿಸುತ್ತಾ ವಿರಾಮಕುರ್ಚಿಯಲ್ಲೊರಗಿಕೊಂಡಿರುವುದೊಂದು ಅಭ್ಯಾಸವಾದಂತಾಗಿದೆ ನನಗೆ. ಈ ಎಂಟು ದಿನಗಳ ಅವಧಿಯಲ್ಲಂತೂ ಒಂದು ಹುಚ್ಚು ಎನ್ನುವಂತೆ ಬೆಳೆದಿದೆ ಈ ಅಭ್ಯಾಸ. ಬೆಳಗು ಬೆಳೆದು ಬಿಸಿಲಾಗುತ್ತದೆ, ಬಿಸಿಲು ಇಳಿದು ಸಂಜೆಯಾಗುತ್ತದೆ, ಸಂಜೆ ಕರಗಿ ಕತ್ತಲಾಗುತ್ತದೆ. ಕತ್ತಲೆಯಲ್ಲೂ ಕನ್ನಡಿಯಲ್ಲಿ ನನ್ನ ಪ್ರತಿಬಿಂಬ ಕಾಣಿಸಿಕೊಳ್ಳುತ್ತದೆ.

ನಾನು ಮೇಲಕ್ಕೇಳುವುದಿಲ್ಲ, ದೀಪ ಅಂಟಿಸುವುದಿಲ್ಲ. ಕುರ್ಚಿಯಲ್ಲಿ ಬಿದ್ದುಕೊಂಡಿರುತ್ತೇನೆ ಹಾಗೆಯೇ. ಏಳುವುದಕ್ಕೂ ಬೇಸರು. ಅಡುಗೆ ಮಾಡುವುದಕ್ಕೂ ಬೇಸರು. ಊಟ ಮಾಡುವುದಕ್ಕೂ ಬೇಸರು. ಚಹ, ತಿಂಡಿ ಎಲ್ಲವೂ ಬೇಸರು. ಎಲ್ಲವೂ. ಜೀವನವೇ ಬೇಸರು....

ಜೀವಂತ ಭೂತದಂತೆ ಕೊಠಡಿಯಲ್ಲಿ ಕುಳಿತುಕೊಂಡು ಹುಚ್ಚಿಯಂತೆ ದಿಟ್ಟಿಸುತ್ತಿರುತ್ತೇನೆ, ಎದುರಿಗಿರುವ ಕನ್ನಡಿಯನ್ನು. ಹುಚ್ಚಿ? ನಾನು ಹುಚ್ಚಿಯಾಗುತ್ತಿಲ್ಲವಷ್ಟೆ? ಈಗಾಗಲೆ ನನಗೆ ಹುಚ್ಚು ಹಿಡಿದಿರಬಹುದೋ ಏನೊ.

ಏನೋ ಅವ್ವ! ಯಾರು ಬಲ್ಲರು! ನಾನೇನು ಡಾಕ್ಟರಳೇ, ನನಗೆ ಹುಚ್ಚು ಹಿಡಿದಿದೆಯೋ ಇಲ್ಲವೋ ಎಂದು ನಿಖರವಾಗಿ ಹೇಳಲು? ಹುಚ್ಚಿನ ಪ್ರಾಥಮಿಕ ಲಕ್ಷಣಗಳಂತೂ ನನ್ನಲ್ಲಿ ಕಾಣಿಸಿಕೊಳ್ಳುತ್ತಿರುವುದು ನಿಜ. ಯಾವುದೋ ಒಂದು ಸಿನಿಮಾದಲ್ಲಿ, ನನ್ನಂಥ ಸ್ಥಿತಿಯಲ್ಲಿದ್ದ ಯುವತಿಯೊಬ್ಬಳು ನನ್ನ ಹಾಗೇ ಹಗಲು ರಾತ್ರಿ ಕನ್ನಡಿ ನೋಡುತ್ತಾ, ಕಿಸಕಿಸನೆ ನಗುತ್ತಾ, ಯದ್ವಾ ತದ್ವಾ ಮಾತಾಡುತ್ತಾ ಹುಚ್ಚಿಯಂತೆ ವರ್ತಿಸುತ್ತಿದ್ದುದನ್ನು ನೋಡಿದ ಹಾಗೆ ನೆನಪು. ಮುಂದೆ ಅವಳು ಪೂರಾ ಹುಚ್ಚಿಯೇ ಆಗಿಹೋಗುತ್ತಾಳೆ, ಅಲ್ಲವೆ? ಅವಳ ಹಾಗೇ ನಾನೂ ಪೂರಾ ಹುಚ್ಚಿಯೇ ಆಗಿಹೋಗುವೆನೋ ಏನೋ. ಯಾರು ಬಲ್ಲರು?

ನನ್ನ ತಲೆಯಲ್ಲಿ ಸುಳಿಯುತ್ತಿರುವ ಈ ಭಯಂಕರ ಯೋಚನೆಗಳನ್ನು ನೆನೆದಾಗ ಒಂದೊಂದು ಬಾರಿ ನನಗೆ ನಗುವುಕ್ಕಿ ಬರುತ್ತದೆ. ಹುಚ್ಚು ಹಿಡಿಯಲು ನನಗೇನಾಗಿದೆ ಅಂಥ ಧಾಡಿ? ಆ ಸಿನಿಮಾದಿಂದಲೇ ನನ್ನ ಮನಸ್ಸಿನ ಮೇಲೆ ಇಂಥ ವಿಚಿತ್ರ ಪರಿಣಾಮವುಂಟಾಗಿದೆಯೋ ಏನೊ. ಹೀಗೂ ಆಗುವ ಸಂಭವವಿರುವುದೆಂದು ಯಾವುದೋ ಕಾದಂಬರಿಯಲ್ಲಿ ಓದಿದಂತೆ ನೆನಪು. ಆ ಸಿನಿಮಾದ ನಾಯಕಿಯಂತೆಯೇ ವರ್ತಿಸುವ ಬಯಕೆ ನನ್ನ ಮನಸ್ಸಿನಲ್ಲಿ ನನಗರಿಯದಂತೆ ತುಂಬಿಕೊಂಡಿದೆಯೊ ಏನೊ. ಇದ್ದರೂ ಇರಬಹುದು: ಕನ್ನಡಿಯನ್ನು ಗಂಟೆಗಟ್ಟಲೆ ಕಾಲ ದಿಟ್ಟಿಸುವ ಗೀಳು ನನಗಂಟಿ ಕೊಂಡುದೂ ಆ ಸಿನಿಮಾ ನೋಡಿದ ತರುವಾಯವೇ ಅಲ್ಲವೆ?

ಅಲ್ಲ. ನಾನು ತಪ್ಪುಮಾಡುತ್ತಿದ್ದೇನೆ. ಎಷ್ಟು ದಿವಸವಾಗಿರಬಹುದು ನಾನು ಆ ಸಿನಿಮಾ ನೋಡಿ? ಹಾಳು ಮರೆವು. ಸರಿಯಾಗಿ ನೆನಪಾಗ ಲೊಲ್ಲದು. ಅಂತೂ ಆರೇಳು ತಿಂಗಳಾದರೂ ಆಗಿರಬಹುದು. ಕನ್ನಡಿ ದಿಟ್ಟಿಸುವ ಹುಚ್ಚು ನನಗಂಟಿಕೊಂಡುದು ಈಚಿಗೆ ಎಂಟುದಿನಗಳಿಂದ ಮಾತ್ರ. ಹೌದು. ನಾನು ತಪ್ಪುಮಾಡುತ್ತಿದ್ದೇನೆ. ಆ ಸಿನಿಮಕ್ಕೂ ನನ್ನ ಈ ಹುಚ್ಚಿಗೂ ಅಂಥ ನಿಕಟ ಸಂಬಂಧವೇನೂ ಇರಲಾರದು. ಎಂಟುದಿನಗಳ ಹಿಂದೆ ನಡೆದ ಆ ಘಟನೆಯಿಂದ ನನಗೆ ಹೀಗಾಗುತ್ತಿದೆಯೆಂಬುದೇ ನಿಜ. ಈ ಘಟನೆಯೊಂದೇ ಸಾಲದೇ ಎಂಥ

ವರಿಗಾದರೂ ಹುಚ್ಚು ಹಿಡಿಸಲು? ನಿಂತ ನೆಲವೇ ಇಬ್ಭಾಗವಾದ ಹಾಗೆ, ಕುಳಿತ ಕುರ್ಚಿಯೇ ಅದೃಶ್ಯವಾದ ಹಾಗೆ ನನ್ನ ಜೀವನದ ನೆಲಗಟ್ಟೇ ಮಾಯವಾಯಿತು. ಕತ್ತಲಲ್ಲಿ ತಡವರಿಸುವ ಹಸುಳೆಯಂತಾಗಿದೆ ಇಂದು ನನ್ನ ಸ್ಥಿತಿ. ಎಡಕ್ಕೆ ಕತ್ತಲು, ಬಲಕ್ಕೆ ಕತ್ತಲು, ಹಿಂದೆ ಕತ್ತಲು, ಮುಂದೆ ಕತ್ತಲು, ಕೆಳಗೆ ಕತ್ತಲು, ಮೇಲೆ ಕತ್ತಲು. ಕತ್ತಲೆಯ ವಿನಾ ಇನ್ನೇನೂ ಇಲ್ಲ ಈ ಪ್ರಪಂಚದಲ್ಲಿ! ಈ ಮಹಾಶೂನ್ಯದಲ್ಲಿ ನಾನೊಬ್ಬಳೇ ಒಬ್ಬಳು ಸಿಕ್ಕಿಬಿದ್ದ ಹಾಗೆ ಭಾಸವಾಗಿ ನಾನು ನಿಬ್ಬೆರಗಾಗಿದೇನೆ.

ಈ ಕತ್ತಲ ಕಾಡನ್ನು ದಾಟಿ ಪುನಃ ಜೀವನದ ಬೆಳಕಿಗೆ ಹೋಗಲು ದಾರಿ ಯಾವುದು? ಯಾರು ನನ್ನನ್ನು ಕೈಹಿಡಿದು ಎತ್ತುವವರು? ಯಾರು ನನ್ನನ್ನು ಕರೆದೊಯ್ಯುವವರು? ಈ ಭೀಕರ ಶೂನ್ಯದ ಆಳದಲ್ಲಿ ಮುಳುಗಿ ಉಸಿರುಗಟ್ಟಿ ಸಾಯುವುದೇ ಬರೆದಿದೆಯೇ ನನ್ನ ಹಣೆಯಲ್ಲಿ?

ನೀನಾದರೂ ಹೇಳಬಾರದೇ ತಂಗೀ, ಕನ್ನಡಿಯೆ! ಎಂಟು ದಿನಗಳವರೆಗೆ ನನ್ನ ಜೊತೆಗಾತಿಯಾಗಿರುವ ಜೀವದ ಗೆಳತಿಯೆ! ನೀನಾದರೂ ಹೇಳು. ನನ್ನ ಹಾದಿ ಯಾವುದು?

"ಹ ಹ ಹ ಹ್ಹ ಹ್ಹ!
ಹ ಹ ಹ ಹ್ಹ ಹ್ಹ!"

ಎಲಾ! ಯಾರದು ನಗುತ್ತಿರುವುದು?

ಗೊತ್ತಾಯಿತು. ಗೊತ್ತಾಯಿತು.

ನನ್ನ ಪ್ರಶ್ನೆ ಕೇಳಿ ಕನ್ನಡಿಯೇ ನಗುತ್ತಿದೆ. ಬಾಯಿ ತೆರೆದು, ಕೆನ್ನೆಗಳನ್ನು ವಿಸ್ತಾರಗೊಳಿಸಿ, ಕಣ್ಣು ಅರಳಿಸಿ ನಗುತ್ತಿದೆ. ಬಿದ್ದು ಬಿದ್ದು ನಗುತ್ತಿದೆ.

ಕನ್ನಡಿಯೇ ನಗುತ್ತಿದೆಯೋ, ಇಲ್ಲ, ನಾನೇ ನಗುತ್ತಿರುವೆನೋ?

ಬಹಳಮಾಡಿ ನಾನೇ ನಗುತ್ತಿರಬೇಕು. ಕನ್ನಡಿ ಎಲ್ಲಾದರೂ ನಗುತ್ತದೆಯೇ, ಮೂಕವಸ್ತು?

ಹೌದು, ಹೌದು. ನಾನೂ ನಗುತ್ತಿದೇನೆ. ನನ್ನ ಜೊತೆಗೆ ಕನ್ನಡಿಯೂ ನಗುತ್ತಿದೆ. ಅದು ಸಹಜ. ನಿಜ. ನಿಜ.

" ಗಿರಿಜಾ, ಗಿರಿಜಾ...."

" ಓ ಗಿರಿಜಾ...."

ಯಾರದು ಕೂಗುತ್ತಿರುವುದು? 'ಅವರ' ಧ್ವನಿಯಂತೂ ಅಲ್ಲ. 'ಅವರ'ದು ಸಣ್ಣ ಧ್ವನಿ. ಅದರಲ್ಲಿ ಶಕ್ತಿಯಿಲ್ಲ, ಕರ್ಕಶತೆಯಿಲ್ಲ. ಹೆಣ್ಣಿನ ಧ್ವನಿಯಂತೆ 'ಅವರ' ಧ್ವನಿಯೂ.

" ಗಿರಿಜಾ...."

ಮತ್ತೆ ಅದೇ ಕೂಗು. ಅದೇ ಗಂಡು ಧ್ವನಿ. ಅಬ್ದುಲ್‌ಖಾನರಂತೆ. ಅವರ ಧ್ವನಿಯೂ ಬಹಳ ಒರಟು, ಬಹಳ ಕರ್ಕಶ. ಗುಡುಗಿನ ಗದ್ದರಿಕೆಯಂತೆ.

" ಗಿರಿಜಾ, ಓ ಗಿರಿಜಾ...."

ಇಲ್ಲ. ನಾನು 'ಓ' ಕೊಡುವುದಿಲ್ಲ. ಕೊಠಡಿಯನ್ನು ಬಿಟ್ಟು ಏಳುವುದಿಲ್ಲ. ಬಾಗಿಲು ತೆಗೆಯುವುದಿಲ್ಲ. ಅಬ್ದುಲ್‌ಖಾನರನ್ನು ಕರೆದುಕೊಳ್ಳುವುದಿಲ್ಲ.

ಅವರು ಬಂದಿರುವುದೇಕೆಂಬುದನ್ನು ನಾನು ಬಲ್ಲೆ. ಅವರಿಗೆ ಬೇಕಾದು ದೇನು ಎಂಬುದನ್ನು ಬಲ್ಲೆ. ಅವರು ಎಂಥವರೆಂಬುದನ್ನು ಬಲ್ಲೆ.

ನನ್ನನ್ನು ತಬ್ಬಿ ಚುಂಬಿಸಿ, ನನ್ನೊಡನೆ ಮಲಗಿ, ತಮ್ಮ ಲಾಲಸೆಯನ್ನು ತೃಪ್ತಗೊಳಿಸಿಕೊಳ್ಳಲು ಅವರು ಬಂದಿದಾರೆ. ಮೊನ್ನೆ ಮೊನ್ನೆಯಷ್ಟೆ ಈ ಊರಿನಿಂದ ವರ್ಗನಾಗಿದೆಯಂತೆ ಅವರಿಗೆ. ಇಂದು ನಾಳೆ ಹೊರಟುಬಿಡುವುದ ರಲ್ಲಿದಾರೆ ಅವರು. ನನ್ನನ್ನೂ ಜೊತೆಗೆ ಕರೆದೊಯ್ದು ನನಗೊಂದು ಪ್ರತ್ಯೇಕ ಮನೆ ಮಾಡಿಕೊಟ್ಟು ನನ್ನನ್ನು 'ಖಾಯಂ' ಆಗಿ ಮಡಗಿಕೊಳ್ಳುವ ಅಭಿಲಾಷೆ ಅವರದು. ಎಂಟು ದಿನಗಳ ಹಿಂದೆ ನಡೆದ ಘಟನೆಯ ವಿವರ ತಿಳಿಯುತ್ತಲೂ ನನಗೊಂದು ಪತ್ರ ಬರೆದು ತಮ್ಮ ಯೋಚನೆಯನ್ನು ಸ್ಪಷ್ಟವಾಗಿ ವ್ಯಕ್ತ ಗೊಳಿಸಿರಲಿಲ್ಲವೆ ಅವರು?

ಆ ಪತ್ರವನ್ನು ಒಲೆಗೆ ಬಿಸುಟು, ಉತ್ತರವೀಯದೆ ಸುಮ್ಮನಿದ್ದುಬಿಟ್ಟೆ. ರಾತ್ರೆ ಅಬ್ದುಲ್‌ಖಾನರೇ ಬಂದರು. ನಾನು ಬಾಗಿಲು ಮುಚ್ಚಿ ಮಲಗಿ ಕೊಂಡಿದ್ದೆ. ಅವರೆಷ್ಟು ಬಾರಿ ಕೂಗಿದರೂ ಬಾಗಿಲು ತೆಗೆಯಲಿಲ್ಲ. ನೆರೆಹೊರೆ ಯವರಿಗೆ ಎಚ್ಚರವಾದೀತೆಂದು ಅವರೇ ಹೆದರಿ ಹೊರಟುಹೋಗಿದ್ದರು. ಅನಂತರ

ಪ್ರತಿದಿನವೂ ರಾತ್ರಿ ತಪ್ಪದೆ ಬರುತ್ತಿದಾರೆ. ಬಹಳ ಗಟ್ಟಿಗನೆಂದೇ ಹೇಳಬೇಕು ಆಸಾಮಿ. ಎಂಟು ದಿನ ನಿರಾಸೆಯೇ ಎದುರಾದರೂ ಇನ್ನೂ ಆಸೆ ಬಿಟ್ಟಿಲ್ಲವಲ್ಲ ಅವರು!

"ಗಿರಿಜಾ, ಓ ಗಿರಿಜಾ...."

ಇಲ್ಲ ತಾಯಿಾ! ನಾನೇಳಲಾರೆ. ಬಾಗಿಲು ತೆರೆದು ಅವರನ್ನು ಬರಮಾಡಿ ಕೊಳ್ಳಲಾರೆ.

ಅವರ 'ಖಾಯಂ ಸೂಳೆ'ಯಾಗಿ ಬಾಳಲು ನನಗಿಷ್ಟವಿಲ್ಲ. ನಾನು ನಡೆಯಬಯಸುವ ಹಾದಿಯಲ್ಲ ಅದು.

ಒಂದು ಕಾಲವಿತ್ತು. ಆಗ ಅಬ್ದುಲ್‌ಖಾನರು ನನ್ನನ್ನು ಪೂರ್ಣವಾಗಿ ಗೆದ್ದುಕೊಂಡಿದ್ದರು. ಅವರ ಆಕೃತಿ ಕಣ್ಣಿಗೆ ಗೋಚರವಾಗುತ್ತಲೂ ನಾನು ಬೆಣ್ಣೆಯಂತೆ ಕರಗುತ್ತಿದ್ದೆ. ಅವರು ಬಂದು, ತಮ್ಮ ಉಕ್ಕಿನ ತೋಳುಗಳಲ್ಲಿ ನನ್ನನ್ನು ಹಿಡಿದು ತಬ್ಬಿಕೊಂಡಾಗ ಈ ಲೋಕವನ್ನೇ ನಾನು ಮರೆಯುತ್ತಿದ್ದೆ. ಒಂದು ದೇಹ ಇನ್ನೊಂದು ದೇಹಕ್ಕೆ ಕೊಡಬಲ್ಲ ಪರಮಾವಧಿ ಸುಖವೆಂಥ ದೆಂಬುದನ್ನು ಅವರ ಸಮಾಗಮದಲ್ಲಿ ನಾನು ಕಂಡುಕೊಂಡಿದ್ದೆ. ಹಿಂದಿನಕಾಲದ ರೋಮಾಂಚಕಾರಿ ವೀರಪುರುಷರ ಸಕಲ ವೈಶಿಷ್ಟ್ಯಗಳೂ ಅಬ್ದುಲ್‌ಖಾನರಲ್ಲಿವೆ ಯೆಂದು ನನಗೆನ್ನಿಸಿತ್ತು. ಫೌಜದಾರೀ ಸಮವಸ್ತ್ರ ಧರಿಸಿ, ಎಡ ಕಂಕುಳಲ್ಲಿ ಪುಟ್ಟ ಬೆತ್ತವನ್ನಿಟ್ಟುಕೊಂಡು, ತುಟಿಗಳ ಮೇಲೆ ತುಂಟನಗು ತುಳುಕಿಸುತ್ತಾ ಬಿಂಕದಿಂದ ನಡೆದು ಬರುವ ಅವರನ್ನು ಕಂಡೊಡನೆ ನನ್ನ ಎದೆ ಪುಲಕಗೊಳ್ಳು ತ್ತಿತ್ತು. ಅವರೊಬ್ಬರು ಬಾದಷಹಾ, ನಾನು ಅವರ ಗುಲಾಮಳಾದ ದಾಸಿ; ಅವರ ಜನಾನಖಾನಾದಲ್ಲಿನ ಸಾವಿರಾರು ಹೆಂಗಸರ ಪೈಕಿ ಅವರಿಗೆ ಹೆಚ್ಚು ಪ್ರಿಯಳಾದ ಸುಂದರಿ ನಾನು – ಎಂದೆನ್ನಿಸುತ್ತಿತ್ತು ನನಗೆ. ಅವರು ಮಾತ್ರ ನನ್ನನ್ನು ದಾಸಿಯೆಂದು ಕರೆಯುತ್ತಿರಲಿಲ್ಲ.

"ನೀನು ಸುಂದರಿ...."

"ನೀನು ನನ್ನ ನೂರ್‌ಜಹಾನ್...."

"ನೀನು ನನ್ನ ಲೈಲಾ...."

—ಎಂದೆಲ್ಲ ಹೇಳಿ ನಗುತ್ತಿದ್ದರವರು.

ಎಷ್ಟು ಪ್ರಿಯವಾಗಿತ್ತು, ಆಗ ನನಗೆ ಅಬ್ದುಲ್ ಖಾನರ ಸಹವಾಸ....

ಆದರೆ....

ಈಗ ಮಾತ್ರ ಅವರ ಬಗೆಗೂ ಬೇಸರು.

ಹಿಂದಿನಂತೆ ಅವರ ಧ್ವನಿಯನ್ನು ಕೇಳಿ ನನ್ನ ಎದೆಯಿಂದು ಪುಲಕಿತ ವಾಗುವುದಿಲ್ಲ. ಅವರ ಆಲಿಂಗನ, ಅವರ ಚುಂಬನ, ಅವರ ಮುದ್ದು ಮುದ್ದು ಮಾತು, ಅವರಿಂದ ಲಭಿಸುವ ಸುಖ – ಎಲ್ಲವೂ ಬೇಡವಾಗಿದೆ. ಅವರ ಹಣವೂ ಬೇಡವಾಗಿದೆ. ಅಷ್ಟೇಕೆ, ಅವರ ಯೋಚನೆಯೂ ಬೇಡವಾಗಿದೆ.

" ಗಿರಿಜಾ...."

ಇನ್ನೂ ಹೋಗಲಿಲ್ಲವಲ್ಲ ಈ ಪ್ರಾಣಿ ?

ಸರಿ. ನಿಂತುಕೊಂಡರೆ ನಿಂತುಕೊಳ್ಳಲಿ. ಕೂಗಿಕೊಂಡರೆ ಕೂಗಿಕೊಳ್ಳಲಿ. ಅದರಿಂದ ನನಗಾಗುವ ಹಾನಿಯೇನು ?

ನಾನು ಮಾತ್ರ ಎದ್ದು ಬಾಗಿಲು ತೆರೆಯಲಾರೆ.

ನನ್ನ ಹೃದಯದ ಕದವನ್ನು ಮುಚ್ಚಿಬಿಟ್ಟಿದೇನೆ. ಇನ್ನು ಮುಂದೆ ಅಲ್ಲಿ ಅಬ್ದುಲ್ ಖಾನರಿಗೆ ಪ್ರವೇಶ ದೊರೆಯಲಾರದು.

ಅವರೊಬ್ಬರಿಗೆ ಮಾತ್ರವಲ್ಲ, ಕಾಶಪ್ಪನಿಗೂ ಅಲ್ಲಿ ಇನ್ನು ಪ್ರವೇಶವಿಲ್ಲ.

'ಅವರಿಗೆ'?

'ಅವರು' ಮತ್ತು ನನ್ನ ಹೃದಯ ?

ಛೆ. ಈ ಯೋಚನೆಯೇ ಅಸಂಬದ್ಧವಾದುದು.

ನನ್ನ ಹೃದಯದಲ್ಲಿ 'ಅವರಿಗೆ' ಪ್ರವೇಶವಿದ್ದುದಾದರೂ ಎಂದು ?

ನಿಜ. 'ಅವರು' ನನ್ನನ್ನು ಅಗ್ನಿಸಾಕ್ಷಿಯಾಗಿ ವಿವಾಹವಾದರು, ನನ್ನ ಕೊರಳಿನಲ್ಲಿ ತಾಳಿ ಕಟ್ಟಿದರು, ನನ್ನ 'ಗಂಡ' ನೆನಿಸಿಕೊಂಡರು, ಹೆಂಡತಿಯಿಂದ ಪಡೆಯಬಹುದಾದ ಸುಖವನ್ನು ನನ್ನಿಂದ ಪಡೆದರು, ಅವರಿಂದ ಒಬ್ಬ ಮಗಳೂ ನನ್ನಲ್ಲಿ ಜನಿಸಿದಳು.

ನಿಜ. ಎಲ್ಲವೂ ನಿಜ.

ಲೋಕದ ದೃಷ್ಟಿಯಲ್ಲಿ ನಾನು 'ಅವರ' ಧರ್ಮಪತ್ನಿಯಾಗಿದ್ದುದೂ ನಿಜ.

"ಪತಿಯೇ ಪರದೈವ," ಎಂದು ಶಾಸ್ತ್ರಗಳು ಹೇಳಿವೆ, ಪುರಾಣಗಳು ಘೋಷಿಸಿವೆ, ಕಾವ್ಯಗಳು ಹಾಡಿವೆ.

'ಅವರು' ನನ್ನ ಪರದೈವವೆಂಬ ಭಾವನೆ ಮಾತ್ರ ನನ್ನಲ್ಲಿ ಒಂದು ಬಾರಿಯೂ ಬರಲಿಲ್ಲ. ಅವರ ಬಗೆಗೆ ನಿಷ್ಠೆಯಾಗಲಿ, ಭಕ್ತಿಯಾಗಲಿ ನನ್ನಲ್ಲಿ ಉತ್ಪನ್ನವಾಗಲಿಲ್ಲ.

ಧರ್ಮಪತ್ನಿಯಾದವಳು ಪತಿಯನ್ನು ಪ್ರೀತಿಸುವ ಹಾಗೆ ನಾನೆಂದೂ ಅವರನ್ನು ಪ್ರೀತಿಸಲಿಲ್ಲ, ನನ್ನ ಹೃದಯದ ಪೀಠದ ಮೇಲೆ ಅವರ ಮೂರ್ತಿಯನ್ನಿರಿಸಲಿಲ್ಲ, ಅವರನ್ನು ಆರಾಧಿಸಲಿಲ್ಲ.

ಇಲ್ಲ. ನಾನು ಅವರನ್ನು ಪ್ರೀತಿಸಲಿಲ್ಲ.

ನನ್ನ ದೇಹವೇನೋ ಅವರದಾಗಿತ್ತು, ಅಷ್ಟೆ. ಅವರ ದೇಹವೂ ನನ್ನದೇ ಎಂದು ನನಗೆಂದೂ ಅನಿಸಲಿಲ್ಲ. ಅದರ ಬಗೆಗೆ ನಾನು ಆಕರ್ಷಿತಳಾಗಲಿಲ್ಲ. ಅವರ ತುಟಿ, ನನ್ನ ತುಟಿಯನ್ನು ಮರ್ದಿಸಿದಾಗ, ಅವರ ಕೆನ್ನೆ ನನ್ನ ಕೆನ್ನೆಯನ್ನು ತಬ್ಬಿದಾಗ, ಅವರ ಬೆರಳು ನನ್ನ ಎದೆಯ ಮೇಲಾಡಿದಾಗ, ಅವರ ಕೂದಲು ನನ್ನ ಕೂದಲನ್ನು ಮುಟ್ಟಿದಾಗ ನಾನು ಪುಲಕಿತಳಾಗಲಿಲ್ಲ, ರೋಮಾಂಚಿತಳಾಗಲಿಲ್ಲ. ಅವರ ಎದೆಯ ಬಡಿತಕ್ಕೆ ನನ್ನ ಎದೆಯೂ ಮಾರ್ನುಡಿಯಲಿಲ್ಲ.

ಇಲ್ಲ. ನಾನು ಅವರನ್ನೆಂದೂ ಒಲಿಯಲಿಲ್ಲ.

ಮದುವೆಯಾದಾಗಲೂ ಅಷ್ಟೆ, ಆದಮೇಲೂ ಅಷ್ಟೆ, ಈಗಲೂ ಅಷ್ಟೆ.

ಇಪ್ಪತ್ತೆರಡು ಇಪ್ಪತ್ಮೂರು ವರ್ಷಗಳ ನಿಕಟಸಹವಾಸದ ತರುವಾಯವೂ 'ಅವರು' ನನಗಿನ್ನೂ ಅಪರಿಚಿತರಂತೆಯೇ ಕಾಣುತ್ತಾರೆ.

'ಅವರು' ಮತ್ತು ನನ್ನ ಹೃದಯ?

ಛೆ. ತೀರಾ ಅಸಂಬದ್ಧ ವಿಚಾರ....

೨

ನಾನು ಕಮಲನೇತ್ರೆ.

ನನ್ನ ಕಣ್ಣು ಮುಚ್ಚಿಕೊಳ್ಳುವಾಗ, ಮತ್ತೆ ತೆರೆಯುವಾಗ ಕಮಲ ಮುಚ್ಚಿಕೊಂಡು ಬಿಚ್ಚಿಕೊಂಡ ಹಾಗೇ ಕಾಣುತ್ತದೆ. ಈ ಕಾಡಿಗೆಗಣ್ಣುಗಳ ಅನುಪಮ ಸೌಂದರ್ಯವನ್ನು ಕಂಡು ನನ್ನಷ್ಟಕ್ಕೆ ನಾನೇ ಮುಗ್ಧಳಾಗುತ್ತೇನೆ.

ನನ್ನ ಹುಬ್ಬು ಕಾಮನಬಿಲ್ಲಿನಂತೆ.

ನನ್ನ ಮೂಗು ಮಲ್ಲಿಗೆಯ ಸಳಿನಂತೆ.

ನನ್ನ ತುಟಿ ಗುಲಾಬಿ ಪಕಳೆಯಂತೆ.

ನನ್ನ ದಂತಪಂಕ್ತಿ ಕಲ್ಲುಸಕ್ಕರೆಯಂತೆ.

ನನ್ನ ಮೈ ಬೆಣ್ಣೆಯ ಮುದ್ದೆಯಂತೆ.

ನನ್ನ ಕೇಶರಾಶಿ ರೇಶಿಮೆ ಲಡಿಯಂತೆ.

ನನ್ನ ತೋಳು, ನನ್ನ ಎದೆ, ನನ್ನ ಕೈ, ನನ್ನ ಕಾಲು, ನನ್ನ ಕಟಿ....

ನಾನು ಚೆಲುವೆ. ನಾನು ಲಾವಣ್ಯವತಿ. ನಾನು ರಸವಂತಿ.

ನನ್ನ ಕಣ್ಣಿನಲ್ಲಿ ಕಾವ್ಯವುಂಟು. ನನ್ನ ಮಾತಿನಲ್ಲಿ ಸಂಗೀತವುಂಟು.

ನಾನು ಗಿರಿಜಾ. ನಾನು ಮೋಹನಾಂಗಿ.

ಓರೆಕೋರೆ ನಗರದ ಸುಂದರ ಸ್ತ್ರೀಯರಲ್ಲೆಲ್ಲ ಮೊದಲನೆಯ ನಂಬರು ನನ್ನದು.

ನನ್ನ ಚೆಲುವಿಕೆಯನ್ನು ಮೀರಿಸಬಲ್ಲ ಚೆಲುವಿಕೆ ಇನ್ನಾರಿಗೂ ಇಲ್ಲ ಈ ನಗರದಲ್ಲಿ.

ಅದ್ವಿತೀಯ ಸುಂದರಿಯೆಂದು ಹೆಸರು ಪಡೆದ ಈ ಗಿರಿಜೆಗೂ ಇಂದು ಸುಖವಿಲ್ಲ, ನೆಮ್ಮದಿಯಿಲ್ಲ.

ಸಾಕಿನ್ನು ಈ ಸೌಂದರ್ಯದ ಹೆಮ್ಮೆ. ಸಾಕಿನ್ನು ಈ ದೇಹದ ಹೆಮ್ಮೆ–
ನಾನಿನ್ನು ಬದುಕಬೇಕಾದುದು ಯಾರಿಗಾಗಿ?
ಯಾವ ಸುಖಕ್ಕಾಗಿ?

೩

ಇಲ್ಲಿಗೆ ಸಾಕು ಈ ಭಂಡಜೀವನ.

ಇನ್ನು ಬದುಕುವ ಬಯಕೆ ನನಗಿಲ್ಲ.

ನನ್ನ ಬಗೆಗೆ ನನಗೇ ಜುಗುಪ್ಸೆಯಾಗಿದೆ. ಇನ್ನು ಎಷ್ಟು ದಿನ ಕೊರಗುವುದು ಹೀಗೆಯೇ? ಎಷ್ಟು ದಿನ ನರಳುವುದು ಹೀಗೆಯೆ?

ಈ ಘೋರ ಯಾತನೆಯನ್ನು ನಾನಿನ್ನು ಸಹಿಸಲಾರೆ.

ಇಂದೇ ಕೊನೆಗಾಣಲಿ ಈ ಜೀವನ.

................

ನನ್ನ ಮಕ್ಕಳು....ನನ್ನ ಕುಮಾರ....ನನ್ನ ವಿಮಲಾ....

ಅವರನ್ನೆಲ್ಲ ಬಿಟ್ಟು ಸಾಯುವುದೇ?

ಹೇಗೆ ಸಾಯಲಿ? ಅಯ್ಯೋ, ಹೇಗೆ ಸಾಯಲಿ?

................

ಇಲ್ಲ. ಇಲ್ಲ. ನಾನಿನ್ನು ದುರ್ಬಲಳಾಗುವುದಿಲ್ಲ.

ಮನಸ್ಸು ಚಂಚಲವಾಗಗೊಡುವುದಿಲ್ಲ.

ನಾನಿನ್ನು ಸಾಯಲೇ ಬೇಕು....ಸಾಯಲೇ ಬೇಕು.

ಬೆಳಗಿನಿಂದ ಆರಂಭವಾಗಿದೆ ಈ ಹೊಯ್ದಾಟ.

ಇಂದು ನಾನು ಸ್ನಾನ ಮಾಡಲಿಲ್ಲ, ಬಟ್ಟೆ ಬದಲಿಸಲಿಲ್ಲ, ಕೂದಲು ಬಾಚಿಕೊಳ್ಳಲಿಲ್ಲ, ಕುಂಕುಮ ಇಟ್ಟುಕೊಳ್ಳಲಿಲ್ಲ, ಅಲಂಕಾರ ಮಾಡಿಕೊಳ್ಳಲಿಲ್ಲ.

ಆದರೂ ಎದ್ದು ಕಾಣುತ್ತಿದೆಯಲ್ಲ ನನ್ನ ಸೌಂದರ್ಯ!

ಇಂಥ ಸೌಂದರ್ಯವನ್ನು ಸಾವಿನ ಕರಾಳಬಾಯಿಗೆ ಬಲಿಗೊಡುವುದೇ?
ಹೊರಗಡೆ ಬಿಸಿಲು ಬಲಿತಿದೆ. ಮಧ್ಯಾಹ್ನ ಮೂರು ಗಂಟೆ.
ಕೊಠಡಿಯಲ್ಲಿ ಸಹಿಸಲಸಾಧ್ಯವಾದ ಸೆಕೆ.
ನನ್ನ ಮನಸ್ಸಿನಲ್ಲಿಯೂ ಸಹಿಸಲಸಾಧ್ಯವಾದ ವೆತೆ.
ಸಾಯಬೇಕು....ನಾನು ಸಾಯಬೇಕು.
ಬೇರೆ ದಾರಿಯಿಲ್ಲ.
ಇಲ್ಲವೆ? ಇನ್ನಾವ ದಾರಿಯೂ ಇಲ್ಲವೆ?
ಮಲಕಾಜಿ....ನನ್ನ ಪ್ರೀತಿಯ ಮಲಕಾಜಿ....
ನೀನಾದರೂ ಧಾವಿಸಿ ಬಂದು ಪಾರುಮಾಡಬಾರದೇ ನನ್ನನ್ನು?
ಮಲಕಾಜಿ....ನನ್ನ ತಂದೆ....ನನ್ನ ತಾಯಿ....
ನನ್ನ ಬಾಲ್ಯ....ನನ್ನ ತವರೂರು....ಅಲ್ಲಿನ ಘಟನೆಗಳು....
ಸಾವಿನ ಬಾಗಿಲಿನೆದುರಿಗೆ ನಿಂತುಕೊಂಡಿರುವ ಈ ಗಳಿಗೆಯಲ್ಲೇ ಏಕೆ ನೆನಪಾಗುತ್ತಿವೆ ಈ ಸಂಗತಿಗಳೆಲ್ಲ?

## ೪

ಓ ನನ್ನ ಪ್ರಿಯಸಖಿ, ಕನ್ನಡಿಯೆ, ಕೇಳು ನನ್ನ ಕಥೆಯನ್ನು.

ನನ್ನ ಅಂತರಂಗದ ಏಕಮಾತ್ರ ಗೆಳತಿಯಾದ ನಿನ್ನೆದುರಿಗಲ್ಲದೆ ಇನ್ನಾರ ಎದುರಿಗೂ ನನ್ನ ಕಥೆ ಹೇಳಲು ಇಷ್ಟವಿಲ್ಲ ನನಗೆ.

ಇಪ್ಪತ್ತು ವರ್ಷಗಳ ಈಚೆಗಿನ ಕಥೆಯನ್ನು ನೀನು ಬಲ್ಲೆ. ಅದರ ಹಿಂದಿನದನ್ನು ಮಾತ್ರ ನೀನು ಅರಿಯೆ.

ನಾನು ಹುಟ್ಟಿದುದು ಯಾವ ಊರಿನಲ್ಲಿ, ಬಲ್ಲೆಯಾ ಪ್ರಿಯಸಖಿ?

ಇಲ್ಲವೆ? ಕೇಳು ಹಾಗಾದರೆ.

ನಾನು ಹುಟ್ಟಿದುದು ಶಿವಪುರದಲ್ಲಿ. ಅದು ಕಳ್ಳೀಕಾಯಿ ಜಿಲ್ಲೆಯಲ್ಲಿದೆ. ಸಣ್ಣ ಊರು. ಸಾವಿರ ಮನೆಗಳಿರಬಹುದು, ಅಷ್ಟೆ. ಓರೆಕೋರೆ ನಗರದಷ್ಟು ಮನೆಗಳಾಗಲಿ ಜನಗಳಾಗಲಿ ಅಲ್ಲಿ ಇಲ್ಲ. ಇಲ್ಲಿಯಷ್ಟು ಶ್ರೀಮಂತರೂ ಅಲ್ಲಿ ಇಲ್ಲ. ಊರಿಗೆಲ್ಲ ಮೂರು ನಾಲ್ಕು ಮಂದಿ 'ಸಾಹುಕಾರ'ರಿರಬಹುದು, ಅಷ್ಟೆ. ಇನ್ನುಳಿದವರೆಲ್ಲ ಬಡವರು – ನನ್ನ ತಂದೆಯ ಹಾಗೇ.

ನಾನು ಹುಟ್ಟಿದುದು ಶಿವಪುರದಲ್ಲಿಯಾದರೂ ಅದೇನೂ ನಮ್ಮ ಮೂಲ ಸ್ಥಳವಲ್ಲ. ಅಲ್ಲಿಂದ ಇಪ್ಪತ್ತು ಹರದಾರಿಗಳ ಮೇಲಿರುವ ಉಗ್ರಪುರ ನಮ್ಮ ಊರು. ಅಲ್ಲಿ ನಮ್ಮ ತಂದೆಯ ಮನೆಯೂ ಇದೆ. ಹಳೆಯ ಕಾಲದ ಮನೆ. ಗೋಡೆಗಳೆಲ್ಲಾ ಬಿದ್ದುಹೋಗಿ ಬರಿಯ ನೆಲ ಮಾತ್ರ ಉಳಿದಿದೆ, ಅಷ್ಟೆ. ಅಷ್ಟು ನೆಲವನ್ನು ಹೊರತುಪಡಿಸಿದರೆ ನಮ್ಮ ತಂದೆಗೆ ಬೇರೆ ಆಸ್ತಿಯೇನೂ ಇರಲಿಲ್ಲ.

ನಮ್ಮದು ನೇಕಾರರ ಮನೆತನವೆಂಬ ವಿಚಾರ ನೀನು ಬಲ್ಲೆ. ನಮ್ಮ

ತಂದೆಯೂ ನೇಕಾರಿಕೆಯಿಂದಲೇ ಜೀವನ ಸಾಗಿಸುತ್ತಿದ್ದ. ಹಲವು ವರ್ಷಗಳ ಹಿಂದೆ 'ಡೌಗೀಬರ'ದಲ್ಲಿ ಅವನ ಸಮೀಪದ ಸಂಬಂಧಿಕರೆಲ್ಲರೂ ತೀರಿ ಹೋಗಿದ್ದರು. ಅವನ ಅಕ್ಕನ ಮಗಳೊಬ್ಬಳು – ಅಂದರೆ ನನ್ನ ತಾಯಿ – ಆಗ ಎರಡು ವರ್ಷದ ಕೂಸಾಗಿದ್ದಳಂತೆ. ಅವಳ ತಂದೆತಾಯಿಗಳೂ ತೀರಿಹೋಗಿದ್ದ ರಾದುದರಿಂದ ನನ್ನ ತಂದೆಯೇ ಅವಳನ್ನು ಸಾಕಿ ಸಲಹಬೇಕಾಗಿ ಬಂದಿತ್ತು. ಎರಡುವರ್ಷಗಳ ಆ ಮಗುವನ್ನು ಕಟ್ಟಿಕೊಂಡು ಉಗ್ರಪುರವನ್ನು ಬಿಟ್ಟು ಶಿವಪುರಕ್ಕೆ ಗುಳೇ ಹೋಗಿ ದೇವಪ್ಪಸಾಹುಕಾರರ ಆಶ್ರಯದಲ್ಲಿ ನಿಂತನಂತೆ ನಮ್ಮ ತಂದೆ.

ಶಿವಪುರದಲ್ಲಿನ ಮೂರು ನಾಲ್ಕು ಜನ ಶ್ರೀಮಂತರಲ್ಲಿ ದೇವಪ್ಪನವರೂ ಒಬ್ಬರು. ಅವರೂ ನಮ್ಮ ಜಾತಿಯವರೇ. ನೇಕಾರರೇ. ಆದರೆ, ನಮ್ಮ ಹಾಗೆ ಅವರು ತಾವೇ ಸ್ವತಃ ಮಗ್ಗದ ಮೇಲೆ ದುಡಿಯುತ್ತಿರಲಿಲ್ಲ. ಎಂಟು ಹತ್ತು ಮಗ್ಗಗಳನ್ನಿಟ್ಟು, ಆಳುಗಳ ಮೂಲಕ ಕೆಲಸ ಮಾಡಿಸುತ್ತಿದ್ದರು. ರೇಶಿಮೆ, ಜರತಾರಿ ಸೀರೆ – ಖಣಗಳನ್ನು ಮಾತ್ರವೇ ಅವರು ತಯಾರಿಸುತ್ತಿದ್ದುದು. ಅವರ ಪೂರ್ವಜರ ಕಾಲದಿಂದಲೂ ಆದೇ ವ್ಯವಸಾಯ ನಡೆದು ಬಂದಿತ್ತು. ದಿನದಿಂದ ದಿನಕ್ಕೆ ಧನಿಕರಾಗುತ್ತಾ ಬಂದಿದ್ದರು ದೇವಪ್ಪನವರು.

ಅವರು ಅವರ ಹೆಂಡತಿ ಸೀತಮ್ಮ ಇಬ್ಬರೂ ಒಳ್ಳೆಯವರೇ ಎಂದು ಹೇಳಬೇಕು. ಬರಗಾಲದ ಹೊಡೆತಕ್ಕೆ ಸಿಕ್ಕು, ಸಂಬಂಧಿಕರನ್ನೆಲ್ಲ ಕಳೆದು ಕೊಂಡು ಅನಾಥ ಬಾಲಿಕೆಯೊಬ್ಬಳನ್ನು ಕಟ್ಟಿಕೊಂಡು ಬಂದ ನನ್ನ ತಂದೆಯನ್ನು ಕಂಡು ಅವರಿಗೆ ಕನಿಕರ ಬಂದಿರಲು ಸಾಕು. ತಮ್ಮ ತೋಟದ ಮನೆಯ ಮೂಲೆಯೊಂದರಲ್ಲಿ ಅಪ್ಪ ವಾಸವಾಗಿರಲು ಸ್ಥಳಮಾಡಿಕೊಟ್ಟರು.

ತಾನೇ ತಂದೆಯಾಗಿ, ತಾಯಿಯಾಗಿ ಆ ಮಗುವನ್ನು ಜೋಪಾನ ಮಾಡಿದ ನನ್ನ ತಂದೆ. ಬೆಳಿಗ್ಗೆ ಎದ್ದು ತಾನೇ ಅಡುಗೆ ಮಾಡಿ, ಮಗುವಿಗೆ ಊಟಮಾಡಿಸಿ ತಾನೂ ಉಂಡು, ಅವಳನ್ನು ಹೆಗಲ ಮೇಲೆ ಕೂಡಿಸಿಕೊಂಡು ನೇಯ್ಗೆಯ ಮನೆಗೆ ಹೋಗುತ್ತಿದ್ದನಂತೆ. ಅವನು ಮಗ್ಗದ ಮೇಲೆ ಕೆಲಸ ಮಾಡುತ್ತ ಕುಳಿತಿದ್ದಾಗ ಅವಳು ಅಂಗಳದಲ್ಲಿ ಆಡುತ್ತಿದ್ದಳಂತೆ. ನಿದ್ದೆ

ಬಂದರೆ, ತನ್ನ ಮಗ್ಗದ ಹತ್ತಿರವೇ ಅವಳನ್ನು ಮಲಗಿಸಿ ದೋತರ ಹೊದ್ದಿಸುತ್ತಿದ್ದನಂತೆ. ಅವನು ಚಪ್ಪರಿಸಿದ ಹಾಗೇ ಅವಳು ನಿದ್ದೆ ಹೋಗುತ್ತಿದ್ದಳಂತೆ. ಸಾಯಂಕಾಲ ಕೆಲಸ ಮುಗಿದ ಬಳಿಕ ಮತ್ತೆ ಅವಳನ್ನು ಹೆಗಲ ಮೇಲೆ ಕೂಡಿಸಿಕೊಂಡು ಮನೆಗೆ ಬರುವುದು, ಅಡುಗೆ ಮಾಡಿ, ಅವಳನ್ನು ಜೊತೆಗೆ ಕೂಡಿಸಿಕೊಂಡು ಊಟ ಮಾಡುವುದು, ಅವಳಿಗೆ ನಿದ್ದೆ ಬರುವವರೆಗೂ ಜೋ ಜೋ ಹಾಡುತ್ತಿರುವುದು ಅಪ್ಪನ ದಿನಚರಿಯಾಗಿತ್ತು.

ಅವಳಿಗೆ ಎಣ್ಣೆ ಹಚ್ಚಿ ಎರೆಯುವುದು, ಅವಳ ಲಂಗ ಒಗೆಯುವುದು, ತಲೆ ಬಾಚುವುದು, ಅವಳು ಅತ್ತರೆ ಸಂತೈಸುವುದು, ಚಂಡಿ ಹಿಡಿದರೆ ಸಮಾಧಾನ ಮಾಡುವುದು – ಇವೇ ಮೊದಲಾದ ಕೆಲಸಗಳೆಲ್ಲವೂ ಅಪ್ಪನ ಪಾಲಿಗೇ ಬಂದುವು. ಸ್ವಲ್ಪವೂ ಬೇಸರಪಟ್ಟುಕೊಳ್ಳದೆ ಅವನು ಅದನ್ನೆಲ್ಲಾ ಮಾಡುತ್ತಿದ್ದ.

“ ಏನಪಾ, ಹೆಂಡತಿಯನ್ನು ಮಗಳ ಹಾಂಗ ಬೆಳಸಲಿಕ್ಕೆ ಹತ್ತೀಯಲ್ಲ!” ಎಂದು ಅನೇಕರು ತಮಾಷೆ ಮಾಡುತ್ತಿದ್ದರಂತೆ.

ಆ ಮಾತಿನಿಂದ ಅಪ್ಪನಿಗೆ ಕೋಪ ಬರುತ್ತಿರಲಿಲ್ಲ.

“ ಪಾಪ, ಪರದೇಶಿ ಹುಡುಗಿ. ನನ್ನ ಬಿಟ್ಟರೆ ಯಾರಿದಾರೆ ಇವಳಿಗೆ? ನಾನು ಮಾಡದಿದ್ದರೆ ಇನ್ಯಾರು ಮಾಡಬೇಕು?” ಎಂದು ಉತ್ತರವಿತ್ತು ಅವನು ಸುಮ್ಮನಾಗುತ್ತಿದ್ದ.

“ ಎಲ್ಲರೂ ದೊಡ್ಡದಾಗಿ ಬೆಳೆದ ಹೆಣ್ಣು ತಂದು ಹೆಂಡತಿಯಾಗಿ ಮಾಡಿಕೊಂಡರೆ ನೀನು ಕೂಸಾಗಿದ್ದವಳನ್ನು ತಂದು ದೊಡ್ಡವಳಾಗಿ ಮಾಡುತ್ತಿದ್ದೀಯಪಾ!” ಎಂದು ಹೇಳಿ ನಗುತ್ತಿದ್ದರು ಜನರು.

ಅವರ ನಗುವಿಗೆ ತನ್ನ ನಗುವನ್ನೂ ಸೇರಿಸಿ ತನ್ನ ಸೋದರ ಸೊಸೆಯನ್ನು ಮೊದಲಿಗಿಂತಲೂ ಹೆಚ್ಚಿನ ಅಕ್ಕರತೆಯಿಂದ ನೋಡಿಕೊಳ್ಳುತ್ತಿದ್ದ ಅಪ್ಪ.

ಸಾಹುಕಾರ ದೇವಪ್ಪನವರೇನೋ ಒಳ್ಳೆಯವರೇ ಆಗಿದ್ದರಾದರೂ ಕೂಲಿಯಾಳುಗಳಿಗೆ ಅವರು ಕೊಡುತ್ತಿದ್ದ ದಿನಗೂಲಿ ಮಾತ್ರ ಬಹಳ ಕಡಿಮೆಯೇ ಆಗಿರುತ್ತಿತ್ತು. ದಿನವಿಡೀ ಹಳ್ಳದಲ್ಲಿ ಕಾಲು ಬಿಟ್ಟುಕೊಂಡು ಎಂಟು ಹತ್ತು ಗಂಟೆಗಳ ಕಾಲ ಬೆವರಿಳಿಸಿ ದುಡಿದರೂ ಅಪ್ಪನಿಗೆ ಸಿಗುತ್ತಿದ್ದುದು ಬರೀ

ಮೂರು ಆಣೆ. ಈ ಮೂರೇ ಮೂರು ಆಣೆಗಳಲ್ಲಿ ಅಪ್ಪ ಮತ್ತು ಅವ್ವ ಇಬ್ಬರ ಹೊಟ್ಟೆ ಬಟ್ಟೆ ನಡೆಯಬೇಕು.

ಮೂರು ಆಣೆಗಳಲ್ಲಿ ಇಬ್ಬರ ಹೊಟ್ಟೆ ತುಂಬುವುದು ಹೇಗೆ ಸಾಧ್ಯ? ಎಂದು ನೀನು ವಿಸ್ಮಯಪಟ್ಟುಕೊಳ್ಳಬಹುದೇನೊ. ನನಗೂ ಆಗಾಗ ಆ ಬಗೆಗೆ ಆಶ್ಚರ್ಯವೆನ್ನಿಸದಿರುವುದಿಲ್ಲ. ಇಂದಿನ ದಿನಗಳಲ್ಲಿ ಮೂರು ಆಣೆ ಚಹಕ್ಕೂ ಸಾಲದು, ಅಲ್ಲವೆ? ಆದರೆ, ಅಂದಿನ ದಿನಗಳಲ್ಲಿ ಕೂಲಿಯಾಳುಗಳು ರೊಟ್ಟಿ ಅಂಬಲಿ ಉಂಡು ಜೀವ ಹಿಡಿದುಕೊಂಡಿರಲು ಮೂರು ಆಣೆ ಸಾಕಾಗಿತ್ತು. ಸಾಹುಕಾರರೂ ಆ ಲೆಕ್ಕ ಹಾಕಿಕೊಂಡೇ ಅಷ್ಟು ಕೂಲಿ ಕೊಡುತ್ತಿದ್ದರು. ಕೂಲಿಯಾಳುಗಳು ಕಾಸು ಉಳಿಸುವಂತೆಯೂ ಆಗಬಾರದು, ಹೊಟ್ಟೆಗಿಲ್ಲದೆ ಉಪವಾಸ ಸಾಯುವಂತೆಯೂ ಆಗಬಾರದು. ಅವರು ಸತ್ತು ಹೋದರೆ ಅಗ್ಗದ ಕೂಲಿಯಾಳು ಹುಡುಕುವ ಕಷ್ಟ ಬರುತ್ತಿತ್ತು, ಅಲ್ಲವೆ?

ಹಾಗೆ, ಸಾಹುಕಾರರ ಆಳುಗಳಾಗಿ ದುಡಿಯುತ್ತಿದ್ದವರೇ ಹೆಚ್ಚು ಮಂದಿ ಶಿವಪುರದಲ್ಲಿ. ಸ್ವತಂತ್ರವಾಗಿ, ಮನೆಯಲ್ಲಿ ಮಗ್ಗ ಇಟ್ಟುಕೊಂಡು ನೂಲಿನ ಸೀರೆ – ಕುಬುಸ ನೇಯುವ ಸಂಸಾರಗಳೂ ಹಲವು ಇದ್ದುವು. ಆದರೆ ಪಾಪ, ಅವರಿಗೆ ಅಂಥ್ಥ ಲಾಭವೇನೂ ಇರಲಿಲ್ಲ. ವ್ಯಾಪಾರವೆಲ್ಲಾ ಇದ್ದುದು ಸಾಹುಕಾರರ ಕೈಯಲ್ಲಿ. ಪೇಟೆಯ ಧಾರಣೆಯನ್ನು ಗೊತ್ತುಪಡಿಸುವವರೂ ಈ ಸಾಹುಕಾರರೇ. ಅವರು ಕೇಳಿದ ಬೆಲೆಗೆ ಮಾಲು ಕೊಟ್ಟು, ಅವರು ಕೊಟ್ಟಷ್ಟು ಹಣ ತೆಗೆದುಕೊಂಡು ತೆಪ್ಪಗೆ ಬರಬೇಕಾಗುತ್ತಿತ್ತು ಬಡ ನೇಕಾರರು. ಒಂದು ವಾರವಿಡೀ ಕಷ್ಟಪಟ್ಟು ದುಡಿದು ತಯಾರಿಸಿದ ಸೀರೆಗೆ ಒಂದು ರೂಪಾಯಿಗಿಂತ ಹೆಚ್ಚು ಬೆಲೆ ದೊರೆಯುತ್ತಿರಲಿಲ್ಲ. ಒಂದೊಂದು ಬಾರಿ ಅಷ್ಟು ಹಣವೂ ಸಿಕ್ಕುತ್ತಿರಲಿಲ್ಲ. ಸೀರೆಗೆ ಹಾಕಿದ ನೂಲಿನ ಬೆಲೆಯೂ ದಕ್ಕದೆ ಹಾನಿ ಮಾಡಿಕೊಂಡು ದೈವವನ್ನು ಹಳಿಯುತ್ತಾ ಕಣ್ಣೀರು ಸುರಿಸುತ್ತಾ ಕೂಡಬೇಕಾಗುತ್ತಿತ್ತು ನೇಕಾರರು. ಅಂತೆಯೇ, ಈ ತಾಪತ್ರಯವೇ ಬೇಡವೆಂದುಕೊಂಡು ಸಾಹುಕಾರರ ಕೂಲಿಯಾಳುಗಳಾಗಿ ಮೂರಾಣೆಗಳ ದಿನಗೂಲಿ ಪಡೆಯಲು ಬಯಸುತ್ತಿದ್ದವರೇ ಹೆಚ್ಚು ಮಂದಿ.

ಹಾಗೆ ಸಾಗಿತ್ತು ನೋಡು ಶೋಷಣೆ, ಪ್ರಿಯಸಖಿ!

ದಿನದ ಹತ್ತು ತಾಸಿನ ಕೆಲಸವೆಂದರೆ ಅರ್ಧದಷ್ಟು ಸೀರೆಯ ನೇಯ್ಗೆ. ರೇಶಿಮೆ ಸೀರೆ ನೇಯುವುದೇನೂ ಸಾಮಾನ್ಯ ಕೆಲಸವಲ್ಲ. ಮೈಯೆಲ್ಲಾ ಕಣ್ಣಾಗಿ ಲಾಳಿ ಓಡಿಸಬೇಕಾಗುತ್ತದೆ. ಒಂದು ಎಳೆ ಹರಿಯಿತೆಂದರೆ ಸಾಹುಕಾರರ ಬೈಗಳು ಗಳಿಗಾರಂಭ. ಹರಿದ ಎಳೆಯನ್ನು ಮತ್ತೆ ಹೊಂದಿಸಿಕೊಳ್ಳಲು ಅರ್ಧಗಂಟೆ ಶ್ರಮಿಸಬೇಕು. ಒಂದು ರೇಶಿಮೆ ಸೀರೆಗೆ ಕನಿಷ್ಠ ಪಕ್ಷ ಮೂವತ್ತು ರೂಪಾಯಿ ಗಳವರೆಗೂ ಬೆಲೆಯಾಗುತ್ತಿತ್ತು ಆ ಕಾಲದಲ್ಲಿ. ಆ ಸೀರೆಗೆ ಉಪಯೋಗಿಸುವ ರೇಶಿಮೆಗೆ ಐದಾರು ರೂಪಾಯಿ ಹೋಗುತ್ತಿತ್ತು. ಉಳಿದ ಇಪ್ಪತ್ತೈದು ರೂಪಾಯಿ ನಿವ್ವಳ ಲಾಭ ಸಾಹುಕಾರರಿಗೆ. ಎರಡು ಮೂರು ದಿನ ಕಷ್ಟಪಟ್ಟು ದುಡಿದು ಆ ಸೀರೆಯನ್ನು ತಯಾರಿಸುವ ಕೂಲಿಕಾರನಿಗೆ ಮಾತ್ರ ಸಾಹುಕಾರರು ಕೊಡುತ್ತಿದ್ದುದು ದಿನವೊಂದಕ್ಕೆ ಮೂರಾಣೆ. ಅಂದರೆ – ಮೂರುದಿನಗಳಿಗೆ ಒಂಭತ್ತಾಣೆಯಾಯಿತಷ್ಟೆ. ನೋಡಿದೆಯಾ ಪ್ರಿಯಸಖಿ, ಶ್ರಮ ಯಾರದ್ದು? ಅದರ ಪ್ರತಿಫಲ ಯಾರಿಗೆ? ಬೇರೆಯವರ ಶ್ರಮದಿಂದ ಬಂದ ಹಣವನ್ನು ಹೀಗೆ ಅನ್ಯಾಯವಾಗಿ ಪೆಟ್ಟಿಗೆಗೆ ತುಂಬಿಯೇ ಸಾಹುಕಾರರು 'ಸಾಹುಕಾರ' ರಾಗುತ್ತಾರೆ! ಅವರನ್ನು ಸಾಹುಕಾರರನ್ನಾಗಿ ಮಾಡಲು ಬೆವರಿಳಿಸುವ ನನ್ನ ತಂದೆಯಂಥವರು ಮಾತ್ರ ಕೊನೆಯವರೆಗೂ ಬಡವರಾಗಿಯೇ ಉಳಿಯುತ್ತಾರೆ.

ಆಗಲೂ ಬಡವನಾಗಿದ್ದ ನನ್ನ ತಂದೆ. ಈಗಲೂ ಅವನು ಬಡವನೇ.

ಅವನು ಹಾಗೆ ದರಿದ್ರನಾಗಿಯೇ ಉಳಿಯಲು ಕಾರಣವೇನೆಂಬುದು ನನಗೆ ಗೊತ್ತಾಗಿದೆ – ಎಷ್ಟೋ ದಿನಗಳ ಹಿಂದೆಯೇ.

ಅವನಿಗೆ ಮಾತ್ರ ಅದು ಈಗಲೂ ಗೊತ್ತಾಗಿಲ್ಲ. ಆಗಲೂ ಗೊತ್ತಿರಲಿಲ್ಲ.

ಪಾಪ! ಅವನಿಗೆ ಇದೆಲ್ಲವೂ ಗೊತ್ತಾಗುವುದಾದರೂ ಹೇಗೆ, ಹೇಳು. ಅವನೇನು ಶಾಲೆಯಲ್ಲಿ ಓದಿದವನಲ್ಲ. ಪುಸ್ತಕ ಗಿಸ್ತಕ ಓದಿದವನಲ್ಲ. ಓದಿದವರ ತಿಳಿದವರ ಒಡನಾಟವೂ ಅವನಿಗಿಲ್ಲ. ವಯಸ್ಸಿನ ಹದಿನೈದನೆಯ ವರ್ಷದಲ್ಲಿಯೆ ಮನೆತನದ ಭಾರ ಬಿತ್ತು ಅವನ ಮೇಲೆ. ಅನಾಥೆಯಾಗಿದ್ದ ನನ್ನ ತಾಯಿಯನ್ನು ಸಲಹುವ ಹೊಣೆಗಾರಿಕೆಯೂ ಅವನದಾಯಿತು. ಅಂದಿನಿಂದ ಹೊಟ್ಟೆ ತುಂಬಿಸಿ

ಕೊಳ್ಳುವುದೊಂದೇ ಅವನ ಏಕಮಾತ್ರ ಉದ್ದೇಶವಾಯಿತು. ಬೇರೆ ವಿಚಾರಗಳನ್ನು ಕುರಿತು ಯೋಚಿಸಲು ಅವನಿಗೆ ಸಮಯವೂ ಸಿಕ್ಕಲಿಲ್ಲ.

ಬೆಳಗಿನಿಂದ ಸಂಜೆಯವರೆಗೆ ಮಗ್ಗದ ಜೊತೆಗೆ ಸೆಣಸಾಟ.

ರಾತ್ರಿ ಮನೆಗೆ ಬರುವ ವೇಳೆಗೇ ಅವನು ಹೆಣದ ಹಾಗಾಗಿರುತ್ತಿದ್ದ.

ಹೇಗೋ ಅಡುಗೆ ಮಾಡಿ, ನನ್ನ ತಾಯಿಗೆ ಊಟಕ್ಕಿಟ್ಟು, ತಾನೂ ಉಂಡು ಹಾಸಿಗೆಯ ಮೇಲೆ ಬಿದ್ದುಕೊಂಡನೆಂದರೆ ಬೆಳಗಾಗುವವರೆಗೂ ಪ್ರಜ್ಞೆಯಿರುತ್ತಿರಲಿಲ್ಲ ಅವನ ಮೈಯಲ್ಲಿ.

ಮತ್ತೆ ಮಗ್ಗ, ಮತ್ತೆ ದುಡಿತ, ಮತ್ತೆ ಮನೆ.

ಅಮ್ಮಯ್ಯಾ! ಆ ಘೋರ ದುಡಿತದ ಜ್ಞಾಪಕ ಬಂದರೆ ಈಗಲೂ ನನ್ನ ಮೈಮೇಲೆ ಮುಳ್ಳುಗಳೇಳುತ್ತವೆ. ಹಾಗೆ ದುಡಿಯುವ ಪ್ರಸಂಗ ನನಗೂ ಬಂದಿದ್ದಲ್ಲಿ ನಾನೇನನ್ನು ಮಾಡುತ್ತಿದ್ದೆನೋ ಏನೋ. ಅಂತೂ ಒಂದು ಮಾತು ನಿಜ. ಬಹಳ ದಿನಗಳವರೆಗೆ ನಾನು ಅದನ್ನು ತಡೆದುಕೊಳ್ಳಲಾಗುತ್ತಿರಲಿಲ್ಲ. ಓಡಿಹೋಗುತ್ತಿದ್ದೆ – ನಿಜವಾಗಿಯೂ ಓಡಿಹೋಗುತ್ತಿದ್ದೆ ಎಲ್ಲಿಗಾದರೂ....

ಬಾವಿಗಾದರೂ ಹಾರಿಕೊಂಡು ಪ್ರಾಣ ನೀಗುತ್ತಿದ್ದೆ; ಆ ಗಾಣಕ್ಕೆ ಮಾತ್ರ ಸಿಕ್ಕಿಬೀಳುತ್ತಿರಲಿಲ್ಲ.

೫

ನನ್ನ ಮಾತು ಇರಲಿ ಸದ್ಯ. ಕೇಳು ಮುಂದಿನ ಕಥೆಯನ್ನು.

ನಾಲ್ಕು ವರ್ಷ ಕಳೆದುವು. ನನ್ನ ತಾಯಿ ಆರು ವರ್ಷದವಳಾದಳು. ತಾನು ಪರದೇಶಿಯೆಂಬುದು ಆ ವೇಳೆಗಾಗಲೇ ಗೊತ್ತಾಗಿಹೋಗಿರಬೇಕು ಅವಳಿಗೆ.

ಅಪ್ಪನನ್ನು ಅವಳು 'ಮಾವ' ಎಂದು ಕರೆಯುತ್ತಿದ್ದಳು. ಅವನು ತನ್ನ ತಂದೆಯಲ್ಲವೆನ್ನುವುದೂ ಅವಳಿಗೆ ಗೊತ್ತಾಗಿತ್ತು.

"ಅವನೇ ನಿನ್ನ ಗಂಡ ನೋಡೇ ಮಹಾದೇವೀ!" ಎಂದು ಹಾಸ್ಯ ಮಾಡುತ್ತಿದ್ದರು ನೆರೆಹೊರೆಯ ಜನರು.

ಪಾಪ, ಆರು ವರ್ಷ ವಯಸ್ಸಿನ ನನ್ನ ತಾಯಿಗೆ ಗಂಡನೆಂದರೇನೆಂಬುದು ಆಗ ಗೊತ್ತಾಗುವುದಾದರೂ ಹೇಗೆ? ಚಿಕ್ಕಂದಿನಿಂದಲೂ ಅವನೇ ಅವಳನ್ನು ಬೆಳೆಸಿದ್ದನಾದುದರಿಂದ ಅವನೇ ತನ್ನ ಸರ್ವಸ್ವವೆಂಬುದಷ್ಟು ಅವಳಿಗೆ ಗೊತ್ತು. ಅವನನ್ನು ಬಿಟ್ಟು ಅರಗಳಿಗೆಯೂ ಇರುವುದಕ್ಕಾಗುತ್ತಿರಲಿಲ್ಲ ಅವಳಿಗೆ.

ದಿನಗಳುರುಳಿದ ಹಾಗೆ ಅವಳು ಚಿಕ್ಕ ಪುಟ್ಟ ಕೆಲಸಗಳಲ್ಲಿ ನನ್ನ ತಂದೆಗೆ ನೆರವಾಗತೊಡಗಿದಳು. ಒಲೆಗೆ ಉರಿ ಹಚ್ಚುವುದು, ತನ್ನ ಪುಟ್ಟ ಪುಟ್ಟ ಕೈಗಳಿಂದ ಪಾತ್ರೆ ತಿಕ್ಕುವುದು, ತೋಟದಲ್ಲಿನ ಗಿಡಗಳ ಕೆಳಗೆ ಬಿದ್ದ ಕಟ್ಟಿಗೆ ತುಂಡುಗಳನ್ನಾರಿಸಿಕೊಂಡು ಬರುವುದು, ನೀರು ತುಂಬಿಕೊಡುವುದು, ಮನೆಯ ಕಸ ಗುಡಿಸುವುದೇ ಮೊದಲಾದ ಕೆಲಸಗಳನ್ನಾಕೆ ಮಾಡತೊಡಗಿದಳು. ಅಪ್ಪ ರೊಟ್ಟಿ ಬಡಿಯುವಾಗ ಅವಳೂ ಪಕ್ಕದಲ್ಲಿಯೆ ಕುಳಿತು ನಿರೀಕ್ಷಿಸುವಳು.

" ನಾನೂ ರೊಟ್ಟಿ ಮಾಡುತೀನಿ ಮಾವಾ."

" ಮಾಡೀಯಂತೆ ತಡಿಯೇ. ಇನ್ನೆರಡು ಮೂರು ವರ್ಷ ಹೋಗಲಿ," ಎಂದು ನಗುತ್ತಾ ನುಡಿಯುವನು ಅಪ್ಪ.

" ಊ ಹೂಂ. ನಾನೀಗಃ ಮಾಡುವಾಕೆ," ಎಂದು ಹಟ ಹಿಡಿಯುವಳು ಅವ್ವ.

ಅಪ್ಪ ನಗುತ್ತಾ, ಅವಳಿಗೂ ಸ್ವಲ್ಪ ಹಿಟ್ಟು ಕೊಡುವನು. ಅವಳು ಹಿಗ್ಗಿ ಆ ಹಿಟ್ಟನ್ನು ಕೈಯಲ್ಲಿಟ್ಟುಕೊಂಡು ತಟ್ಟಿ ಚಿಕ್ಕ ರೊಟ್ಟಿ ಮಾಡುವಳು. ಅಪ್ಪ ಅದನ್ನೂ ಹಂಚಿನ ಮೇಲಿಟ್ಟು ಸುಡುವನು.

" ನಿನ್ನ ರೊಟ್ಟಿ ನನಗ ಒಂದು ತುತ್ತೂ ಆಗುವದಿಲ್ಲಲ್ಲ ಮಾದೇವೀ! ನನ್ನ ಹೊಟ್ಟಿ ಹ್ಯಾಂಗ ತುಂಬಬೇಕೇ!"

" ಒಂದೇ ತಿಂದರ ಹ್ಯಾಂಗ ತುಂಬೀತು? ಎಂಟು ಹತ್ತು ಮಾಡಿ ಕೊಡ್ತೀನಿ. ಏಳಲಾ!"

" ಹೂಂ. ನೀ ಮಾಡಿದ ರೊಟ್ಟಿ ನೀನಃ ತಿನ್ನಬೇಕು."

" ಊ ಹೂಂ. ಅದು ನಿನಗೇ ಮಾವಾ."

" ದೊಡ್ಡವಳಾದ ಮ್ಯಾಲ ಮಾಡಿ ಹಾಕೀಯಂತೆ," ಎಂದು ಅವ್ವನನ್ನು ಮುದ್ದಿಸುವನು ಅಪ್ಪ.

ಅವನಿಗಾಗಲೇ ಮದುವೆಯ ವಯಸ್ಸಾಗುತ್ತ ಬಂದಿತ್ತು. ಬೆಳೆದ ಹುಡುಗಿಯನ್ನು ನೋಡಿ ಲಗ್ನ ಮಾಡಿಕೊಂಡು ಅಡುಗೆಯ ತೊಂದರೆ ತಪ್ಪಿಸಿಕೊಳ್ಳಬೇಕೆಂದು ಅವನ ಗೆಳೆಯರು ಮತ್ತೆ ಮತ್ತೆ ಹೇಳುತ್ತಿದ್ದರು.

" ಹಾಗೇ ಮಾಡಪ್ಪಾ ರುದ್ರಪ್ಪಾ. ಎಷ್ಟು ದಿನ ಅಂತ ನೀನೇ ರೊಟ್ಟಿ ಮಾಡಿಕೊಂಡು ತಿನ್ನುತೀ?" ಎಂದು ಸಾಹುಕಾರ ದೇವಪ್ಪನವರೂ ಎರಡು ಮೂರು ಬಾರಿ ಹೇಳಿದ್ದರು.

ಅಪ್ಪ ಮಾತ್ರ ಯಾರ ಮಾತನ್ನೂ ತಲೆಗೆ ಹಾಕಿಕೊಳ್ಳಲಿಲ್ಲ.

" ಮಾದೇವಿಯ ಮದುವೆಯಾದ ಮೇಲೇ ನನ್ನ ಮದುವೆಯ ಮಾತು," ಎಂದಿಷ್ಟೇ ಉತ್ತರವಿತ್ತು ಸುಮ್ಮನಾಗುತ್ತಿದ್ದನಂತೆ.

ನಾನಿನ್ನೂ ಚಿಕ್ಕವಳಾಗಿದ್ದಾಗ ಅಪ್ಪ ನನಗೆ ಈ ವಿಷಯಗಳನ್ನೆಲ್ಲಾ ತಿಳಿಸುತ್ತಿದ್ದುದಿತ್ತು. ನನ್ನ ತಾಯಿಯನ್ನಾತ ದೊಡ್ಡವಳನ್ನಾಗಿ ಮಾಡಿದ ಸಂಗತಿಯನ್ನು ಕೇಳುತ್ತ ಕೇಳುತ್ತ ನನ್ನೆದೆಯಲ್ಲಿ ಅವನ ವಿಷಯವಾಗಿ ಅಪಾರ ವಾದ ಅಭಿಮಾನವೂ ಮೆಚ್ಚಿಗೆಯೂ ತುಂಬುತ್ತಿತ್ತು.

"ಅವ್ವನ್ನ ಮದುವೀಮಾಡಿಕೋಬೇಕಂತ ಮೊದಲೇ ಗೊತ್ತುಮಾಡಿದ್ದಿಯೇನಪ್ಪ?" ಎಂದು ಒಂದು ಬಾರಿ ನಾನು ಕೇಳಿದಾಗ ಅಪ್ಪ ಹೇಳಿದ್ದ:

"ಹಾಂಗೇನೂ ಇಲ್ಲ. ಅಂಥಾದ್ದೇನೂ ಇರಲಿಲ್ಲ."

"ಮತ್ತೆ? ಮದುವೀ ಮಾಡಿಕೋ ಅಂತ ಮಂದಿ ಹೇಳಿದಾಗ ಸುಮ್ಮನ್ಯಾಕೆ ಇದ್ದುಬಿಟ್ಟೆ?"

"ಹೌದೇ ಗಿರಿಜವ್ವಾ, ಮದುವಿ ಅಂದರೇನ ಹುಡುಗಾಟ ಏನೇ ತಾಯಿಾ! ನೂರಾರು ರೂಪಾಯಿ ಬ್ಯಾಡಾ? ಎಲ್ಲಿಂದ ತರೂದು ಅಷ್ಟು ಹಣಾ?"

"ಯಾಕಪ್ಪ? ಸಾವುಕಾರ ಕೊಡುತಿರಲಿಲ್ಲೇನ ನೀ ಕೇಳಿದರ?"

"ಅವರು ಕೊಡೂದು ಸಾಲಾ ಹೌದಲ್ಲೋ? ದಿವಸಕ್ಕ ಮೂರಾಣೆ ದುಡಿಯುವ ಕೂಲಿಯವ ನಾ. ಅವರ ಸಾಲಾ ತೀರಿಸೂದಾದರೂ ಹ್ಯಾಂಗ? ನನ್ನ ಕೂಲಿಯೊಳಗ ಅವರು ಮುರಿದುಕೊಳ್ಳುತಾ ಹೋಗಬೇಕು, ಹೌದಲ್ಲೋ? ನಾ, ನನ್ನ ಹೆಂಡತಿ, ಮಾದೇವಿ ಮೂರು ಮಂದಿಯ ಹೊಟ್ಟೆ ಹ್ಯಾಂಗ ತುಂಬಬೇಕು ಆಮ್ಯಾಲ?"

"ಹೌದಪ್ಪ, ನೀನನ್ನೂದೂ ಖರೇ."

ಸ್ವಲ್ಪ ಹೊತ್ತು ಸುಮ್ಮನಿದ್ದು ಮತ್ತೆ ಹೇಳಿದ್ದ ಅಪ್ಪ.

"ಅದೂ ಅಲ್ಲದೆ ಮನೆಗೆ ಬರುವ ಆ ಹೆಣ್ಣು ಎಂಥಾಕಿಯೋ ಏನೋ. ಮಾದೇವಿಯನ್ನ ನನ್ನ ಎರಡನೆಯ ಜೀವದ ಹಾಂಗ ಬೆಳಿಸಿದವ ನಾನು. ನನ್ನ ಹಾಂಗ ನನ್ನ ಆ ಹೆಂಡತೀನೂ ಮಾದೇವಿಯನ್ನ ನೋಡಿಕೋಬಹುದು ಅಂತ ಹೆಂಗ ಹೇಳಾಕ ಬರುತಿತ್ತು? ಮಾದೇವಿಯ ಕಣ್ಣಾಗ ಒಂದು ಹನಿ ನೀರು ಬಂದರೂ ಸಹಿಸುವದಕ್ಕಾಗುತ್ತಿರಲಿಲ್ಲ ನನಗ. ಅದಕ್ಕ ಅವಳ ಮದುವೆ

ಯಾಗುವವರೆಗೂ ಬ್ಯಾರೆ ಯಾವದರದೂ ಸುದ್ದಿ ಬ್ಯಾಡಾ ಅಂತ ಗಟ್ಟಿಮಾಡಿ ಕೊಂಡು ಬಿಟ್ಟನಿ."

"ಅಂದರಽ? ಅವ್ವನ್ನ ಆಗಬೇಕಂತ ವಿಚಾರನಽ ಇರಲಿಲ್ಲ ಅನ್ನು ನಿನಗ!"

"ಇಲ್ಲ. ಇಲ್ಲ," ಎನ್ನುತ್ತಾ ಅಪ್ಪ ತುಂಟತನದಿಂದ ನಗುತ್ತಾ ಅವ್ವನ ಕಡೆ ನೋಡುತ್ತಿದ್ದ.

ಅವಳೂ ನಗುತ್ತ ಹೇಳುತ್ತಿದ್ದಳು :

"ಸುಳ್ಳು! ಎಲ್ಲಾ ಸುಳ್ಳು!"

"ಅಪ್ಪನಽ ಮಾಡಿಕೋಬೇಕು ಅಂತ ನೀ ಗಟ್ಟಿಮಾಡಿಕೊಂಡಿದ್ದಿ ಯೇನೇ ಅವ್ವಾ?" ಎಂದು ನಾನು ಆಕೆಯನ್ನು ಕೇಳುತ್ತಿದ್ದೆ.

ಅವಳು ನನ್ನ ಕೆನ್ನೆಯನ್ನು ಚಿವುಟಿ ಹೇಳುತ್ತಿದ್ದಳು :

"ಥೂ! ಚೋಟುದ್ದ ಹುಡುಗಿ, ಎಂಥೆಂಥಾ ಪ್ರಶ್ನ ಕೇಳುತೀಯಲ್ಲೇ!"

"ನಿನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗಳಲ್ಲವೇ! ನಿನ್ನ ಸದ್ಗುಣಗಳೆಲ್ಲಾ ಇವಳಲ್ಲೂ ಬಂದಿರಲೇಬೇಕಲ್ಲ!" ಎನ್ನುತ್ತಿದ್ದ ಅಪ್ಪ.

"ಅವಳ ಸದ್ಗುಣ ಏನಪ್ಪ?"

ಅಪ್ಪ ಮತ್ತೆ ಹಿಂದಿನ ನೆನಪುಗಳನ್ನು ಹೇಳಲು ಮೊದಲು ಮಾಡುತ್ತಿದ್ದ.

....ಅವ್ವ ಬೆಳೆಯುತ್ತಿದ್ದಳು. ಎಂಟು ವರ್ಷದವಳಾದಳು. ಹತ್ತು ವರ್ಷದವಳಾದಳು. ಪಲ್ಯ ಮಾಡಲು ಕಲಿತುಕೊಂಡಳು. ಅಂಬಲಿ ಮಾಡಲು ಕಲಿತುಕೊಂಡಳು. ರೊಟ್ಟಿ ಮಾತ್ರ ಇನ್ನೂ ಬರುತ್ತಿರಲಿಲ್ಲ. ಆದರೂ ಅಪ್ಪ ಬೇಡವೆಂದರೂ ಕೇಳದೆ ತನ್ನ ಚಿಕ್ಕ ಕೈಗಳಿಂದಲೇ ಪುಟ್ಟ ಪುಟ್ಟ ರೊಟ್ಟಿ ಮಾಡುತ್ತಿದ್ದಳು. ಆ ಹಸಿ ಬಿಸಿ 'ದಮುಟೆ'ಗಳನ್ನೇ ತುಂಬ ಪ್ರೀತಿಯಿಂದ ತಿಂದು ಕೆಲಸಕ್ಕೆ ಹೋಗುತ್ತಿದ್ದ ಅಪ್ಪ. ಮೊದಲಿನಂತೆ ಅವ್ವನೂ ಅವನೊಡನೆ ಮಗ್ಗದ ಮನೆಗೆ ಹೋಗದೆ ತಮ್ಮ ಮನೆಯಲ್ಲೇ ಇರುತ್ತಿದ್ದಳು. ಮನೆ ಸಾರಿಸುವುದು, ಉರುವಲಿಗಾಗಿ ಕಟ್ಟಿಗೆ ಶೇಖರಿಸುವುದು, ಸಗಣಿ ಹಿಡಿದುಕೊಂಡು ತಂದು ಕುಳ್ಳು ತಯಾರಿಸುವುದು, ಅಪ್ಪನ ಮತ್ತು ತನ್ನ ಬಟ್ಟೆ ತೊಳೆಯುವುದು, ಅಪ್ಪ ತಂದುಕೊಟ್ಟಿದ್ದ ಪುಟ್ಟ ಮಣ್ಣಿನ ಕೊಡದಲ್ಲಿ ನೀರು ತಂದು ಹರಿವೆಗೆ

ತುಂಬುವುದು, ಕೆಲಸದಿಂದ ಅಪ್ಪ ಬರುವುದರೊಳಗಾಗಿ ಅಡುಗೆ ಮಾಡಿ, ಅವನ ಕೈಕಾಲಿಗೆಂದು ಬಿಸಿನೀರು ಕಾಯಿಸಿಟ್ಟು ಕುಳಿತುಕೊಳ್ಳುವುದು. ಈ ಕೆಲಸಗಳನ್ನೆಲ್ಲ ಅವ್ವ ತಾನೇ ಕಲಿತುಕೊಂಡಿದ್ದಳು. ಅವಳಿಗೆ ಕಲಿಸುವವರಾದರೂ ಯಾರು ?

ಅದುವರೆಗೆ ಅವ್ವನಿಗೆ ಒಂದೇ ಒಂದು ಪರಕಾರ (ಲಂಗ) ವಿತ್ತು. ಅದನ್ನೇ ಒಗೆದು ಒಣಗಲು ಹಾಕಿ ಮತ್ತೆ ಅದನ್ನೇ ತೊಟ್ಟುಕೊಳ್ಳಬೇಕಾಗುತ್ತಿತ್ತು. ಅದು ಒಣಗುವವರೆಗೂ ಅವಳು ಬರಿಮೈಯಲ್ಲೇ ಇರುತ್ತಿದ್ದಳು. ಚಿಕ್ಕ ಬಾಲೆಯಾಗಿರುವಷ್ಟು ದಿನ ಹಾಗೇ ಇರಬಹುದಾಗಿತ್ತು. ಆದರೀಗ ಅವಳು ದೊಡ್ಡ ಹುಡುಗಿ. ಮೈ ಕೈ ತುಂಬಿಕೊಳ್ಳುತ್ತಿದ್ದುವು. ಇನ್ನೆರಡು ವರ್ಷಗಳಿಗೆ ಮೈನೆರೆಯುವಾಕೆ. ಮೊದಲಿನಂತೆ ಅವಳು ಬರಿಮೈಯಲ್ಲಿರುವುದು ಉಚಿತವಾಗಿರಲಿಲ್ಲ.

ಅಪ್ಪ ಬಹಳ ಕಷ್ಟಪಟ್ಟು ದಿನವೂ ಒಂದಾಣೆ ಉಳಿಸಿ ಅವ್ವನಿಗೆ ಎರಡು ಹೊಸ ಪರಕಾರ ಹೊಲಿಸಿ ಕೊಟ್ಟ. ಆ ಹೊಸ ಬಟ್ಟೆ ಕೈಗೆ ಬಂದ ದಿನ ಅವ್ವನಿಗೆ ಎಂಥಾ ಸಂತೋಷ ಅಂತೀಯಾ! ಪಾಪ, ಹುಟ್ಟಿದಂದಿನಿಂದಲೂ ಒಂದೇ ತುಂಡು ಅರಿವೆಯ ಮೇಲೆ ಬೆಳೆದವಳು. ಒಂದೇ ದಿನ ಎರಡು ಪರಕಾರ ಸಿಕ್ಕಿದಾಗ ಅವಳಿಗೆ ಸ್ವರ್ಗವೇ ಸಿಕ್ಕಿದಂತಾಗಿತ್ತು. ಅಂದು ರಾತ್ರೆ ಅವುಗಳನ್ನು ಮಡಿಕೆ ಮಾಡಿ ತನ್ನ ತಲೆಯ ಹತ್ತಿರವೇ ಇಟ್ಟುಕೊಂಡು ಮಲಗಿದ್ದಳಂತೆ. ಮಾರನೆಯ ದಿನ ಅಪ್ಪ ಕೆಲಸಕ್ಕೆ ಹೋಗುತ್ತಲೂ ಅವಳು ಅವುಗಳನ್ನು ತೊಟ್ಟುಕೊಂಡು ನಲಿದದ್ದೇ ನಲಿದದ್ದು. ಬೆಳ್ಳಿ ಬಂಗಾರದ ಒಡವೆಗಳು ಸಿಕ್ಕಿದ್ದರೂ ಅವಳಿಗೆ ಅಷ್ಟು ಸಂತೋಷವಾಗುತ್ತಿರಲಿಲ್ಲವೋ ಏನೊ.

ಅವ್ವನ ಅಂದಿನ ಮನಃಸ್ಥಿತಿಯನ್ನು ನಾನೂ ಪೂರ್ಣವಾಗಿ ಅರ್ಥಮಾಡಿಕೊಳ್ಳಬಲ್ಲೆ. ಅವಳು ಚಿಕ್ಕವಳಾಗಿದ್ದಾಗ ಮನೆಯಲ್ಲಿದ್ದಷ್ಟು ಒಡತನ ನಾನು ಹುಟ್ಟಿದ ಬಳಿಕ ಇರಲಿಲ್ಲವೆಂಬುದೇನೋ ನಿಜ. ನನಗೆ ಯಾವಾಗಲೂ ಎರಡು ಮೂರು ಪರಕಾರಗಳಿದ್ದೇ ಇರುತ್ತಿದ್ದುವು. ನಾನು ದೊಡ್ಡವಳಾದ ಬಳಿಕ ಎರಡು ಮೂರು ಸೀರೆಗಳೂ ಇದ್ದುವು. ಆದರೆ ಅವುಗಳೆಲ್ಲಾ ಹಳೆಯ ಮಾದರಿಯವು. ಕೈಮಗ್ಗದಲ್ಲಿ ತಯಾರಾಗುತ್ತಿದ್ದುವು. ಗಿರಣಿಯಲ್ಲಿ ತಯಾರಾಗುವ ತೆಳುವಾದ

ಬಿಳಿಯ ಸೀರೆಯುಟ್ಟುಕೊಳ್ಳಬೇಕೆಂಬ ಆಸೆ ಬಹಳ ದಿನಗಳಿಂದ ನನ್ನನ್ನು ಕಾಡುತ್ತಿತ್ತು. ಅಪ್ಪ ಮಾತ್ರ ಅಂಥ ಸೀರೆಯನ್ನು ತಂದುಕೊಟ್ಟಿರಲಿಲ್ಲ. " ನಾವು ಬಡವರು ಗಿರಿಜವ್ವ. ಅಂಥಾದ್ದೆಲ್ಲಾ ನಮಗ್ಯಾಕೆ?" ಎಂದು ಹೇಳಿ ಸುಮ್ಮ ನಾಗುತ್ತಿದ್ದ.

ನನ್ನ ಮದುವೆಯಾಗಿ, ನಾವು ಬೇರೆ ಮನೆ ಹೂಡಿದ ತರುವಾಯ 'ಇವರು' ಬಿಳಿಯ ಸೀರೆಯೊಂದನ್ನು ಕೊಂಡು ತಂದರು. ನನ್ನ ಬಹುದಿನಗಳ ಆಸೆ ಕೈಗೂಡಿದ್ದುದರಿಂದ ಅಂದು ನೆಲದ ಮೇಲೆ ನನ್ನ ಕಾಲುಗಳೇ ನಿಲ್ಲದಂತಾಗಿತ್ತು. ಅದನ್ನುಟ್ಟುಕೊಂಡು, ಸೆರಗನ್ನು ತಲೆಯ ಮೇಲೆಳೆದುಕೊಂಡು ನಿನ್ನ ಮುಖದಲ್ಲಿ ನನ್ನ ಪ್ರತಿಬಿಂಬವನ್ನು ಕಂಡು ನಲಿದದ್ದೇ ನಲಿದದ್ದು. ಅಂದಿನ ನನ್ನ ಸಡಗರದ ನೆನಪು ನಿನಗೂ ಇರಬಹುದಲ್ಲವೇ ಗೆಳತಿ?

ಹಾಗೇ ನನ್ನ ತಾಯಿಯೂ ಅಂದು ನಲಿದಿದ್ದಳು.

" ನೀನು ದೊಡ್ಡಾಕೆಯಾದೆ ಮಾದೇವಿ. ನಿನಗೊಬ್ಬ ಗಂಡನ್ನ ನೋಡ ಬೇಕು," ಎಂದು ಹೇಳಿದ್ದ ನನ್ನ ತಂದೆ.

ಇದ್ದಕ್ಕಿದ್ದ ಹಾಗೇ ಅವ್ವನ ಕಣ್ಣುಗಳಲ್ಲಿ ನೀರು ತುಂಬಿ ಬಂದಿತ್ತು. ಅಪ್ಪನನ್ನು ತಬ್ಬಿಕೊಂಡು ಅವಳು ಬಿಕ್ಕಿ ಬಿಕ್ಕಿ ಅತ್ತುಬಿಟ್ಟಿದ್ದಳು.

" ಯಾಕಳುತೀಯೋ ಮಾದೇವೀ?"

" ಮತ್ತೆ! ನೀ ನನ್ನ ಬಿಟ್ಟುಬಿಡಬೇಕಂತ ಮಾಡೀಯಲ್ಲ ಮಾವಾ?"

" ಹುಚ್ಚೀ! ನನ್ನ ಹತ್ತರ ಹೀಂಗ ಎಷ್ಟು ದಿನ ಅಂತ ಇರುವಾಕಿ? ನೀನು ಗಂಡಾಗಿದ್ದರೆ ಮಾತು ಬೇರೆಯಾಗುತಿತ್ತು, ಆದರ ನೀನು ಹೆಣ್ಣು. ಒಂದಿಲ್ಲೊಂದು ದಿನಾ ಮದುವೀ ಮಾಡಿಕೊಂಡು ಗಂಡನ ಹಿಂದ ಹೋಗಾಕ ಬೇಕಲ್ಲ...."

" ಊಹೂಂ. ನಾ ಯೇನೂ ಹೋಗೂದಿಲ್ಲ."

" ಕೇಳಿದವರು ನಕ್ಕಾರು ಯಾರಾದರೂ."

" ನಿನ್ನ ಬಿಟ್ಟು ನಾನೆಲ್ಲಿಗೂ ಹೋಗುವದಿಲ್ಲ ಮಾವಾ," ಎನ್ನುತ್ತಾ ಅವ್ವ ಅವನನ್ನು ಬಿಗಿಯಾಗಿ ತಬ್ಬಿಕೊಂಡಿದ್ದಳು.

ಮತ್ತೊಂದು ದಿನ ಸಾಯಂಕಾಲ ಅಪ್ಪ ಮನೆಗೆ ಬಂದು ಊಟ ಮಾಡಿದ ಬಳಿಕ ಮತ್ತೆ ಅವ್ವನ ಮದುವೆಯ ಮಾತು ಹೊರಟಿತ್ತು.

" ನಿನ್ನ ಕೊಡಬೇಕಂತ ಒಬ್ಬರು ಬಹಾಳ ದಿನದಿಂದ ಕೇಳಾಕ ಹತ್ತಿದಾರು ಮಾದೇವೀ."

" ಕೊಡಬೇಕು ? ಅಂದರs ?"

" ಅಂದರs ? ಮದುವೀ ಮಾಡಿಕೊಡಬೇಕೂ ಅಂತ." ಅಪ್ಪ ತಡೆತಡೆಯುತ್ತ ಹೇಳಿದ್ದ.

ಉಕ್ಕಿ ಬರುತ್ತಿದ್ದ ಅಳುವನ್ನು ಬಿಗಿ ಹಿಡಿದು ಅವ್ವ ನಿರ್ಧಾರದ ಧ್ವನಿಯಲ್ಲಿ ಹೇಳಿದ್ದಳು.

" ನನ್ನ ಅವರಿವರಿಗೆ ಕೊಡುವ ಸುದ್ದೀ ಇನ್ನೊಮ್ಮೆ ಎತ್ತಬ್ಯಾಡ ಮಾವಾ. ನಾನೇನು ನಿನ್ನ ಬಿಟ್ಟು ಹೋಗೂದಿಲ್ಲ."

" ಅಂದರs ? ನನ್ನೇ ಮಾಡಿಕೊಳ್ಳುವಾಕೆಯೋ ಏನು ?"

" ಅದೆಲ್ಲಾ ನಿನಗs ಗೊತ್ತು. ನಾ ಮಾತ್ರ ಈ ಮನೀ ಬಿಟ್ಟು ಹೋಗೂದಿಲ್ಲ."

" ದೊಡ್ಡಾಕೆಯಾದ ಮ್ಯಾಲೂ ?"

" ಹೌದು. ದೊಡ್ಡಾಕೆಯಾದ ಮ್ಯಾಲೂ "

" ಅಯ್ಯೋ ಹುಚ್ಚು ಹುಡಿಗಿ ! ಮಂದಿ ನಗಲಿಕ್ಕಿಲ್ಲೇನೇ ?"

" ಯಾಕಂತ ನಗುತಾರ ? ಚೋಟುದ್ದ ಇದ್ದಾಗಿಂದ ನನ್ನ ಬೆಳಸಿದ್ದೀ ನೀ."

" ಹೂಂ. ಆಗ ಚೋಟುದ್ದ ಇದ್ದಾಕೆ ಈಗ ನನ್ನಷ್ಟು ಉದ್ದ ಬೆಳದಿದ್ದೀಯಲ್ಲ ! ಅಂತೂ ನೀನs ನನಗ ಗಂಟುಬೀಳುವಾಕೆ ಅನ್ನು."

" ಸೀತವ್ವಕ್ಕ ಹೇಳುತಾರಲ್ಲ ಮಾವಾ, ನೀನs ನನ್ನ ಗಂಡ ಅಂತ."

" ಚೇಷ್ಟೆಗಂತ ಅಂತಾರೆ ಮಾದೇವೀ. ನಿನಗ ಇನ್ನೂ ತಿಳಿಯುವದಿಲ್ಲ. ನನ್ನ ಮಗಳ ಹಾಂಗ ನಿನ್ನ ಬೆಳಿಸೀನಿ. ಈಗ ನಾ ನಿನ್ನ ಗಂಡ ಆಗೂದಾದರೂ ಹ್ಯಾಂಗ ?"

" ಹ್ಯಾಂಗಂದರ ಎಲ್ಲರೂ ಆದ ಹಾಂಗ. ನಾ ಮಾತ್ರ ನಿನ್ನ ಬಿಟ್ಟು ಯಾರನ್ನೂ ಮಾಡಿಕೊಳ್ಳುವಾಕೆಯಲ್ಲ ಮಾವಾ."

" ನಾನಃ ಇನ್ನೊಬ್ಬಳನ್ನ ಮಾಡಿಕೊಂಡರ?"

" ಊಹೂಂ. ಅದೆಲ್ಲಾ ಯಾಕ ಮಾವಾ? ಆಕಿ ಬರುವಾಕಿ ಎಂಥಾಕಿ ಇರುತಾಳೋ ಯಾರಿಗ್ಗೊತ್ತು. ನಿನಗೂ ನನಗೂ ಕೂಡಿ ನಡದಾಂಗ ಅವಳಿಗೂ ನನಗೂ ಹ್ಯಾಂಗ ನಡದೀತು ಮಾವಾ? ಅವಳು ನನ್ನ ಬಡದರ ಬೈದರ ನನಗ ಆಗಾಕಿಲ್ಲ. ನೀನೇನೋ ನನ್ನ ಎಂದೂ ಬಯ್ದಿಲ್ಲ, ಬಡದಿಲ್ಲ. ನಾ ಮಾಡಿದ್ದನ್ನ– ಚಲೋ ಮಾಡಲಿ, ಕೆಟ್ಟದು ಮಾಡಲಿ, ತಿಂದು ಏಳುತ್ತೀ. ನೀನು ಮಾಡಿ ಕೊಳ್ಳುವಾಕಿಯೂ ನಿನ್ನ ಹಾಂಗಃ ಸುಮ್ಮನಿದ್ದಾಳೇನು? ನನ್ನ ಅಡಿಗೆ ರುಚಿ ಹತ್ತದಿದ್ದರ ಅವಳು ನನ್ನ ಹೊಡೆಯಬಹುದು. ಅದೇನೂ ಬ್ಯಾಡ ಮಾವಾ. ಅವಳು ಬಂದಾದರೂ ಮಾಡುವದೇನು? ನಾ ಮಾಡುವ ಅಡಿಗೆ, ಮನೇ ಕೆಲಸ ಹೌದಲ್ಲೋ ಅವಳೂ ಮಾಡೂದು? ನನಗೇನು ಅದು ಬರೂದಿಲ್ಲಾ? ನೀನಾದರೂ ಯಾಕ ಇನ್ನೊಬ್ಬಳನ್ನ ಮಾಡಿಕೋಬೇಕು? ಅದೂ ಅಲ್ಲದೆ ಮದುವಿ ಅಂದರ ಎರಡು ಮೂರು ನೂರು ರೂಪಾಯಿ ಬೇಕೋ ಬ್ಯಾಡವೊ? ಅವನ್ನೆಲ್ಲಿಂದ ತರುತ್ತೀ? ಸಾಹುಕಾರರ ಹತ್ತರ ಸಾಲಾ ಮಾಡುವವ ಹೌದಲ್ಲೋ? ಅದನ್ನ ತೀರಿಸೂದಕ್ಕಂತ ಮುಂದ ಗೋಳಾಡೂದು ಯಾಕ? ಏನೂ ಬ್ಯಾಡ. ನನ್ನಃ ಮಾಡಿಕೊಂಡು ಬಿಡು. ಹತ್ತು ರೂಪಾಯಿ ಖರ್ಚು ಮಾಡಿದರ ಸಾಕು–ಮದುವಿಯಾಗುತ್ತೈತಿ. ನನ್ನ ಮದುವಿಗೆ ಯಾರೂ ಬರದಿದ್ದರೂ ನಡದೀತು. ನಮಗಾದರೂ ಯಾರಿದ್ದಾರ ಆಪ್ತರು ಮಾವಾ? ಊದಿಸೂದು ಬ್ಯಾಡ, ಬಾರಿಸೂದು ಬ್ಯಾಡ. ಸೀರೆ ಬಂಗಾರ ಯಾವದೂ ಬ್ಯಾಡ."

" ಎಲ ಎಲಾ, ಎಷ್ಟೆಷ್ಟು ಮಾತು ಕಲಿತೆಯಲ್ಲೇ. ಸಾಕುಮಾಡೇ. ನಿನ್ನೇ ಆಗುತೀನಿ," ಎಂದಿದ್ದ ಅಪ್ಪ.

ಅಂದು ಮಾತ್ರ ಅವಳನ್ನೇ ಮದುವೆಯಾಗುವ ನಿರ್ಧಾರಕ್ಕೆ ಬಂದಿದ್ದನಾತ.

ಮತ್ತೆ ಕೆಲ ದಿನ ಕಳೆದ ಬಳಿಕ ಸಾಹುಕಾರರ ಹತ್ತಿರ ಇಪ್ಪತ್ತೈದು

ರೂಪಾಯಿ ಸಾಲ ತೆಗೆದುಕೊಂಡು ಅವ್ವನಿಗೊಂದು ಹೊಸ ಸೀರೆ, ಹೊಸ ಕುಬುಸ ಕೊಂಡು ತಂದಿದ್ದ. ಒಂದು ಒಳ್ಳೆಯ ಮುಹೂರ್ತ ನೋಡಿ ನಾಲ್ಕು ಜನರನ್ನು ಕರೆದು ಅವಳೊಡನೆ ವಿವಾಹವಾಗಿದ್ದ. ಸಾಹುಕಾರರೂ ಅವರ ಹೆಂಡತಿಯೂ ಬಂದು ಅಕ್ಕೀಕಾಳು ಹಾಕಿ ಹೋಗಿದ್ದರು. ಮುದುಕಿಯೊಂದು ಬಂದು ಅಂದಿನ ಅಡುಗೆಯ ಕೆಲಸದಲ್ಲಿ ನನ್ನ ತಾಯಿಗೆ ನೆರವಾಗಿತ್ತು. ತನ್ನ ಒಬ್ಬಿಬ್ಬರು ಗೆಳತಿ ಯರನ್ನು ಆಮಂತ್ರಿಸಿದ್ದಳು ನನ್ನ ತಾಯಿ. ಅದುವರೆಗೆ ಅಪ್ಪನ ಸೋದರ ಸೊಸೆಯಾಗಿದ್ದ ಅವಳು ಅಂದು ಅವನ ಧರ್ಮಪತ್ನಿಯಾಗಿದ್ದಳು.

ಆದರೆ ಅದರಿಂದಾಗಿ ಅವರ ಸಂಬಂಧದಲ್ಲಿ ಯಾವ ವಿಶೇಷ ಮಾರ್ಪಾಡೂ ಆಗಿರಲಿಲ್ಲ. ಮೊದಲಿನ ಹಾಗೇ ಅವಳು ಅವನನ್ನು 'ಮಾವಾ' ಎಂದೇ ಸಂಬೋಧಿಸುತ್ತಿದ್ದಳು. ಅವನೂ ಅವಳನ್ನು 'ಮಾದೇವೀ' ಎಂದೇ ಕೂಗುತ್ತಿದ್ದ. ಅಪ್ಪನ ಮನಸ್ಸಿಗೆ ಮಾತ್ರ ಬಹಳ ಸಮಾಧಾನವಾಗಿತ್ತು – ತಾನು ಅವನನ್ನು ಬಿಟ್ಟು ಹೋಗುವ ಪ್ರಸಂಗ ತಪ್ಪಿತಲ್ಲಾ – ಎಂದು.

ಮದುವೆಗಾಗಿ ಮಾಡಿದ ಸಾಲ ತೀರಿಸಬೇಕಾದರೆ ಎರಡು ಮೂರು ವರ್ಷ ಹಿಡಿಯಿತಂತೆ. ತಿಂಗಳಿನ ಸಂಬಳದಲ್ಲಿ ಒಂದೊಂದು ರೂಪಾಯಿ ಮುರಿದು ಕೊಳ್ಳುತ್ತಿದ್ದರಂತೆ ಸಾಹುಕಾರರು. ಆ ಸಾಲ ಪೂರ್ತಿಯಾಗಿ ಮುಟ್ಟುವವರೆಗೂ ಅಪ್ಪ ಮತ್ತೊಂದು ಅಂಗಿ ಹೊಲಿಸಲಿಲ್ಲ, ಅವ್ವನೂ ಮತ್ತೊಂದು ಸೀರೆ ಕೇಳಲಿಲ್ಲ. ಸಾಲವೆಲ್ಲಾ ತೀರಿದ ಬಳಿಕ ಅಪ್ಪ ಅವಳಿಗೆ ಇನ್ನೊಂದು ಸೀರೆ, ಕುಬುಸ ತಂದು ಕೊಟ್ಟಿದ್ದ.

ಅದೇ ವರ್ಷ ಅವ್ವ ಋತುಮತಿಯಾದಳು. ಮದುವೆಯ ದಿನ ಬಂದ ಮುದುಕಿ ಆಗಲೂ ಬಂದಳು; ಅವ್ವನಿಗೆ ಎಣ್ಣೆ ನೀರು ಹಾಕಿ ಎರೆದಳು. ಮುಂದೆ ಒಂದು ತಿಂಗಳಿಗೇ ಪ್ರಸ್ತದ ಶಾಸ್ತ್ರವೂ ನಡೆಯಿತು. ಅಪ್ಪ ಅವ್ವ ಗಂಡ ಹೆಂಡಿರ ಸಂಬಂಧ ಕಂಡುಕೊಂಡರು.

ಆಗಲೂ ಅಪ್ಪ ಅವಳನ್ನು "ಮಾದೇವೀ," ಎಂದೇ ಕರೆಯುತ್ತಿದ್ದ. ಅವ್ವನಿಗೆ ಮಾತ್ರ ಮೊದಲಿನಂತೆ 'ಮಾವಾ' ಎಂದು ಕರೆಯಲು ಸಂಕೋಚ ವಾಗತೊಡಗಿತು.

"ಇಷ್ಟು ವರ್ಷ ಇಲ್ಲದ ನಾಚಿಕೆ ಈಗ್ಯಾಕೆ ಎಲ್ಲಿಂದ ಬಂತೇ?" ಎಂದು ತಮಾಷೆ ಮಾಡುತ್ತಿದ್ದ ಅಪ್ಪ.

"ಬಿಡಿ ಬಿಡಿರೀ," ಎನ್ನುತ್ತಿದ್ದಳು ಅವ್ವ.

'ಮಾವಾ' ಎಂಬ ಸಂಬೋಧನೆ ನಿಂತುಹೋದಂತೆಯೇ ಆಯಿತು. ಅದಕ್ಕೆ ಬದಲು "ರೀ," "ಏನ್ರೀ," ಆರಂಭವಾಯಿತು.

ನನ್ನೆದುರಿಗೆ ಆ ವಿಚಾರ ಹೇಳುತ್ತಾ ಅಪ್ಪ ನಗುನಗುತ್ತ ನುಡಿಯುತ್ತಿದ್ದ:

"ಮದುವಿ ಮಾಡಿಕೋ ಅಂತ ಅಂದವಳೂ ಇವಳೇ. ಮಾಡಿಕೊಂಡ ಮ್ಯಾಲ ಮುರಕಾ ಮಾಡಿದವಳೂ ಇವಳೇ. ನಾನಿವಳನ್ನ ಹೆಗಲ ಮ್ಯಾಲ ಹೊತ್ತುಕೊಂಡು ಹೋಗುತ್ತಿದ್ದಿನಿ, ಇವಳ ಸಿಂಬುಳಾ ಒರಸಿ, ಪರಕಾರ ಒಗೆದು, ಜಳಕ ಮಾಡಿಸಿ, ಜೋ ಜೋ ಹಾಡಿ ಮಲಗಿಸುತಿದ್ದಿನಿ. ಅದನ್ನೆಲ್ಲಾ ಮರತು, ನನ್ನ ಮಾವಾ ಅಂತ ಕರೆಯೂದನ್ನೂ ಬಿಟ್ಟು 'ಏನ್ರೀ' 'ಪಾನ್ರೀ' ಅಂತ ಸುರುಮಾಡಿದಳಲ್ಲ ಗಿರಿಜಾ!"

ಆ ಮಾತು ಕೇಳಿ ನಾನು ಕಿಲಕಿಲನೆ ನಗುತ್ತಿದ್ದೆ. ಅವ್ವನೂ ನಗುತ್ತಿದ್ದಳು.

ಅವರಿಬ್ಬರ ಆ ಅದ್ಭುತ ಆತ್ಮೀಯತೆಯನ್ನು ಅಕೃತ್ರಿಮ ಪ್ರೀತಿಯನ್ನು ಕಂಡಿದ್ದ ನಾನು ಮನಸ್ಸಿನಲ್ಲೇ, ನನಗೂ ಇಂಥ ಗಂಡ ಸಿಗಬಹುದೇ? ನಾನೂ ನನ್ನವರೂ ಅಪ್ಪ ಅವ್ವರ ಹಾಗೇ ಪರಮಸುಖದಿಂದ ಸಂಸಾರ ಮಾಡಲು ಸಾಧ್ಯವಾಗಬಹುದೇ? ಎಂದು ಯೋಚಿಸುತ್ತಿದ್ದೆ.

೬

ಮತ್ತೆ ವರ್ಷವೊಂದು ಕಳೆಯುವುದರೊಳಗಾಗಿ ಅವ್ವ ಗರ್ಭಿಣಿಯಾದಳು. ನಿಧಾನವಾಗಿ ನಾನು ರೂಪುಗೊಳ್ಳುತ್ತಿದ್ದೆ ಅವಳ ಗರ್ಭದಲ್ಲಿ.

ತಾಯಿಯಿಲ್ಲದ ತಬ್ಬಲಿ ನನ್ನ ತಾಯಿ. ಅವಳಿಗೆ ತವರುಮನೆಯ ದಿಕ್ಕಿರಲಿಲ್ಲ. ಮನೆಗೆ ಕರೆದೊಯ್ದು ಸೀರೆಯುಡಿಸಿ ಶಾಸ್ತ್ರ ಮಾಡುವವರಿರಲಿಲ್ಲ.

ಸಾಹುಕಾರರ ಹೆಂಡತಿ ಸೀತಮ್ಮನೇ ಒಂದು ದಿನ ಅವ್ವನನ್ನು ತಮ್ಮ ಮನೆಗೆ ಕರೆದೊಯ್ದು ಎಣ್ಣೆ ನೀರು ಹಾಕಿ, ಒಂದು ಸೀರೆಯನ್ನೂ ಖಣವನ್ನೂ ಕೊಟ್ಟು, ಉಡಿ ತುಂಬಿ ಕಳಿಸಿದಳು. ಸೀತಮ್ಮನ ಆ ಉಪಕಾರವನ್ನು ಈಗಲೂ ಕೃತಜ್ಞತೆಯಿಂದ ನೆನಸುತ್ತಾಳೆ ಅವ್ವ.

ಅಪ್ಪನೂ ಹತ್ತು ರೂಪಾಯಿ ಖರ್ಚುಮಾಡಿ ಒಂದು ಹೊಸ ರೇಶಿಮೆ ಸೀರೆ ಕೊಂಡು ತಂದು ಅವ್ವನಿಗೆ ಕೊಟ್ಟ. ಒಂದು ದಿನ ಮಾತ್ರ ಅದನ್ನುಟ್ಟು ಕೊಂಡು ಅನಂತರ ಪೆಟ್ಟಿಗೆಯಲ್ಲಿಟ್ಟು ಜತನದಿಂದ ಕಾದಿರಿಸಿದಳು ಅವ್ವ.

"ಇದಕ್ಯಾತಕ್ಕ ಹತ್ತು ರೂಪಾಯಿ ಖರ್ಚು ಮಾಡಲಿಕ್ಕೆ ಹೋದಿರಿ? ನನಗ್ಯಾತಕ್ಕ ಬೇಕಾಗಿತ್ತು ರೇಶಿಮಿ ಸೀರೆ?" ಎಂದು ಅವಳು ಆಕ್ಷೇಪಿಸದಿರಲಿಲ್ಲ.

"ಇರಲೇಳು. ಹಬ್ಬ ಹುಣ್ಣಿವಿಯೊಳಗ ಉಡೂದಕ್ಕ ಒಂದಾದರೂ ಚಲೋ ಸೀರೆ ಬ್ಯಾಡೇನು ನಿನಗ?" ಎಂದು ಅಪ್ಪ ಅವಳನ್ನು ಸಮಾಧಾನಗೊಳಿಸಲು ಯತ್ನಿಸಿದ.

"ಎಲ್ಲೀ ಹಬ್ಬ, ಎಲ್ಲೀ ಹುಣ್ಣಿವಿ ಬಿಡಿರಿ. ನಮ್ಮಂಥಾ ಬಡವರಿಗೆ ಅದೆಲ್ಲಾ ಸಡಗರ ಯಾತಕ್ಕ?" ಎಂದಳು ಅವ್ವ.

" ಇರಲೇಳು. ಹೆಣ್ಣು ಹುಟ್ಟಿದರ ಅದಕ್ಕ ಆಗುತ್ತೈತಿ ಸೀರೆ."

ಅವನೆಂದ ಹಾಗೇ ಆಯಿತು. ನಾನು – ಹೆಣ್ಣು – ಹುಟ್ಟಿದೆ.

ಅವ್ವನಿಗೇನೋ ಗಂಡೇ ಆಗಬೇಕೆಂಬ ಮನಸ್ಸಿದ್ದಿತಂತೆ.

" ಗಂಡಾದರೇನು, ಹೆಣ್ಣಾದರೇನು, ಎಲ್ಲಾ ಒಂದು ಅಲ್ಲೇನು ಮಾದೇವೀ!" ಎಂದು ಅಪ್ಪ ಅವಳನ್ನು ಸಂತೈಸಿದ. ನನ್ನ ಮುಖವನ್ನು ನೋಡುತ್ತಾ ಅವ್ವ ತನ್ನ ಅಸಮಾಧಾನವನ್ನೂ ಮರೆತು ಆನಂದದಿಂದ ನಲಿಯ ತೊಡಗಿದಳು. ಅಪ್ಪನಿಗಂತೂ ಎದೆಯಲ್ಲಿ ಹಿಡಿಸಲಾರದಷ್ಟು ಹಿಗ್ಗು. ಸಂಬಂಧಿಕ ರನ್ನೆಲ್ಲ ಕಳೆದುಕೊಂಡು, ಮನೆ ಮಾರು ತ್ಯಜಿಸಿ, ಬೇರೊಂದು ಊರಿಗೆ ಬಂದು, ಯಾರ ಆಶ್ರಯದಲ್ಲೋ ನಿಂತು ಹೊಟ್ಟೆಗಾಗಿ ದುಡಿಯುತ್ತ ಬಂದು ನಿರ್ಗತಿಕ ರಂತೆ ಜೀವನ ಸಾಗಿಸಿದ್ದ ಅವರಿಗೆ – ತಮಗೂ ಒಂದು ಮಗುವಾಯಿತು, ತಮ್ಮ ಮನೆಯೂ ಒಂದು ಮನೆಯಂತಾಯಿತು ಎಂದು ಎಷ್ಟೋ ಸಮಾಧಾನ ವಾಗಿತ್ತು.

ಮದುವೆಯ ಕಾಲಕ್ಕೆ ಬಂದು ನೆರವಾಗಿದ್ದ ಮುದುಕಿಯೇ ನಾನು ಜನಿಸಿದ ದಿನವೂ ಬಂದು ಅವ್ವನಿಗೂ ನನಗೂ ನೀರು ಹಾಕಿದ್ದಳು. ಎಂಟು ಹತ್ತು ದಿನ ಅಲ್ಲಿಯೇ ಇದ್ದು ಅವ್ವನನ್ನೂ ನನ್ನನ್ನೂ ನೋಡಿಕೊಂಡಿದ್ದಳು.

ನಾನು ಬೆಳೆಯುತೊಡಗಿದ್ದೆ. ನನ್ನ ಬಾಲಲೀಲೆಗಳನ್ನು ನಿರೀಕ್ಷಿಸುತ್ತಾ ಅಪ್ಪ ಅವ್ವ ನಲಿಯುತ್ತಿದ್ದರು. ನಾನು ಸ್ವಲ್ಪ ದೊಡ್ಡವಳಾಗುತ್ತಲೂ ಅಪ್ಪ ನನ್ನನ್ನು ಹೆಗಲ ಮೇಲೇರಿಸಿಕೊಂಡು ನೇಯ್ಗೆಯ ಮನೆಗೆ ಕರೆದೊಯ್ಯ ತೊಡಗಿದ್ದ.

" ಆಗ ಹೆಂಡತೀನ್ನ ಹೊತ್ತುಕೊಂಡು ಬರುತಿದ್ದಿ. ಈಗ ಮಗಳನ್ನ ಹೊತ್ತುಕೊಂಡು ಬರುತ್ತೀ. ಇನ್ನು ಹತ್ತಿಪ್ಪತ್ತು ವರ್ಷಕ್ಕ ಮೊಮ್ಮಗಳನ್ನ ಹೊತ್ತುಕೊಂಡು ಬರುತೀ ಆಯ್ತು!" ಎಂದು ಹೇಳಿ ನಗುತ್ತಿದ್ದರಂತೆ ಸಾಹು ಕಾರರು.

ಈಗ ಮೂರು ಜೀವಗಳಾಗಿರಲಿಲ್ಲವೆ ಮನೆಯಲ್ಲಿ? ಅಪ್ಪನ ಕೂಲಿ ಸಾಲ ದೆಂದು ತಿಳಿದು ಅವ್ವನೂ ಕೆಲಸ ಕೈಗೊಂಡು ರೇಶಿಮೆ ಪಟ್ಟೆಯನ್ನು ತಂದು

ಮನೆಯಲ್ಲೇ ಕುಳಿತು ಅದನ್ನು ತೋಡುವುದಕ್ಕಾರಂಭಿಸಿದಳು. ಅದರಿಂದ ಬರುವು ದಾದರೂ ಎಷ್ಟು ?

ನಾನು ಬೆಳೆಯುತ್ತಲೇ ಇದ್ದೆ.

" ನೋಡು ಮಾದೇವೀ. ನಾವು ಹ್ಯಾಗೋ ಬಡತನದಿಂದ ಸಾಗಿಸಿದೆವು. ನೀನು ಸಣ್ಣವಳಿದ್ದಾಗ ಒಂದೇ ಪರಕಾರ ಇದ್ದರೂ ನಮಗೇನೂ ಅನಿಸಲಿಲ್ಲ. ಈಗ ಮಗಳು ಹುಟ್ಟಿದಾಳ. ಅವಳು ಮಾತ್ರ ನಿನ್ನ ಹಾಂಗ ಒಂದೇ ಪರಕಾರದ ಮ್ಯಾಲ ಇರುವದನ್ನ ನಾ ನೋಡಲಾರೆ," ಎನ್ನುತ್ತಿದ್ದ ಅಪ್ಪ.

" ಹೌದೌದು. ಗಿರಿಜಾಗ ಇನ್ನೆರಡು ಪರಕಾರ ಹೊಲಿಸಬೇಕು," ಎನ್ನು ವಳು ಅವ್ವ.

" ನಮ್ಮದೇ ಒಂದು ಮನೆ, ಒಂದು ಮಗ್ಗ, ಕೈಯೊಳಗ ನೂರಾರು ರೂಪಾಯಿ ಇದ್ದರೆಷ್ಟು ಚಲೋ ಆಗುತಿತ್ತು ಮಾದೇವೀ! ಈಗ ಸೀರೆಗೆ ಧಾರಣೆಯೂ ಹೆಚ್ಚಾಗಲಿಕ್ಕೆ ಹತ್ತ್ಯೈತಿ. ನಮ್ಮದೂ ಸ್ವಂತದ ಮಗ್ಗ ಇದ್ದಿದ್ದರೆ ನಾವೂ ಸ್ವಲ್ಪಾದರೂ ಸುಖದಿಂದ ಇರಲಿಕ್ಕೆ ಬರುತಿತ್ತು."

" ಹೋಗಲಿ ಬಿಡಿರಿ. ದೇವರಿದ್ದಾನ. ಇದೇ ದಿನ ಕಡೆತನಕಾ ಇರಲಿಕ್ಕಿಲ್ಲ. ನಮಗೂ ಚಲೋ ಕಾಲ ಬಂದೀತು," ಎನ್ನುವಳು ಅವ್ವ.

ನಾನು ಬೆಳೆಯುತ್ತಲೇ ಇದ್ದೆ.

ನನಗಾಗ ಆರೇಳು ವರ್ಷ ವಯಸ್ಸಿರಬಹುದು. ಅಪ್ಪನೊಡನೆ ನೇಯ್ಗೆಯ ಮನೆಗೆ ಹೋಗಿಬರುತ್ತಿದ್ದೆನಾದುದರಿಂದ ಅಕ್ಕಪಕ್ಕದ ಮನೆಗಳ ಹುಡುಗರ ಜತೆಗೆ ಬಳಕೆಯಾಗಿತ್ತು. ಸಾಹುಕಾರರ ಮನೆಯೂ ಅಲ್ಲೇ ಇತ್ತು, ಸಮೀಪ ದಲ್ಲೇ. ಅವರಿಗೂ ನನ್ನ ವಯಸ್ಸಿನ ಮಗಳೊಬ್ಬಳಿದ್ದಳು. ಸುಂದರವ್ವ ಎಂದು ಹೆಸರು ಅವಳಿಗೆ. ಅವಳಿಗೊಬ್ಬ ಅಣ್ಣನೂ ಇದ್ದ. ಅವನಿಗಾಗ ಹತ್ತೋ ಹನ್ನೊಂದೋ ವಯಸ್ಸು. ಅವನ ಹೆಸರು....

ಅವನ ಹೆಸರು ಹೇಳಬೇಕಾದರೆ ಈಗಲೂ ನನ್ನೆದೆ ಹಾರುತ್ತಿದೆ. ನನ್ನ ಮೈ ಮೇಲೆ ನವಿರೇಳುತ್ತಿದೆ. ನನ್ನ ಕತ್ತು ಬಿಗಿದು ಬರುತ್ತಿದೆ.

ಮೂರು ಮಕ್ಕಳ ತಾಯಿಯಾಗಿರುವ ನನಗೂ ಇಂಥ ಭಾವನೋ

ದ್ರೇಕವೇ! ಎಂದು ನೀನು ಅಚ್ಚರಿಪಟ್ಟುಕೊಳ್ಳುವೆಯೇನೋ! ಆದರೆ, ನನಗೆ ಮಾತ್ರ ಹಾಗಾಗುವುದು ನಿಜ. ಅವನ ಹೆಸರು ಕೇಳಿದಾಗಲೆಲ್ಲ, ಅವನ ನೆನಪು ಬಂದಾಗಲೆಲ್ಲ ನನ್ನ ಹೃದಯದಲ್ಲಿ ಮಧುರ ಯಾತನೆ ಮರುಕಳಿಸುತ್ತದೆ ಈಗಲೂ.

ಅವನ ತಂದೆತಾಯಿಗಳು ಅವನಿಗಿಟ್ಟ ಹೆಸರು ಮಲ್ಲಿಕಾರ್ಜುನ ಎಂದು. ಹುಡುಗರೆಲ್ಲರೂ ಅವನನ್ನು ಮಲಕಾಜಿ ಎಂದು ಕರೆಯುತ್ತಿದ್ದರು. ನಾನೂ ಹಾಗೇ ಕರೆಯುತ್ತಿದ್ದೆ.

ನಾವೆಲ್ಲರೂ ಸೇರಿ ಚೆಂಡಾಟ ಆಡುತ್ತಿದ್ದುದಿತ್ತು. ಅವರು ನನ್ನನ್ನು ಆಟದಲ್ಲಿ ಸೇರಿಸಿಕೊಳ್ಳುತ್ತಿದ್ದರಾದರೂ ನನ್ನೊಡನೆ ಸರಿಯಾಗಿ ನಡೆದುಕೊಳ್ಳುತ್ತಿರಲಿಲ್ಲ. ಸುಂದರವ್ವನಿಗಂತೂ ಬಹಳ ಬಿಂಕ. ನನ್ನ ಅಗ್ಗದ ಪರಕಾರವನ್ನು ಕಂಡು ಅವಳು ಚೇಷ್ಟೆಮಾಡಿ ನಗುವಳು. ಅವಳವು ಎಂಟು ಹತ್ತು ಪರಕಾರಗಳಿದ್ದುವು. ಎಲ್ಲಾ ಬೇರೆ ಬೇರೆ ಬಣ್ಣದವು. ಜರತಾರಿ ಅಂಚಿನವು, ರೇಶಿಮೆಯವು. ದಿನಕ್ಕೊಂದು ಪರಕಾರ ತೊಟ್ಟು ನನ್ನನ್ನು ಹಂಗಿಸುವಳು ಸುಂದರವ್ವ. ನನಗೆ ಅತ್ತುಕೊಳ್ಳುವ ಹಾಗಾಗುತ್ತಿತ್ತು. ಅವಳದಂಥ ಪರಕಾರಗಳು ನನಗೂ ಇಲ್ಲವಲ್ಲಾ ಎಂದು ವ್ಯಸನವಾಗುತ್ತಿತ್ತು.

"ಅವ್ವಾ, ನನಗೊಂದು ರೇಶಿಮೆ ಪರಕಾರ ಹೊಲಿಸಿಕೊಡೇ," ಎಂದು ನಾನೊಂದು ದಿನ ಕೇಳಿದೆ ತಾಯಿಯನ್ನು.

"ನಿನಗ್ಯಾತಕ್ಕೇ ರೇಶಿಮೇ ಪರಕಾರ?"

"ಮತ್ತೆ! ಸುಂದರವ್ವ ರೇಶಿಮೇದ್ದು ತೊಡುತಾಳಲ್ಲ ಅವ್ವಾ?"

"ಅವಳು ಸಾವುಕಾರರ ಮಗಳು. ತೊಡುತಾಳ. ನೀನು ಬಡವರ ಮಗಳು. ನಿನಗ ಇಂಥಾ ಸಾದಾ ಪರಕಾರನs ಇರಬೇಕು."

ಸಿರಿವಂತಿಕೆ–ಬಡತನಗಳಲ್ಲಿನ ವ್ಯತ್ಯಾಸ ಆಗ ನನಗೆ ಅರ್ಥವಾಗುವುದಾದರೂ ಹೇಗೆ? ಅವ್ವನ ಮಾತಿನಿಂದ ನನಗೇನೂ ಸಮಾಧಾನವಾಗಲಿಲ್ಲ.

"ಊಹೂಂ. ನನಗೂ ರೇಶಿಮೇ ಪರಕಾರ ಬೇಕವ್ವಾ," ಎಂದು ನಾನು ಹಟ ಹಿಡಿದು ಕುಳಿತೆ.

ಸಾಯಂಕಾಲ ಅಪ್ಪ ಬರುತ್ತಲೂ, ಮೂಲೆಯಲ್ಲಿ ಮುಖ ಉಬ್ಬಿಸಿಕೊಂಡು ಕುಳಿತಿದ್ದ ನನ್ನನ್ನು ಕಂಡು ದಿಗಿಲುಗೊಂಡು,

"ಯಾಕ ಗಿರಿಜವ್ವಾ, ಏನಾತು? ಯಾಕ ಸಿಟ್ಟು?" ಎಂದು ಕೇಳಿದ.

ಅವ್ವ ಎಲ್ಲವನ್ನೂ ವಿವರಿಸಿ ಹೇಳುತ್ತಲೂ ಅಪ್ಪನ ಮುಖದ ಮೇಲೆ ವ್ಯಥೆಯು ಕಾರ್ಮೋಡ ಕವಿದಂತಾಯಿತು. ನನ್ನನ್ನೆತ್ತಿ ಮುದ್ದಿಸುತ್ತಾ ಅವನು ಹೇಳಿದ:

"ಹೀಂಗೆಲ್ಲಾ ಹಟ ಮಾಡಬಾರದು ಗಿರಿಜವ್ವಾ. ನೀನು ಚಲೋ ಹುಡುಗಿ. ಸಿಟ್ಟು ಸೆಡವು ಮಾಡಬಾರದು. ಎಲ್ಲಿ, ನಗು ಸ್ವಲ್ಪ, ನಗು...."

ನಾನು ನಗಲಿಲ್ಲ. ತುಟಿಗಳನ್ನು ಕೊಂಕಿಸಿ ಮುಖವನ್ನತ್ತ ತಿರುಗಿಸಿದೆ.

"ರೇಶಿಮಿಾ ಪರಕಾರಾ ತಂದುಕೊಡೂತನಕಾ ಇವಳೇನು ಸಿಟ್ಟು ಬಿಡೂ ಹಾಂಗ ಕಾಣೂದಿಲ್ಲ," ಎಂದಳು ಅವ್ವ.

"ಹೋಗಲಿ. ಮುಂದಿನ ತಿಂಗಳ ಸಂಬಳ ಬಂದ ವ್ಯಾಲ ತಂದು ಕೊಡ್ತೇನಿ," ಎಂದ ಅಪ್ಪ.

"ಊಹೂಂ. ನನಗ ಇಂದಃ ಬೇಕು," ಎಂದು ನಾನು ಹಟ ಹಿಡಿದು ಕುಳಿತೆ.

"ಇಂದಃ ಬೇಕು ಅಂದರ ಎಲ್ಲಿಂದ ತಂದುಕೊಡಲಿ ಗಿರಿಜವ್ವಾ? ನಾವೇನು ಸಾವುಕಾರರೇ?" ಎಂದ ಅಪ್ಪ.

ಮಾರನೆಯ ದಿನ ಸಂಜೆ ಅವನು ಕೆಲಸದಿಂದ ಬಂದಾಗ ಅವನ ಕೈಯಲ್ಲಿ ರೇಶಿಮೆಯದೊಂದು ಪರಕಾರವಿದ್ದುದನ್ನು ಕಂಡು ನನಗೆ ಹಿಡಿಸಲಾರದಷ್ಟು ಹರ್ಷವಾಯಿತು.

"ಅಪ್ಪ ನನಗೂ ರೇಶಿಮಿ ಪರಕಾರಾ ತಂದ," ಎಂದು ಹೇಳುತ್ತಾ ನಾನು ಕುಣಿದಾಡಿದೆ.

"ಎಲ್ಲಿಂದ ತಂದಿರಿ ಇದನ್ನ?" ಎಂದು ಕೇಳಿದಳು ಅವ್ವ.

"ಎಲ್ಲಿಂದಾದರೂ ತಂದೀನಿ. ಅಂತೂ ಹುಡುಗಿಗೆ ಸಮಾಧಾನ ಆತಲ್ಲ," ಎಂದು ಆ ಮಾತು ಮುಗಿಸಿದ ಅಪ್ಪ.

ಮರುದಿವಸ ಆ ಪರಕಾರ ಉಟ್ಟುಕೊಂಡು, ನಾನೂ ಸುಂದರವ್ವನಂತೆ ಬಿಂಕದಿಂದ ನಡೆಯುತ್ತಾ ಆಟವಾಡಲು ಹೋದೆ. ಇನ್ನು ಮುಂದೆ ಅವರು ಮೊದಲಿನಂತೆ ನನ್ನನ್ನು ಹಂಗಿಸುವುದಿಲ್ಲ, ನಗುವುದಿಲ್ಲ ಎಂದೆಲ್ಲ ನಾನು ಭಾವಿಸಿದ್ದೆ. ಆದರೆ, ಸುಂದರವ್ವ ನನ್ನನ್ನು ನೋಡುತ್ತಲೂ ಮೂಗಿನ ಮೇಲೆ ಬೆರಳಿಟ್ಟುಕೊಂಡು ಕಿಸಕಿಸೆಂದು ನಕ್ಕಳು.

" ಯಾಕಽ? ಯಾಕ ನಗ್ತೀಯೇ?"

ಅವಳು ನನಗೆ ಉತ್ತರವೀಯುವ ಗೊಡವೆಗೆ ಹೋಗದೆ, ನಾಲಗೆಯನ್ನು ಹೊರದೆಗೆದು ನನ್ನನ್ನು ಅಣಕಿಸುತ್ತಾ ಮತ್ತೆ ನಗತೊಡಗಿದಳು.

" ಪರಕಾರ ನೋಡಿರೇ ಭಿಕಾರೀದು!

ಪರಕಾರ ನೋಡಿರೇ ಭಿಕಾರೀದು!" ಎಂದು ರಾಗ ತೆಗೆದಳು ಸುಂದರವ್ವ.

ನನಗೆ ಯಾವುದೂ ಅರ್ಥವಾಗಲಿಲ್ಲ. ಅಳುವುಕ್ಕಿ ಬಂತು. ಸಾಹುಕಾರರ ಮನೆಯ ಕಟ್ಟೆಯ ಮೇಲೆ ಕುಳಿತು, ಮೊಳಕಾಲುಗಳಲ್ಲಿ ಮುಖ ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅಳತೊಡಗಿದೆ.

ಚೆಂಡಾಟವಾಡುತ್ತಿದ್ದ ಮಲಕಾಜಿ ನಾನು ಅಳುವುದನ್ನು ಕಂಡು, ಆಟ ನಿಲ್ಲಿಸಿ ಓಡುತ್ತಾ ಬಂದು ನನ್ನ ಮುಖವನ್ನು ಹಿಡಿದು ಮೇಲಕ್ಕೆತ್ತಿದ.

" ಯಾಕಳ್ತೀಯೇ ಗಿರಿಜಾ? ಏನಾತು ನಿನಗ? ಏನಾತು?"

" ಸುಂದರವ್ವ ಹೆಂಗೆಂಗೋ ಮಾತಾಡುತಾಳ ನೋಡು," ಎಂದು ಹೇಳಿ ನಾನು ಮತ್ತೆ ಬಿಕ್ಕತೊಡಗಿದೆ.

ಮಲಕಾಜಿ ತನ್ನ ತಂಗಿಯನ್ನು ಗದರಿಸಿದ, ನನ್ನ ಕಣ್ಣೀರು ಒರೆಸಿದ, ನನ್ನನ್ನು ಮೇಲಕ್ಕೆಬ್ಬಿಸಿ ತನ್ನ ಜೊತೆಗೇ ಆಟಕ್ಕೆ ತೊಡಗಿಸಿದ. ಆ ಕ್ಷಣಕ್ಕೆ ಸುಂದರವ್ವನಿಂದಾದ ಅವಮಾನವನ್ನು ನಾನು ಮರೆತುಬಿಟ್ಟು ಆಟದಲ್ಲಿ ತಲ್ಲೀನಳಾದೆನಾದರೂ ಆಟ ಮುಗಿದ ಬಳಿಕ ಮತ್ತೆ ಆ ಸಂಗತಿಯ ನೆನಪು ಬರದಿರಲಿಲ್ಲ.

" ಸುಂದರವ್ವ ಹಿಂಗ್ಯಾಕ ಮಾಡುತಾಳ ಮಲಕಾಜಿ?"

" ಯಾಕೇ ಸುಂದ್ರಾ? ಗಿರಿಜಾಗ ಹಿಂಗ್ಯಾಕ ಮಾಡುತೀಯೋ?" ಎಂದು ತಂಗಿಯನ್ನು ಕೇಳಿದ ಮಲಕಾಜಿ.

“ಪರಕಾರ ನೋಡೋ ಅವಳ ಪರಕಾರಾ!” ಎಂದು ರಾಗವಾಗಿ ಹೇಳುತ್ತಾ ಕೈ ತಿರುವಿ ನಕ್ಕಳು ಸುಂದರವ್ವ. ಅದುವರೆಗೂ ನನ್ನ ಪರಕಾರದ ಕಡೆ ಮಲಕಾಜಿಯ ದೃಷ್ಟಿಯೇ ಹೊರಳಿರಲಿಲ್ಲವೇನೊ. ಅವನು ಕುತೂಹಲದಿಂದ ಅದನ್ನು ದಿಟ್ಟಿಸಿದ. ಎಲ್ಲವೂ ಅರ್ಥವಾಗಿರಬೇಕು. ಮುಂದೆ ಮಾತನಾಡದಿರುವಂತೆ ತಂಗಿಗೆ ಸೂಚನೆಕೊಡುತ್ತಿದ್ದ ಹಾಗೇ ಅವಳು,

“ನನ್ನ ಪರಕಾರಾ ಉಟುಕೊಂಡು ನನ್ನ ಮುಂದಃ ಜೋಕು ಮಾಡುತಾಳ?” ಎಂದಳು.

ಆಟಕ್ಕೆ ನೆರೆದ ಹುಡುಗ ಹುಡುಗಿಯರೆಲ್ಲ ಗಹಗಹಿಸಿ ನಕ್ಕರು.

ಮಲಕಾಜಿಯೊಬ್ಬ ನಗಲಿಲ್ಲ.

ನಾನು ತೊಟ್ಟುಕೊಂಡಿದ್ದುದು ಸುಂದರವ್ವನ ಹಳೆಯ ಪರಕಾರವೆಂಬ ಸಂಗತಿ ಗೊತ್ತಾಗುತ್ತಲೂ ನೆರೆದಿದ್ದ ಹುಡುಗ ಹುಡುಗಿಯರೆಲ್ಲರೆದುರಿಗೆ ಮುಖ ಭಂಗವಾದಂತಾಗಿ ನನಗೆ ಮತ್ತೆ ಅಳುವುಕ್ಕಿ ಬಂದಿತು. ಅಲ್ಲಿ ನಿಲ್ಲಲಾರದೆ ಮನೆಯ ಕಡೆ ಓಟ ಬಿಟ್ಟೆ.

ಮನೆಗೆ ಬಂದು, ಆ ಪರಕಾರವನ್ನು ಕಳಚಿ ಬಿಸುಟು, ನನ್ನದನ್ನು ಉಟ್ಟುಕೊಂಡು ಮೂಲೆಯಲ್ಲಿ ಬಿದ್ದುಕೊಂಡೆ.

“ಯಾಕವ್ವಾ, ಏನಾತು? ಮತ್ತೇನಾತು?” ಎಂದು ಅವ್ವ ಮತ್ತೆ ಮತ್ತೆ ಕೇಳಿದಳು.

ನಾನು ಒಂದು ಮಾತನ್ನು ಆಡದೆ ಹಾಗೇ ಬಿದ್ದು ಕೊಂಡಿದ್ದೆ.

ಸಾಯಂಕಾಲ ಅಪ್ಪ ಬಂದು, ನನ್ನನ್ನೆತ್ತಿಕೊಂಡು ಪರಿ ಪರಿಯಾಗಿ ಸಂತೈಸಿದ ಬಳಿಕ ನಾನು ಸಿಟ್ಟಿನಿಂದ ಕೇಳಿದೆ:

“ಹೊಸಾ ಪರಕಾರ ಅಂತ ಹೇಳಿ ಸುಂದರವ್ವನ ಹಳೇ ಪರಕಾರಾ ಯಾಕ ತಂದುಕೊಟ್ಟಿ ನನಗ ಅಪ್ಪಾ?”

“ಓಹ್ಹೊ! ಅದಕ್ಕೋ ಸಿಟ್ಟು?”

“ಹೌದೇನ್ರೀ? ಅದು ಸುಂದರವ್ವಂದೇನು?” ಎಂದಳು ಅವ್ವ.

" ಹೌದು. ಸೀತಮ್ಮಾವರಿಗೆ ಕೇಳಿಕೊಂಡು ಹುಡುಗಿಗೆ ಅಂತ ತಗೊಂಡು ಬಂದಿದ್ದಿನಿ."

ಸ್ವಲ್ಪ ಹೊತ್ತು ಸುಮ್ಮನಿದ್ದು ಚಿಂತೆಯಿಂದ ಭಾರವಾದ ಧ್ವನಿಯಲ್ಲಿ ಅವ್ವ ಎಂದಳು :

" ಈ ಹುಡುಗಿಯೇನು ನನ್ನ ಹಾಂಗ ಆದಾಳು ಅಂತನ್ನಿಸುವದಿಲ್ಲ."

ಆ ಮಾತನ್ನು ಆಗ ನಾನು ಪೂರ್ತಿಯಾಗಿ ಅರ್ಥಮಾಡಿಕೊಳ್ಳಲಿಲ್ಲ. ಈಗ ಅರ್ಥವಾಗುತ್ತಿದೆ. ಅವಳು ಅಂದು ಹೇಳಿದ ಹಾಗೇ ಆಯಿತಲ್ಲವೆ ? ಅವಳ ಹಾಗೆ ಬಡತನದ ಬಾಳುವೆಯಲ್ಲೇ ತೃಪ್ತಿಪಟ್ಟುಕೊಂಡು ಮರ್ಯಾದೆಯಿಂದ ಸಂಸಾರ ಮಾಡುವ ಹೆಣ್ಣು ನಾನಾಗಲಿಲ್ಲ.

ಅವ್ವನ ಅಭಿಪ್ರಾಯವನ್ನು ಅಪ್ಪ ಅನುಮೋದಿಸಲಿಲ್ಲ.

" ಇನ್ನೂ ಅರೀದ ಹುಡುಗಿ ಬಿಡೇ. ಸ್ವಲ್ಪ ತಿಳಿವಳಿಕೆ ಬಂದ ಮ್ಯಾಲ ಹಿಂಗ್ಯಾಕ ಮಾಡಿಯಾಳು !" ಎಂದನಾತ.

" ನನಗೇನು ಬ್ಯಾಡ ಅವಳ ಪರಕಾರಾ. ಅವಳದು ಅವಳಿಗೇ ಕೊಟ್ಟು ಬಾ," ಎಂದೆ ನಾನು.

" ಹಾಂಗೇ ಮಾಡುತೀನಿ ಏಳವ್ವ. ಈಗ ಊಟ ಮಾಡೇಳು ಮಗಳೇ," ಎಂದ ಅಪ್ಪ.

" ಸಂಬಳ ಬಂದ ಮ್ಯಾಲ ರೇಶಿಮಿ ಪರಕಾರ ಹೊಲಿಸಿಕೊಡುತೀಯಾ ಅಪ್ಪಾ ?"

" ಹೂಂನವ್ವಾ."

ಆಗ ಮಾತ್ರ ನನ್ನ ಮನಸ್ಸು ಸಮಾಧಾನಗೊಂಡಿತು.

ಮಾತು ಕೊಟ್ಟ ಮೇರೆಗೆ ಆ ತಿಂಗಳ ಸಂಬಳ ಬರುತ್ತಲೂ ನನಗೊಂದು ಚಂದಾದ ರೇಶಿಮೆಯ ಪರಕಾರ ಹೊಲಿಸಿಕೊಟ್ಟ ಅಪ್ಪ.

ನಾನು ಅದನ್ನುಟ್ಟುಕೊಂಡು ಆಟವಾಡಲು ಹೋಗುತ್ತಲೂ ಸುಂದರವ್ವ ಮೊದಲಿನಂತೆ ನಗಲಿಲ್ಲ.

"ಏನು ಗಿರಿಜಾ, ಎಷ್ಟು ಚಂದ ಐತೆಲ್ಲ ನಿನ್ನ ಪರಕಾರ!" ಎಂದ ಮಲಕಾಜಿ.

ಅಂದು ನನಗಾದ ಆನಂದ ಎಷ್ಟು ವರ್ಣಿಸಿದರೂ ತೀರದು.

ಅಂದಿನಿಂದ ಮಲಕಾಜಿ ನನಗೆ ಆತ್ಮೀಯನಾದ. ನಾನು ವಿಶೇಷವಾಗಿ ಅವನ ಜೊತೆಗೇ ಓಡಿಯಾಡತೊಡಗಿದೆ. ಅವನೂ ನನ್ನ ಪಕ್ಷ ವಹಿಸಿ ಇತರ ಹುಡುಗರೊಡನೆ ಜಗಳಕ್ಕೆ ನಿಲ್ಲುತಿದ್ದ.... ತನ್ನ ತಾಯಿ ಕೊಟ್ಟ ತಿಂಡಿ ತಿನಿಸುಗಳನ್ನು ನನಗೆ ಕೊಡದೆ ತಾನೊಬ್ಬನೇ ಎಂದೂ ತಿನ್ನುತ್ತಿರಲಿಲ್ಲ. ನಮ್ಮಿಬ್ಬರ ಸಖ್ಯವನ್ನು ನೋಡಿ ಸುಂದರವ್ವ ಹಾಸ್ಯ ಮಾಡತೊಡಗಿದಳು.

"ನಿನ್ನ ಗಂಡ ಮಲಕಾಜಿ,

ನಿನ್ನ ಗಂಡ ಮಲಕಾಜಿ!" ಎಂದು ಹಾಡುತ್ತಾ ಪಿಸಿ ಪಿಸಿ ನಗುವಳು ಸುಂದರವ್ವ. ಇನ್ನಿತರ ಹುಡುಗ ಹುಡುಗಿಯರೂ ನಗುವರು.

ಅದರಿಂದಾಗಿ ನನಗೇನೂ ಸಿಟ್ಟು ಬರುತ್ತಿರಲಿಲ್ಲ. ಅವರೊಡನೆ ನಾನೂ ನಗುತ್ತಿದ್ದೆ.

ನಾನು ನಗುವುದನ್ನು ನೋಡಿ ಮಲಕಾಜಿಯೂ ನಗುತ್ತಿದ್ದ.

"ಏನೇ, ಮಲಕಾಜಿಯನ್ನ ಮಾಡಿಕೊಳ್ತೀಯೇನೇ?" ಎಂದು ನನ್ನನ್ನು ಪೀಡಿಸುವಳು ಸುಂದರವ್ವ.

"ನನ್ನ ಮನಸು ಬಂದರ ಮಾಡಿಕೊಂಡೇನು. ನೀನ್ಯಾರು ಕೇಳುವಾಕಿ?"

"ನನ್ನ ಕೇಳದಃ ಅವ ನಿನ್ನ ಮಾಡಿಕೊಂಡಾನೇನು!"

"ಹೌದೇನೋ ಮಲಕಾಜಿ?" ಎಂದು ನಾನು ಅವನನ್ನು ಕೇಳುತ್ತಿದ್ದೆ.

"ಬಿಡು ಬಿಡು. ಇವಳನ್ನ್ಯಾರು ಕೇಳುತಾರ!" ಎನ್ನುತ್ತಿದ್ದನಾತ.

ಸುಂದರವ್ವ ರೇಗಿ ನೇರವಾಗಿ ತಾಯಿಯ ಹತ್ತಿರ ಹೋಗಿ ನಮ್ಮ ವಿರುದ್ಧ ದೂರು ಹೇಳುತ್ತಿದ್ದಳು.

ಸೀತಮ್ಮ ನಗುನಗುತ್ತಾ ಹೊರಗೆ ಬಂದು, ನನ್ನನ್ನೂ ಮಲಕಾಜಿಯನ್ನೂ ದಿಟ್ಟಿಸುತ್ತಾ,

"ಹೌದೇನೋ ಮಲಕಾಜಿ, ನೀನು ಗಿರಿಜನ್ನ ಮಾಡಿಕೊಳ್ತೀಯಾ?" ಎನ್ನುವಳು.

ಅವನು ನಾಚಿಕೊಂಡು ಅಲ್ಲಿ ನಿಲ್ಲದೆ ಓಡಿಹೋಗುವನು.

ಸೀತಮ್ಮ ನನ್ನನ್ನು ಹತ್ತಿರ ಕರೆದು ನನ್ನ ತಲೆಯ ಮೇಲೆ ಪ್ರೀತಿಯಿಂದ ಕೈಯಾಡಿಸಿ,

"ಮಲಕಾಜಿಯನ್ನ ಮಾಡಿಕೊಳ್ತೀಯೇನೇ?" ಎಂದು ಕೇಳುವಳು.

ಪುಟ್ಟ ಹುಡುಗಿ. ನನಗೆಲ್ಲಿಯ ನಾಚಿಕೆ ಆಗ?

"ಹೂಂನವ್ವಾ," ಎನ್ನುತ್ತಿದ್ದೆ.

ಸೀತಮ್ಮ ನಕ್ಕು ನನ್ನ ಕೆನ್ನೆಗಳ ಮೇಲೆ ಕೈಯಾಡಿಸಿ, ನನ್ನನ್ನು ಒಳಗೆ ಕರೆದೊಯ್ದು ತಿಂಡಿ ಕೊಡುವಳು.

ಹಾಗೆ, ಅವರ ಮನೆಯಲ್ಲಿ ಸಿಹಿ ತಿಂಡಿ ತಿನ್ನುವ ಅಭ್ಯಾಸವಾದಂತೆ ನಮ್ಮ ಮನೆಯಲ್ಲಿ ಅಂಥ ತಿಂಡಿ ಏಕೆ ಸಿಕ್ಕುವುದಿಲ್ಲವೋ ಎನ್ನಿಸತೊಡಗಿತು. ಉಂಡೆ, ಕರಜೀಕಾಯಿ, ಚಕ್ಕುಲಿಗಳನ್ನು ಮಾಡಿಕೊಡಬೇಕೆಂದು ತಾಯಿಯನ್ನು ಕಾಡಿಸ ತೊಡಗಿದೆ.

"ಅವೆಲ್ಲಾ ನಮ್ಮಂಥಾ ಬಡವರಿಗೆ ಎಲ್ಲಿಂದ ಬರಬೇಕು ಮಗಳೇ!" ಎನ್ನುವಳು ತಾಯಿ.

"ಮತ್ತೆ! ಸುಂದರವ್ವನ ಮನಿಯಾಗ ದಿನಾಲೂ ಮಾಡುತಾರಲ್ಲ!"

"ಅವರು ಸಾಹುಕಾರರು. ಮಾಡುತಾರ."

"ನಾವೂ ಯಾಕ ಸಾವುಕಾರರಾಗಬಾರದು ಅವ್ವಾ?"

"ಆಗಬೇಕು ಅಂದರ ಹೆಂಗ ಆಗಾಕ ಬಂದೀತು ಮಗಳಃ! ನಿನಗ ತಿಳಿಯೂದಿಲ್ಲ."

ನಿಜ. ನನಗಾಗ ತಿಳಿವಳಿಕೆಯಿರಲಿಲ್ಲ. ಮನಸ್ಸು ಮಾತ್ರ ಸಿಹಿ ಸಿಹಿ ತಿಂಡಿಗಳನ್ನು ಬಯಸುತ್ತಿತ್ತು; ಹೊಸ ಹೊಸ ಅಂದ ಚಂದದ ಬಟ್ಟೆಗಳನ್ನು ಬಯಸುತ್ತಿತ್ತು. ಬೆಳಗಿನಿಂದ ಸಂಜೆಯವರೆಗೆ ಸಾಹುಕಾರರ ಮನೆಯಲ್ಲೇ ಆಟ ವಾಡುತ್ತಿದ್ದು ಸಂಜೆ ಮನೆಗೆ ಬರುತ್ತಿದ್ದೆ. ಅವ್ವ ರೇಶಿಮೆ ತೋಡುವ ಕೆಲಸ ನಿಲ್ಲಿಸಿ ಅಡುಗೆಗೆ ತೊಡಗುತ್ತಿದ್ದಳು. ಆ ವೇಳೆಗೆ ಅಪ್ಪನೂ ಬರುತ್ತಿದ್ದ: "ಗಿರಿಜವ್ವಾ," ಎನ್ನುತ್ತಲೇ, ನಾನು ಓಡುತ್ತ ಹೋಗಿ ಅವನನ್ನು ತಬ್ಬಿಕೊಳ್ಳು

ತ್ತಿದ್ದೆ. ನನ್ನನ್ನು ಮುದ್ದಿಸಿ, ಒಂದೆರಡು ಮಾತನಾಡಿದ ತರುವಾಯವೆ ಅವನು ಕೈಕಾಲು ತೊಳೆದುಕೊಳ್ಳುತ್ತಿದ್ದುದು. ನಡುಮನೆಯಲ್ಲಿ ಚೀಲ ಹಾಸಿ ಅವನು ಕುಳಿತುಕೊಳ್ಳುತ್ತಿದ್ದ. ನಾನು ಅವನ ತೊಡೆಯನ್ನೇರುತ್ತಿದ್ದೆ.

"ಅಪ್ಪಾ, ಅಪ್ಪಾ, ಇವತ್ತು ಸೀತವ್ವತ್ತೆ ಲಾಡೂ ಕೊಟ್ಟಳಪ್ಪಾ."

"ಎಲ್ಲಾ ನೀನೇ ತಿಂದು ಬಂದಿಯಾ? ನನಗೇನೂ ತರಲಿಲ್ಲಾ?" ಎನ್ನುವನು ಅಪ್ಪ.

"ನಾಳೆ ತರುತೀನಿ ಅಪ್ಪಾ."

ಅವನು ನನ್ನನ್ನು ಮುದ್ದಿಸಿ,

"ಏನೂ ಬ್ಯಾಡವ್ವಾ. ನೀನಽ ತಿಂದು ದೊಡ್ಡಾಕಿಯಾಗು," ಎನ್ನುವನು.

"ಇಲ್ಲಪ್ಪಾ. ನೀನೂ ತಿನ್ನಬೇಕು."

"ಏನೂ ಬ್ಯಾಡವ್ವಾ. ನೀ ತಿಂದರ ನಾ ತಿಂದ ಹಾಂಗಽ!"

"ಅಪ್ಪಾ, ಅಪ್ಪಾ...."

"ಏನು ಮಗಳಽ?"

"ಊಂ. ಒಂದು ಕಥೀ ಹೇಳಪ್ಪಾ."

ಅಪ್ಪ ಕಥೆ ಹೇಳಲಾರಂಭಿಸುತ್ತಿದ್ದ. ಅದು ಅವನ ಕಥೆಯೇ; ಅವನ ಮತ್ತು ಅವ್ವನ ಕಥೆ.

"ಹೀಂಗ ಒಂದು ಊರಾಗ ಒಂದು ಹುಡುಗಿ ಇತ್ತು. ಹೂಂ ಅನ್ನು ಗಿರಿಜವ್ವಾ."

"ಊಂ."

"ಆ ಹುಡುಗೀನೂ ನಿನ್ನ ಹಾಂಗಽ ಇತ್ತು. ನಿನ್ನಂಥಾದ್ದೇ ಬಣ್ಣಾ, ನಿನ್ನಂಥಾದ್ದೇ ಕಣ್ಣಾ, ನಿನ್ನಂಥಾದ್ದೇ ಬಾಯಿ, ನಿನ್ನಂಥಾದ್ದೇ ಹುಬ್ಬು. ಮೂಗು ಒಂದಽ ಸ್ವಲ್ಪ ಮೊಂಡ ನೋಡು," ಎಂದು ಹೇಳಿ ಅವ್ವನ ಕಡೆ ದೃಷ್ಟಿ ತಿರುಗಿಸಿ ನಗುತ್ತಿದ್ದ ಅಪ್ಪ.

"ಹೂಂ. ನನ್ನ ಮೂಗಿಗೇನು ನಗೂದು! ನಿಮ್ಮ ಮಗಳ ಮೂಗಾದರೂ ನೆಟ್ಟಗಽ ಸಂಪಿಗೀ ಹೂವಿದ್ದಾಂಗ ಐತೆಲ್ಲ!" ಎಂದು ಹೇಳಿ ಅವ್ವನೂ ನಗುತ್ತಿದ್ದಳು.

"ಕಥೀ ಹೇಳು ಅಪ್ಪಾ," ಎಂದು ನಾನು ಮತ್ತೆ ಕಾಡಿಸುತ್ತಿದ್ದೆ.

"ಏನು ಹೇಳಿದಿನಿ ಇದೇ ಈಗ? ಹೂಂ. ಒಂದೂರಾಗಿದ್ದ ಹುಡುಗಿ ನಿನ್ನಾಂಗಽ ಇತ್ತು. ಹೂಂ ಅನ್ನು ಗಿರಿಜವ್ವಾ."

ನಾನು "ಊಂಽಽಽ" ಎನ್ನುತ್ತಿದ್ದೆ.

ಹಾಗೆ ಅಪ್ಪ ಹಿಂದಿನ ನೆನಪುಗಳನ್ನು ಕಥೆ ಮಾಡಿ ಹೇಳುತ್ತಿದ್ದ. ಅಡುಗೆ ಮಾಡುತ್ತಿದ್ದ ಹಾಗೆ ಅವ್ವನೂ ತಲ್ಲೀನಳಾಗಿ ಆಲಿಸುತ್ತಿದ್ದಳು.

"ಮಾದೇವೀ, ಇಲ್ಲಿ ನೋಡೇ. ನಿನ್ನ ಮಗಳು ಹ್ಯಾಂಗ ತೊಡೆಯ ಮ್ಯಾಲ ಕುಂತು ಕೇಳುತಾಳ! ಸಣ್ಣವಳಿದ್ದಾಗ ನೀನೂ ಹೀಂಗಽ ನನ್ನ ತೊಡೆಯ ಮ್ಯಾಲ ಮಲಗಿಕೊಂಡು 'ಮಾವಾ ಮಾವಾ' ಅನ್ನುತ್ತಿದ್ದಿ," ಎನ್ನುತ್ತಿದ್ದ ಅಪ್ಪ.

ಅವ್ವನೂ ಅಡುಗೆಯನ್ನು ಮರೆತು ಹಿಂದಿನ ನೆನಪುಗಳನ್ನು ಹೇಳುವಳು. ಅನೇಕ ಬಾರಿ ಅವರು ನಗುತ್ತಿದ್ದರು, ಅನೇಕ ಬಾರಿ ಕಣ್ಣೀರು ಸುರಿಸುತ್ತಿದ್ದುದೂ ಇತ್ತು.

ಹಾಗೆ ವರ್ಷಗಳುರುಳಿದುವು. ನಾನು ದೊಡ್ಡವಳಾದೆ. ನಿಧಾನವಾಗಿ ತಿಳಿವಳಿಕೆ ಬರತೊಡಗಿತು. ಪ್ರಪಂಚದ ಪರಿಸರದ ಅರಿವಾಗತೊಡಗಿತು. ತಾಯಿಯ ಕೆಲಸಗಳಲ್ಲೂ ನಾನು ನೆರವಾಗತೊಡಗಿದೆ.

ಈ ಮಧ್ಯೆ ಅವ್ವ ಮತ್ತೆ ಗರ್ಭಧರಿಸಿ ಮತ್ತೊಂದು ಹೆಣ್ಣುಮಗು ಹೆತ್ತಳು. ಗೌರಿ ಎಂದು ಅವಳಿಗೆ ಹೆಸರಿಟ್ಟರು.

"ಗಿರಿಜಾಗಿಂತ ಚೆಲುವಿಯಾಗುತಾಳ ಗೌರಿ," ಎನ್ನುವಳು ಅವ್ವ.

"ಊ ಹೂಂ – ಗಿರಿಜಾನಷ್ಟು ಚೆಲುವಿ ಯಾರೂ ಆಗೂದಿಲ್ಲ," ಎನ್ನುವನು ಅಪ್ಪ.

"ಗೌರಿಯ ಮೂಗು ನಿನ್ನಂಥಾದ್ದೂ. ಗಿರಿಜಾನ ಮೂಗು ನನ್ನಂಥಾದ್ದು ನೋಡೇ ಮಾದೇವೀ."

"ಊ ಹೂಂ. ಗೌರಿಯ ಮೂಗು ನಮ್ಮ ಅವ್ವ ನಂಥಾದ್ದು."

"ಕಣ್ಣು ಥೇಟ ನಿನ್ನಂಥಾವೇ."

"ಬಾಯಿ ಮಾತ್ರ ನಿಮ್ಮಂಥಾದ್ದು – ಇಷ್ಟು ಅಗಲ!" ಎಂದು ನಗುವಳು ಅವ್ವ.

ನನಗೊಬ್ಬಳು ಪುಟ್ಟ ತಂಗಿ ದೊರೆತುದರಿಂದ ನನಗೆ ನಿಜವಾಗಿಯೂ ಸಂತೋಷವಾಗಿದ್ದಿತೋ ಇಲ್ಲವೋ ಹೇಳಲಾರೆ. ಅದುವರೆಗೆ ಮನೆಯಲ್ಲಿ ನಾನೊಬ್ಬಳೇ ಮಗಳಾಗಿದ್ದೆ. ತಂದೆತಾಯಿಯರ ಪ್ರೀತಿಯೆಲ್ಲವೂ ನನ್ನೊಬ್ಬಳಿಗಾಗಿಯೆ ಮೀಸಲಾಗಿತ್ತು. ತಂಗಿ ಹುಟ್ಟಿದ ತರುವಾಯ ಆ ಸ್ಥಿತಿ ಬದಲಾಗದಿರಲಿಲ್ಲ. ಸಾಯಂಕಾಲ ಕೆಲಸದಿಂದ ಬರುತ್ತಲೂ ನನ್ನ ಹೆಸರು ಹಿಡಿದು ಕೂಗುತ್ತಿದ್ದ ಅಪ್ಪ ಈಗ ಗೌರಿಯ ಹೆಸರು ಕೂಗತೊಡಗಿದ. ನನ್ನನ್ನು ಮುದ್ದಿಸಿದಂತೆಯೇ ಅವಳನ್ನೂ ಮುದ್ದಿಸುವುದಕ್ಕಾರಂಭಿಸಿದ. ನನ್ನನ್ನು ಆತ ಸಂಪೂರ್ಣವಾಗಿ ಕಡೆಗಣಿಸಿದನೆಂಬೇನೂ ಅಲ್ಲ. ದಿನಕ್ಕೆ ಎರಡು ಮೂರು ಬಾರಿಯಾದರೂ ನನ್ನನ್ನೂ ಮಾತನಾಡಿಸುತ್ತಿದ್ದ. ಆದರೆ, ಮೊದಲಿನ ಸ್ವಾರಸ್ಯವಿರುತ್ತಿರಲಿಲ್ಲ ಈಗ. ನನಗೆ ಒಳಗೊಳಗೇ ತಳಮಳವಾಗದಿರಲಿಲ್ಲ.

ಬರಬರುತ್ತಾ ಗೌರಿಯನ್ನು ನಾನೇ ಎತ್ತಿ ಆಡಿಸಬೇಕಾಯಿತು. ಅವಳಿಗೆ ನೀರು ಹಾಕುವಾಗ ಅವ್ವನಿಗೆ ನೆರವಾಗುವುದು, ಅವಳ ಬಟ್ಟೆಗಳನ್ನು ತೊಳೆಯುವುದು, ಅವಳು ಅಳತೊಡಗಿದಾಗ ಎತ್ತಿಕೊಂಡು ಹೊರಗಡೆ ತಿರುಗಾಡಿಸಿಕೊಂಡು ಬರುವುದು. ಗೌರಿಯನ್ನು ನನ್ನ ವಶಕ್ಕೆ ಕೊಟ್ಟು ರೇಶಿಮೆ ತೋಡುತ್ತಾ ಕೂಡುತ್ತಿದ್ದಳು ಅವ್ವ. ಮಗುವನ್ನು ಹೊತ್ತುಕೊಂಡು ತಿರುಗುವುದೆಂದರೆ ನನಗಾಗುತ್ತಿರಲಿಲ್ಲ. ನನಗೆ ಯಾವಾಗಲೂ ಆಟದಲ್ಲಿ ಆಸೆ. ಮಲಕಾಜಿಯೊಡನೆ ತಿರುಗುವ ಆಸೆ. ಹುಡುಗರೆಲ್ಲರೂ ಸೇರಿ ಗೊಂಬೆಯಾಟ ಆಡುತ್ತಿದ್ದೆವು. ಮಲಕಾಜಿ ಗಂಡನಾಗುತ್ತಿದ್ದ, ನಾನು ಹೆಂಡತಿಯಾಗುತ್ತಿದ್ದೆ, ಗೊಂಬೆಯೊಂದು ನನ್ನ ಮಗುವಾಗುತ್ತಿತ್ತು.

ಗೌರಿಯನ್ನು ತೊಡೆಯ ಮೇಲೆ ಮಲಗಿಸಿಕೊಂಡು ಅವ್ವ 'ಲಾಲಿ' ಹಾಡುತ್ತಿದ್ದ ಹಾಗೆ ನಾನೂ ಆ ಗೊಂಬೆಯನ್ನು ನನ್ನ ತೊಡೆಯ ಮೇಲೆ ಮಲಗಿಸಿಕೊಂಡು 'ಲಾಲಿ' ಹಾಡುತ್ತಿದ್ದೆ.

"ಇನ್ನೂ ಅಡಿಗಿ ಆಗಿಲ್ಲೇನೇ?" ಎಂದು ಗಂಡನಂತೆ ಮಾತಾಡುತ್ತಾ ಮಲಕಾಜಿ ಬರುತ್ತಿದ್ದ.

"ಮಗು ಮಲಗಲಿಲ್ಲ. ಎಷ್ಟೊತ್ತಿನಿಂದ ಅಳುತೈತಿ. ತಗೋ ಇದನ್ನ.

ಆಡಿಸು. ನಾ ಅಡಿಗೀ ಮಾಡುತೀನಿ," ಎಂದು ಹೇಳಿ ಗೊಂಬೆಯನ್ನು ಮಲಕಾಜಿಯ ಕೈಗೆ ಕೊಡುತ್ತಿದ್ದೆ.

ಅವನು ಬಹಳ ಕಳ್ಳ. "ಥೂ? ನಿನ್ನ ಮಗು ನನ್ನ ಮ್ಯಾಲ ಇಶ್ಶೀ ಮಾಡಿತು!" ಎಂದು ಹೇಳಿ ಗೊಂಬೆಯನ್ನೊಗೆದು ಬಂದು ನನ್ನನ್ನು ಅಪ್ಪಿಕೊಂಡು ಮುದ್ದಿಸುತ್ತಿದ್ದ.

"ಬಿಡೋ ಮಲಕಾಜಿ, ಮಗು ನೋಡೀತು!" ಎನ್ನುತ್ತಿದ್ದೆ ನಾನು.

"ನೋಡಿದರೆ ನೋಡಿತು," ಎನ್ನುತ್ತಾ ಅವನು ಮತ್ತೆ ಮತ್ತೆ ನನ್ನನ್ನು ತಬ್ಬಿ ಕೊಳ್ಳುತ್ತಿದ್ದ. ಆಗ ನನಗೆ ಹನ್ನೊಂದು – ಹನ್ನೆರಡು ವರ್ಷವಿರಬಹುದು. ಮಲಕಾಜಿಗೆ ಹದಿನೈದು ಹದಿನಾರು. ಆ ವಯಸ್ಸಿನಲ್ಲೂ ಅವನ ಸಹವಾಸ ನನಗೆ ಪ್ರಿಯವಾಗಿತ್ತು. ಅವನು ನನ್ನನ್ನು ತಬ್ಬಿಕೊಂಡು ಚುಂಬಿಸಿದಾಗ ಅನಿರ್ವಚನೀಯ ಸುಖದ ಅನುಭವವಾಗುತ್ತಿತ್ತು.

ಹನ್ನೊಂದು ಹನ್ನೆರಡು ವರ್ಷಗಳ ಮುಗ್ಧ ಬಾಲೆಗೆ ಇಂಥ ಅನುಭವವೇ! "ಅಸಹಜ, ಅಸ್ವಾಭಾವಿಕ, ಅವಾಸ್ತವ." ಎನ್ನುವ ಹುಚ್ಚರೂ ಇರಬಹುದು ಈ ಪ್ರಪಂಚದಲ್ಲಿ. ಹುಡುಗರ ಮಾನಸಿಕ ಸ್ಥಿತಿಯ ಕಲ್ಪನೆಯೇ ಇವರಿಗಿರುವುದಿಲ್ಲ. ಮಕ್ಕಳಿಗೆ ಏನೂ ತಿಳಿಯುವುದಿಲ್ಲವೆಂಬ ಭಾವನೆಯಿಂದ ಅವರೆದುರಿಗೇ ಪ್ರಣಯಕೇಳಿಯಲ್ಲಿ ನಿರತರಾಗುವ ವಯಸ್ಕರೂ ಇರುತ್ತಾರೆ. ಮಕ್ಕಳಿಗೆ ಎಲ್ಲವೂ ತಿಳಿಯುವುದೆಂಬ ವಿಚಾರ ಇವರ ತಲೆಯಲ್ಲಿ ಎಂದೂ ಸುಳಿಯುವುದಿಲ್ಲ.

ನನ್ನ ಅನುಭವವನ್ನೇ ನೋಡುತ್ತಿರುವಿಯಲ್ಲ ಪ್ರಿಯಸಖಿ, ಏಳೆಂಟು ವರ್ಷದವಳಿದ್ದಾಗಲೇ ನಾನು ಮಲಕಾಜಿಯತ್ತ ಆಕರ್ಷಿತಳಾದೆ. ಹನ್ನೊಂದು – ಹನ್ನೆರಡಕ್ಕಾಗಲೆ ಅವನ ಆಲಿಂಗನದಲ್ಲಿ ಸುಖಿಸತೊಡಗಿದೆ. ಗಂಡ ಹೆಂಡಿರ ಸಂಬಂಧವೆಂದರೆಂಥದೆಂಬುದೂ ಆ ವೇಳೆಗಾಗಲೆ ನನಗೆ ಅಸ್ಪಷ್ಟವಾಗಿಯಾದರೂ ಗೊತ್ತಾಗಿಹೋಗಿತ್ತು. ಮಲಕಾಜಿ ನನಗಿಂತಲೂ ಐದು ವರ್ಷಗಳಿಗೆ ದೊಡ್ಡವನು. ಅವನಿಗಂತೂ ಎಲ್ಲವೂ ಗೊತ್ತಾಗಿಹೋಗಿತ್ತು.

ಅದೇ ವರ್ಷ ಮಲಕಾಜಿ ಕನ್ನಡಶಾಲೆಯ ಕೊನೆಯ ಪರೀಕ್ಷೆ ಮುಗಿಸಿ,

ಇಂಗ್ಲಿಷ್ ಓದಲೆಂದು ಕಳ್ಳೀಕಾಯಿ ನಗರಕ್ಕೆ ಹೊರಟುಹೋದ. ಹೋಗುವುದಕ್ಕೆ ಮೊದಲು ನನಗೆ ತಿಳಿಸಲು ಮರೆಯಲಿಲ್ಲ.

"ಈಗ ಹೋದರ ಬರೂದು ಯಾವಾಗ ಮಲಕಾಜಿ?"

"ಸೂಟಿ ಬಂದಾಗ."

"ಸೂಟಿ ಬರೂದು ಯಾವಾಗ ಮಲಕಾಜಿ?"

"ಹಬ್ಬ ಗಿಬ್ಬ ಬಂದಾಗ. ಪರೀಕ್ಷೆ ಮುಗಿದಾಗ."

"ಅಯ್ಯೋ, ನನ್ನ ಬಿಟ್ಟು ಹೋಗಬ್ಯಾಡ ಮಲಕಾಜಿ," ಎನ್ನುತ್ತಾ ನಾನು ಅವನನ್ನು ತಬ್ಬಿಕೊಂಡು ಕಂಬನಿಸುರಿಸಿದೆ.

ಮಲಕಾಜಿ ತಬ್ಬಿಬ್ಬಾಗಿ ನನ್ನನ್ನು ಹೇಗೋ ಸಮಾಧಾನಗೊಳಿಸಿದ.

ಅವನು ಹೋದ....

ಅವನ ಜೊತೆಗೇ ನನ್ನ ಸಮಸ್ತ ಸಂತೋಷವೂ ಹೋದ ಹಾಗಾಯಿತು.

ಎರಡು ಮೂರು ದಿನ ನನಗೆ ಊಟ ತಿಂಡಿ ಯಾವುದೂ ರುಚಿಸಲಿಲ್ಲ.

"ಯಾಕೇ ಗಿರಿಜಾ, ಏನಾಯಿತೇ?" ಎಂದು ಮತ್ತೆ ಮತ್ತೆ ವಿಚಾರಿಸಿದಳು ಅವ್ವ.

"ಯಾಕವ್ವಾ, ಮೈಯಾಗ ನೆಟ್ಟಗೈತ್ಯೋ ಇಲ್ಲೋ?" ಅಪ್ಪ ಚಿಂತಾತುರನಾಗಿ ಕೇಳಿದ.

"ಏನಿಲ್ಲ, ಏನಿಲ್ಲ," ಎಂದಿಷ್ಟೆ ನುಡಿದು ನಾನು ಸುಮ್ಮನಾದೆ.

ನಾಲ್ಕನೆಯ ದಿನ ಗೌರಿಯನ್ನು ಕಂಕುಳಲ್ಲಿಟ್ಟುಕೊಂಡು ಮಲಕಾಜಿಯ ಮನೆಗೆ ಹೋದೆ.

"ಯಾಕೇ, ಇಷ್ಟು ದಿವಸ ಬರಲಿಲ್ಲ?" ಎಂದಳು ಸುಂದರವ್ವ.

"ಇನ್ನ್ಯಾಕ ಬಂದಾಳು ಇವಳು! ಗಂಡ ಅಂತೂ ಹೋದನಲ್ಲ!" ಎಂದಳು ಪಾರೂ, ನೆರೆಮನೆಯ ಹುಡುಗಿ.

"ಸೂಟಿಯೊಳಗ ಬರುತಾನೇಳೇ!" ಎಂದಳು ಸುಂದರವ್ವ.

"ಅಷ್ಟು ದಿನಾ ಹ್ಯಾಂಗ ತಡಿಯೂದೇ!" ಎಂದಳು ಪಾರೂ.

"ಬೇಕಾದರ ನೀನೂ ಹೋಗಲ್ಲ ಸಾಲೀ ಕಲಿಯೂದಕ್ಕ!" ಎಂದಳು ಸುಂದರವ್ವ.

"ಕನ್ನಡನೇ ಕಲಿತಿಲ್ವಂತೆ. ಇನ್ನು ಇಂಗ್ಲೀಷೇನು ಕಲೀತಾಳ ತಲಿ!" ಎಂದಳು ಪಾರೂ.

ಅವಳಾಡಿದ ಮಾತು ನಿಜವೇ ಆಗಿತ್ತು. ನಾನು ಕನ್ನಡವನ್ನೂ ಕಲಿತಿರಲಿಲ್ಲ. ಅಪ್ಪ ನನ್ನನ್ನು ಶಾಲೆಗೆ ಕಳಿಸಿದ್ದರಷ್ಟೇ, ನಾನು ಕಲಿಯುವುದು? ನನಗೆ ಓದುಬರಹ ಕಲಿಸಬೇಕೆಂಬ ವಿಚಾರ ಅವನಿಗೆಂದೂ ಹೊಳೆದಿರಲಾರದು. ನನಗೂ ಅಷ್ಟು ದಿನ ಆ ಯೋಚನೆಯೇ ಇರಲಿಲ್ಲ. ಸುಂದರೂ ಪಾರೂ ಇಬ್ಬರೂ ಕನ್ನಡ ಶಾಲೆಯಲ್ಲಿ ಓದುತ್ತಿದ್ದರು. ನಾನು ಮಾತ್ರ ಆಟಗಳಲ್ಲೇ ತೃಪ್ತಳಾಗಿದ್ದೆ.

ಆದರೆ, ಆ ದಿನ ಪಾರೂ ಹಾಗೆ ಅಣುಕಿಸುತ್ತಲೂ ನಾನೂ ಓದಲು ಕಲಿತುಕೊಳ್ಳಬೇಕೆಂಬ ವಿಚಾರ ನನ್ನ ಮೆದುಳಿನಲ್ಲಿ ನೆಲೆಯೂರಿತು.

ಅಂದು ಅಪ್ಪ ಮನೆಗೆ ಬರುತ್ತಲೂ ಅವನನ್ನು ಕುರಿತು,

"ನಾನು ಸಾಲಿಗೆ ಹೋಗುತೀನಿ ಅಪ್ಪಾ," ಎಂದು ಹೇಳಿದೆ.

ಅವನು ನಕ್ಕ, ಕೆನ್ನೆಗಳನ್ನು ಕೆರೆದುಕೊಂಡ, ಹೇಳಿದ:

"ಇಷ್ಟು ದೊಡ್ಡಾಕಿಯಾದಿ. ಇಂದು ನಾಳೆ ಮದುವಿಯಾಗಬೇಕು. ಈಗ ಸಾಲಿಗೆ ಹೋಗುವಾಕಿ?"

"ಯಾಕಪ್ಪಾ, ಹೋದರೇನಾಗುತ್ತೈತಿ? ಸುಂದರೂ ಹೋಗೂದಿಲ್ಲೇನು? ಪಾರೂ ಹೋಗೂದಿಲ್ಲೇನು?"

"ಅವರು ನಾಕ್ಕೈದು ವರ್ಷದಿಂದ ಹೋಗುತಾ ಇದಾರ. ನೀನು ಈಗ ಹೋದೀಯಂದರ ಹುಡುಗರೆಲ್ಲಾ ನಕ್ಕಾರು."

"ನಿನಗಾದರೂ ಸಾಲೆ ಯಾತಕ್ಕ ಬೇಕುಃ! ಮನಿಯಾಗಿನ ಕೆಲಸಾ ಕಲಿ. ನಾಳೆ ಮದುವಿಯಾದ ಮ್ಯಾಲ ಅಡಿಗೀ ಮಾಡೂದಕ್ಕ ಬರಲಿಲ್ಲಂದರ ಗಂಡ ಬಡಿಗೀ ತಗೊಂಡು ಬಡಿದಾನು," ಎಂದಳು ಅವ್ವ.

ನಾನು ಮನಸ್ಸಿನಲ್ಲೇ ಹೇಳಿಕೊಂಡೆ: ಮಲಕಾಜಿ ನನ್ನನ್ನು ಎಂದೂ ಹೊಡೆಯಲಿಕ್ಕಿಲ್ಲ. ಹೊಡೆಯುವ ಮಾತಿರಲಿ, ನನ್ನನ್ನು ಧ್ವನಿಯೆತ್ತಿ ಗದರಿಸಲಿಕ್ಕಿಲ್ಲ ಕೂಡಾ.

ಆ ದಿನ ಅಪ್ಪ ಅವ್ವ ಇಬ್ಬರೂ ನನ್ನ ಮದುವೆಯ ಪ್ರಸ್ತಾಪವೆತ್ತುತ್ತಲೂ ನನಗೆ ಹೊಸದೊಂದು ಭೀತಿಯೂ ಅಂಟಿಕೊಂಟಿತು. ನನ್ನನ್ನು ಮಲಕಾಜಿಗೆ ಕೊಡದೆ, ಬೇರೆ ಯಾವನಿಗಾದರೂ ಕೊಟ್ಟು ಮದುವೆ ಮಾಡಲಿಕ್ಕಿಲ್ಲವಷ್ಟೇ ಇವರು? ಹಾಗೆಂದೂ ಆಗಗೊಡಬಾರದೆಂದು ನಾನು ಮನಸ್ಸಿನಲ್ಲೇ ಗಟ್ಟಿ ಮಾಡಿಕೊಂಡೆ.

ಮಲಕಾಜಿಯಂತೂ ನನ್ನನ್ನು ಬಿಟ್ಟು ಬೇರೆಯವರನ್ನು ಮದುವೆಯಾಗುವುದಿಲ್ಲವೆಂದೇ ನನಗೆ ನಂಬಿಕೆಯಿತ್ತು.

೭

ಅಂದಿನ ನನ್ನ ಮನಃಸ್ಥಿತಿಯನ್ನು ಜ್ಞಾಪಿಸಿಕೊಂಡರೆ ಈಗಲೂ ನನಗೆ ನಗು ಬರುತ್ತದೆ, ಈಗಲೂ ನನಗೆ ಅಳು ಬರುತ್ತದೆ.

ಮಲಕಾಜಿಯ ವಿಚಾರವಾಗಿ ಎಂಥ ದೃಢ ವಿಶ್ವಾಸವಿತ್ತು ಆಗ ನನ್ನಲ್ಲಿ!

ಅವನು ನನ್ನವನೇ, ನಾನು ಅವನವಳೇ, ನಮ್ಮಿಬ್ಬರನ್ನು ಯಾರೂ ಬೇರ್ಪಡಿಸಲಾರರು ಎಂಬ ಆ ಹುಚ್ಚುಭಾವನೆ....

ಈ ಭಾವನೆಯನ್ನೇ ಜನರು ಪ್ರೇಮವೆಂಬ ಹೆಸರಿನಿಂದ ಕರೆಯುತ್ತಾರೆನ್ನುವುದು ನನಗೆ ತಿಳಿದುಬಂದುದು ಎಷ್ಟೋ ವರ್ಷಗಳ ತರುವಾಯ.

ಆಗ ಮಾತ್ರ ಅದು 'ಪ್ರೇಮ'ವೆಂಬ ತಿಳಿವಳಿಕೆಯೇನೂ ನನಗಿರಲಿಲ್ಲ.

ಈಗ, ನನ್ನ ಆ ಪ್ರಥಮ ಪ್ರೇಮವನ್ನು – ಅದೇ ಕೊನೆಯ ಪ್ರೇಮವೂ ಹೌದು, ಮಲಕಾಜಿಯನ್ನು ಪ್ರೀತಿಸಿದಂತೆ ನಾನು ಇನ್ಯಾರನ್ನೂ ಪ್ರೀತಿಸಲಿಲ್ಲ – ನೆನಸಿಕೊಂಡು ನಾನು ಅಳುತ್ತೇನೆ. ಈಗಲೂ ಅವನು ಬಂದು ನನ್ನನ್ನು ಕರೆದರೆ ಅವನ ಹಿಂದೆ ಹೊರಟುಬಿಡಲು ಸಿದ್ಧಳಾಗಿದ್ದೇನೆ.

ಆದರೆ,

ಅವನು ಬರುವನೇ? ಪ್ರಿಯಸಖಿ, ಅವನು ಬರುವನೇ?

೮

ಶಾಲೆಗೆ ರಜ ಬಂದಾಗಲೆಲ್ಲ ಊರಿಗೆ ಬರುತ್ತಿದ್ದ ಮಲಕಾಜಿ.

ಒಂದೆರಡು ದಿನ, ಒಂದೆರಡು ವಾರ ಇರುತ್ತಿದ್ದ. ಹೊರಟು ಹೋಗುತ್ತಿದ್ದ.

ಅವನು ಊರಿನಲ್ಲಿರುವಷ್ಟು ದಿನವೂ ನಾನು ಅವರ ಮನೆಯಲ್ಲೇ ಕಾಲ ಕಳೆಯುತ್ತಿದ್ದೆ.

ಮಲಕಾಜಿಯಲ್ಲಿ ದಿನೇ ದಿನೇ ಬದಲಾವಣೆ ಕಂಡುಬರುತ್ತಿತ್ತು. ಮೊದಲಿನಂತೆ ಅವನು ಹುಡುಗಾಟಿಕೆಯಲ್ಲಿ ತೊಡಗದೆ ಸ್ವಲ್ಪ ಗಂಭೀರವಾಗಿಯೇ ವರ್ತಿಸುತ್ತಿದ್ದ. ನನ್ನೊಡನೆ ಮಾತನಾಡುವಾಗಲೂ ಏನೋ ಸಂಕೋಚ ಅವನನ್ನು ತಡೆಹಿಡಿದಂತೆ ತೋರುತ್ತಿತ್ತು. ನನಗೆ ಮಾತ್ರ ಸಂಕೋಚ – ನಾಚಿಕೆ ಯಾವುದೂ ಇರಲಿಲ್ಲ.

" ನೀನು ಕಲಿಯುವುದು ಎಂದು ಮುಗೀತ್ರೈತಿ ಮಲಕಾಜಿ ?"

" ಅದು ಮುಗಿಯೂದೇ ಇಲ್ಲ," ಎಂದು ನಗುತ್ತಾ ಹೇಳುತ್ತಿದ್ದ ಮಲಕಾಜಿ.

" ಮುಗಿಯೂದಿಲ್ಲ ? ಯಾಕ ?"

" ವಿದ್ಯಾ ಅನ್ನೂದು ಎಷ್ಟು ಕಲಿತರೂ ಮುಗಿಯೂದಿಲ್ಲ ಗಿರಿಜಾ."

" ಅಂದರs ? ಇನ್ನು ವ್ಯಾಲ ನೀ ಅಲ್ಲೇ ಇರುವವನೋ ಏನು ?" ನಾನು ದಿಗಿಲುಗೊಂಡು ಕೇಳುತ್ತಿದ್ದೆ.

" ಎಷ್ಟು ವರ್ಷ ಇರುತೇನೋ ನೋಡಬೇಕು."

....ಮತ್ತೆರಡು ವರ್ಷ ಸಂದುವು.

ಈ ಮಧ್ಯೆ ಸೀತವ್ವತ್ತೆಗೆ ಕಾಯಿಲೆಯಾಗಿ ಬಹಳ ನಿಶ್ಯಕ್ತಿಯಾಯಿತು. ಮನೆಯಲ್ಲಿ ಅಡುಗೆ–ನೀರು ನೋಡಿಕೊಳ್ಳುವವರಿಲ್ಲದೆ ಬಹಳ ತೊಂದರೆಯಾದುದರಿಂದ ಅವ್ವನಿಗೆ ಹೇಳಿ ನನ್ನನ್ನು ಸಹಾಯಕ್ಕಾಗಿ ಕರೆದುಕೊಂಡರು. ಅವರ ಮನೆಯಲ್ಲಿ ಕೆಲಸ ಮಾಡುವುದೆಂದರೆ ನನಗೆ ಯಾವಾಗಲೂ ಉತ್ಸಾಹವೇ. ಸೀತವ್ವತ್ತೆ ನನಗೆ ಬಗೆಬಗೆಯ ಪದಾರ್ಥ ತಯಾರಿಸಲು ಕಲಿಸಿದಳು. ನಾನು ಒಲೆಯೆದುರಿಗೆ ಕೂಡುತ್ತಿದ್ದೆ. ಅವಳು ಸ್ವಲ್ಪ ದೂರ, ಮಣೆ ಹಾಕಿಕೊಂಡು ಕುಳಿತು ಅಡುಗೆಯ ಕಲೆಯನ್ನು ಹೇಳಿಕೊಡುವಳು. ಒಂದೆರಡು ತಿಂಗಳು ಅವಳಿಂದ ತರಬೇತಿ ದೊರೆತ ತರುವಾಯ ನಾನೂ ಆ ಕಲೆಯಲ್ಲಿ ಪ್ರವೀಣಳಾದೆ. ಮುಂದೆ ಸೀತವ್ವತ್ತೆ ನನಗೆ ಹೇಳಿಕೊಡಬೇಕಾದ ಅಗತ್ಯವುಳಿಯಲಿಲ್ಲ.

ಎರಡು ಹೊತ್ತೂ ನಾನೂ ಅಲ್ಲೇ ಊಟಮಾಡುತ್ತಿದ್ದೆ. ಅಂಥ ಊಟ ನಮ್ಮ ಮನೆಯಲ್ಲಿ ಸಿಗುವುದು ಸಾಧ್ಯವೆ ? ಎಂದಾದರೊಮ್ಮೆ ನಮ್ಮ ಮನೆಯಲ್ಲಿ ಊಟ ಮಾಡುವ ಪ್ರಸಂಗ ಬಂದಾಗ ನನಗೆ ಸ್ವಲ್ಪವೂ ರುಚಿ ಹತ್ತುತ್ತಿರಲಿಲ್ಲ.

"ಗಿರಿಜವ್ವಗ ಸಾವುಕಾರರ ಮನಿಯ ಊಟ ರೂಢಿಯಾತು. ಇನ್ನು ನಮ್ಮಂಥ ಬಡವರ ಮನಿಯ ಊಟ ಹೆಂಗ ರುಚಿ ಹತ್ತಿತು ?" ಎನ್ನುವನು ಅಪ್ಪ.

"ಅದೇನು ಕಾಯಂ ಏನು ? ಬಡವರ ಮನಿಯ ಹುಡಿಗಿಗೆ ಅಂಥಾ ಚಟ ಹತ್ತಬಾರದು," ಎನ್ನುವಳು ಅವ್ವ.

"ಆ ಮನಿಯೇ ಕಾಯಂ ಆಗುತೈತಿ," ಎಂದು ನಾನು ಮನಸ್ಸಿನಲ್ಲೇ ಹೇಳಿಕೊಳ್ಳುತ್ತಿದ್ದೆ. ನನ್ನ ಕೆಲಸವನ್ನು ಕಂಡು ಮೆಚ್ಚಿಕೊಂಡಿದ್ದ ಸೀತವ್ವತ್ತೆ ನನ್ನನ್ನೇ ಸೊಸೆಯನ್ನಾಗಿ ಮಾಡಿಕೊಳ್ಳುವ ವಿಚಾರ ಮಾಡಿರಬಹುದೆಂದೇ ನನಗೆನ್ನಿಸುತ್ತಿತ್ತು.

"ಎಷ್ಟು ಚಲೋ ಅಡಿಗೀ ಮಾಡ್ತಾಳಲ್ಲ ಗಿರಿಜವ್ವ !" ಎಂದು ದೇವಪ್ಪನವರೂ ಎಷ್ಟೋ ಸಲ ಪ್ರಶಂಸಿಸಿದ್ದರು. ನನ್ನನ್ನು ತಮ್ಮ ಮಗನಿಗೆ ಮದುವೆ ಮಾಡುವ ವಿಚಾರ ಅವರಲ್ಲೂ ಇರಬಹುದೆಂದೇ ನನಗೆನ್ನಿಸುತ್ತಿತ್ತು.

"ಗಿರಿಜವ್ವ ದೊಡ್ಡಾಕಿಯಾದಳು. ಇನ್ನು ಮ್ಯಾಲ ಪರಕಾರ ಉಡೂದು

ಚಲೋದಲ್ಲ. ದಟ್ಟಿ ತಂದು ಉಡಿಸಬೇಕು," ಎಂದು ಒಂದು ದಿನ ಮಾತು ತೆಗೆದ ಅಪ್ಪ.

"ನನಗೇನೋ ನೀವೇ ಸೋದರಮಾವ ಆಗಿದ್ದಿರಿ. ನೀವೇ ದಟ್ಟಿ ತಂದು ಉಡಿಸಿದಿರಿ. ಗಿರಿಜಾಗ ಸೋದರಮಾವ ಎಲ್ಲಿಂದ ಬರಬೇಕು?" ಎಂದಳು ಅವ್ವ. ಏಕೋ ಏನೋ ಅವಳ ಕಣ್ಣುಗಳಲ್ಲಿ ನೀರೂರಿತು.

ಮಾರನೆಯ ದಿನ ಸೀತವ್ವತ್ತೆಯ ಜೊತೆಗೆ ಮಾತನಾಡುತ್ತಿದ್ದಾಗ ನಾನು ಸಹಜವಾಗಿ ದಟ್ಟಿಯ ಪ್ರಸ್ತಾಪವೆತ್ತಿದೆ.

"ದಟ್ಟಿಗೂ ಸೋದರಮಾವನಿಗೂ ಏನು ಸಂಬಂಧ ಅತ್ತೇ?"

"ಅದೊಂದು ರೂಢಿಯವ್ವಾ. ನಿಮ್ಮ ಅವ್ವ ನಿನ್ನ ಬಸಿರಾದಾಗ ನಾವೇ ಕುಬುಸ ಮಾಡಿದಿವಿ. ಈಗ ನಮ್ಮವರೇ ನಿನ್ನ ಸೋದರಮಾವ ಇದ್ದಾಂಗ," ಎಂದು ಹೇಳಿ ಅದೇ ದಿನ ದಟ್ಟಿಯೊಂದನ್ನು ತರಿಸಿ ನನಗೆ ಉಡಿಸಿದಳು, ಕೈ ಬೆರಳುಗಳಿಂದ ನೆಟಿಕೆ ಮುರಿದು ಹೇಳಿದಳು :

"ಗಿರಿಜಾ ನೀನು ನಿಜವಾಗಿಯೂ ಗಿರಿಜಾದೇವಿಯಂಗೇ ಕಾಣುತೀಯಲ್ಲೆ! ಏನೋ ತಪ್ಪಿ ಬಡವರ ಮನಿಯಾಗ ಹುಟ್ಟಿದಿ. ಇಲ್ಲಾಂದರೆ ಪ್ರತ್ಯಕ್ಷ ಪರಮೇಶ್ವರನೇ ಬರುತ್ತಿದ್ದ ನಿನ್ನ ಮದುವಿಯಾಗೂದಕ್ಕ."

"ಪರಮೇಶ್ವರನ ಹೆಂಡತಿ ಸಾಹುಕಾರರ ಮಗಳೇನ್ರೀ ಅತ್ತೇ?"

"ಹೌದು," ಎಂದಿಷ್ಟೆ ನುಡಿದು ಸೀತವ್ವತ್ತೆ ನಕ್ಕು ಸುಮ್ಮನಾದಳು.

ಅದೇ ಮೊದಲು ಬಾರಿ ದಟ್ಟಿ ಉಟ್ಟುಕೊಂಡು ಸಡಗರದಲ್ಲಿ ಪುಟ್ಟಿ ಹಕ್ಕಿಯಂತೆ ಹಾರುತ್ತಾ ಮನೆಗೆ ಬಂದೆ. ಅವ್ವನಿಗೆ ಎಲ್ಲವನ್ನೂ ಹೇಳಿದಾಗ ಅವಳಿಗೂ ಬಹಳ ಸಂತೋಷವಾಯಿತು.

"ಪುಣ್ಯವಂತರು, ದಿಕ್ಕಿಲ್ಲದವರಾದ ನಮಗ ತಂದೆತಾಯಿ ಇದ್ದಾಂಗ ಇದಾರೆ. ನಾನು ಬಸಿರಾದಾಗ ಅವರೇ ತೌರುಮನೆಯವರಾಗಿ ಕುಬುಸ ಮಾಡಿದ್ದರು. ಇಂದು ನಿನಗ ದಟ್ಟಿ ಉಡಿಸಿದರು," ಎಂದು ಕೃತಜ್ಞತೆ ವ್ಯಕ್ತ ಗೊಳಿಸಿದಳು.

....ನನ್ನ ತಂಗಿ ಗೌರಿಯೂ ಬೆಳೆಯುತ್ತಿದ್ದಳು. ನನ್ನ ಹಳೆಯ ಬಟ್ಟೆ

ಗಳನ್ನು ಹೊರದೆಗೆದು, ಅಲ್ಲಿ ಇಲ್ಲಿ ಹೊಲಿದು ಸರಿಗೊಳಿಸಿ ಅವುಗಳನ್ನೇ ಗೌರಿಗೆ ತೊಡಿಸುವಳು ಅವ್ವ. ಅವಳ ಬುದ್ಧಿವಂತಿಕೆಯನ್ನು ಕಂಡು ಯಾರಾದರೂ ಬೆರಳು ಕಚ್ಚಿಕೊಳ್ಳಬೇಕು, ಹರಕು ಬಟ್ಟೆಗಳನ್ನೆಂದೂ ಹೊರಗೆ ಬಿಸುಟುತ್ತಿರಲಿಲ್ಲ ಆಕೆ. ಚಿಂದಿಗಳನ್ನೆಲ್ಲ ಒಂದುಗೂಡಿಸಿ "ಕೌದಿ" ಹೊಲಿಯುತ್ತಿದ್ದಳು. ಅವುಗಳನ್ನೇ ನಾವೆಲ್ಲರೂ ಹೊದ್ದುಕೊಳ್ಳುತ್ತಿದ್ದೆವು. ಅವ್ವನ ಆ ಜಾಣ್ಮೆ ನನಗೇಕೆ ಬರಲಿಲ್ಲವೋ ತಿಳಿಯದು.

ಸೀತವ್ವತ್ತೆಗೆ ಆಗಾಗ ಜ್ವರ ಬರುತ್ತಿತ್ತು. ಯಾವ ಔಷಧಿಯಿಂದಲೂ ಗುಣವಾಗಲಿಲ್ಲ. ಅವಳು ಯಾವಾಗಲೂ ಹಾಸುಗೆಯ ಮೇಲೆ ಬಿದ್ದುಕೊಂಡಿರ ಬೇಕಾಗಿ ಬಂದಿತ್ತು. ಅದರಿಂದಾಗಿ ಅವರ ಮನೆಯ ಕೆಲಸಗಳೆಲ್ಲ ನನ್ನ ಪಾಲಿಗೇ ಬಂದುವು. ಸುಂದರೂ ಶಾಲೆಗೆ ಹೋಗುವ ಹುಡುಗಿ. ಅವಳು ಯಾವಾಗಲೂ ಕೆಲಸವನ್ನೂ ಮಾಡುತ್ತಿರಲಿಲ್ಲ. ನಾನೂ ಅವರ ಮನೆಯವ ರಲ್ಲೊಬ್ಬಳಂತಾದೆ. ಮಲಕಾಜಿ ರಜದಲ್ಲಿ ಊರಿಗೆ ಬರುವುದನ್ನೇ ನಾನು ಕಾದಿರುತ್ತಿದ್ದೆ. ಆದರೆ ಆ ವರ್ಷ ಅವನೊಡನೆ ಆಟವಾಡಲು ನನಗೆ ಪುರಸತ್ತು ದೊರೆಯಲಿಲ್ಲ. ಅಡುಗೆ ಮಾಡುವುದು, ಎಲ್ಲರಿಗೂ ಊಟಕ್ಕಿಡುವುದು, ಕಸಮುಸುರೆ ತೆಗೆಯುವುದು ಇದರಲ್ಲೇ ಸಮಯವೆಲ್ಲಾ ಕಳೆಯುತ್ತಿತ್ತು.

ಮಲಕಾಜಿಯ ವಿದ್ಯಾಭ್ಯಾಸವನ್ನು ಅಲ್ಲಿಗೇ ನಿಲ್ಲಿಸಿ ಮದುವೆ ಮಾಡಿ ಬಿಡಬೇಕೆಂದು ಸೀತವ್ವತ್ತೆ ಗಂಡನಿಗೆ ಹೇಳುತ್ತಿದ್ದಳು.

"ಅವನಿನ್ನೂ ಸಣ್ಣ ಹುಡುಗ. ಈಗಲೇ ಮದುವಿ ಮಾಡೂದು ಬ್ಯಾಡ. ಅವನದು ಮ್ಯಾಟ್ರಿಕ್ ಆದರೂ ಆಗಲಿ," ಎಂದು ಹೇಳಿ ಮದುವೆಯ ದಿನವನ್ನು ಮುಂದೂಡಿದ್ದರು ದೇವಪ್ಪನವರು. ಆದರೂ ಸೀತವ್ವತ್ತೆ ಸುಮ್ಮನಾಗಲಿಲ್ಲ. ಮಲಕಾಜಿಗೆ ಹೆಣ್ಣು ಹುಡುಕಬೇಕೆಂದು ಒಂದೇ ಸಮನೆ ಗಂಡನನ್ನು ಪೀಡಿಸ ತೊಡಗಿದ್ದಳು. ಹಾಸಿಗೆ ಹಿಡಿದು ಬಿದ್ದ ಹೆಂಡತಿಯ ಮನಸ್ಸು ನೋಯಿಸ ಬಾರದೆಂದು ಬಗೆದು ಸಾಹುಕಾರರೂ ಮಲಕಾಜಿಗೆ ಹೆಣ್ಣು ಹುಡುಕಲು ಅಲೆಯ ತೊಡಗಿದ್ದರು.

ಅಷ್ಟು ದಿನಗಳವರೆಗೆ ನಾನು ಮನಸ್ಸಿನಲ್ಲೇ ಕಟ್ಟಿಕೊಂಡಿದ್ದ ಆಸೆಯ

ಕಟ್ಟಡ ಕುಸಿದುಬೀಳುವಂತಾಯಿತು. ಅವರು ನನ್ನನ್ನೇ ಸೊಸೆಯನ್ನಾಗಿ ಮಾಡಿಕೊಳ್ಳುವರೆಂದು ನಂಬಿದ್ದುದು ವ್ಯರ್ಥವಾಯಿತು. ಅಡುಗೆ ಮಾಡುತ್ತಿದ್ದ ಹಾಗೆ ನನ್ನ ಕತ್ತು ಬಿಗಿದು ಬರುವುದು, ಕಣ್ಣುಗಳಲ್ಲಿ ಕಂಬನಿ ಕಾಣಿಸಿ ಕೊಳ್ಳುವವು.

"ಯಾಕ ಗಿರಿಜವ್ವಾ, ಕಣ್ಣಾಗ ನೀರು?" ಎಂದು ಕೇಳುವಳು ಸುಂದರೂ.

"ಏನಿಲ್ಲ. ಹೊಗೆ ಹೊಕ್ಕು ಬಂದಿರಬೇಕು," ಎಂದು ಹೇಳಿ ಸೆರಗಿನಿಂದ ಕಂಬನಿ ಮಿಡಿದುಕೊಳ್ಳುತ್ತಿದ್ದೆ.

ಮಲಕಾಜಿಯ ಮ್ಯಾಟ್ರಿಕ್ ಪರೀಕ್ಷೆಗೆ ಇನ್ನೊಂದು ತಿಂಗಳ ಅವಧಿ ಯಿದ್ದಾಗ ನಾನು ಋತುಮತಿಯಾದೆ. ಆಗ ಮಾತ್ರ ನನ್ನ ತಂದೆತಾಯಿಗಳಿಗೆ ಗಾಬರಿಗಿಟ್ಟುಕೊಂಡಿತು.

"ಆದಷ್ಟು ಲಗೂ ಒಂದು ಗಂಡು ನೋಡ್ರಿ ಗಿರಿಜಾಗ," ಎಂದು ಅವ್ವ ಅಪ್ಪನಿಗೆ ಒತ್ತಾಯ ಮಾಡತೊಡಗಿದಳು.

"ನಾನೂ ಹುಡುಕುತಾನೇ ಇದೀನಿ. ದುಡಿದು ಹೊಟ್ಟಿ ತುಂಬಿಸಿ ಕೊಳ್ಳೊದಕ್ಕ ಗಟ್ಟಿಯಿದ್ದರ ಸಾಕು. ಬಡವರಾದರೂ ಚಿಂತೆಯಿಲ್ಲ. ಕೊಟ್ಟು ಬಿಡಬಹುದು."

ಬಡವ!

"ಊಹೂಂ. ನಾನು ಬಡವನನ್ನು ಮದುವೆಯಾಗುವುದಿಲ್ಲ," ಎಂದು ನಾನು ಮನಸ್ಸಿನಲ್ಲೇ ಹೇಳಿಕೊಂಡೆ.

"ಬಡವ" ಎಂಬ ಶಬ್ದ ಕಿವಿಗೆ ಬಿದ್ದರೆ ಸಾಕು, ನನಗೆ ರೋಸಿ ಹೋಗುತ್ತಿತ್ತು. ಬಡತನವನ್ನು ನಾನು ಸಂಪೂರ್ಣವಾಗಿ ದ್ವೇಷಿಸಲು ಕಲಿತಿದ್ದೆ. ನಾನು ಚೆಲುವೆ, ನಾನು ಬುದ್ಧಿವಂತೆ, ಶ್ರೀಮಂತರ ಸೊಸೆಯಾಗುವುದಕ್ಕೇ ನಾನು ಹುಟ್ಟಿಬಂದಾಕೆ ಎಂದೇ ಅನ್ನಿಸುತ್ತಿತ್ತು ನನಗೆ. ಸಾಧಾರಣ ಸೀರೆ ಕುಬುಸಗಳೆಂದರೆ ನನಗಾಗದು. ಬಣ್ಣಬಣ್ಣಗಳ ರೇಶಿಮೆ ಸೀರೆಗಳೇ ನನಗೆ

ಬೇಕು. ಒಳ್ಳೆಯ ಊಟವೂ ಬೇಕು. ಅಪ್ಪನಂಥ ಬಡವನನ್ನು ಮದುವೆಯಾಗಿ ಅವ್ವ ಕಷ್ಟಪಡುತ್ತಿದ್ದಂತೆ ಕಷ್ಟಪಡಲು ನಾನು ಸಿದ್ಧಳಿರಲಿಲ್ಲ.

"ಮಲಕಾಜಿಯೇ ಯಾಕೆ ನನ್ನ ಗಂಡನಾಗಬಾರದು? ಅವನ ತಂದೆ ತಾಯಿಗಳೇನೋ ಅವನಿಗಾಗಿ ಬೇರೆ ಹೆಣ್ಣು ಹುಡುಕುತ್ತಿದಾರೆ. ಆ ವಿಚಾರ ಅವನಿಗೆ ಗೊತ್ತಿಲ್ಲ. ಅವನನ್ನೇ ಮದುವೆಯಾಗಬೇಕೆಂದು ನಾನು ಕಾದಿರುವ ಹಾಗೆ ನನ್ನನ್ನೇ ಮದುವೆಯಾಗಬೇಕೆಂದು ಅವನೂ ಕಾಯುತ್ತಿರಬಹುದು. ತಂದೆತಾಯಿಯರ ಮಾತು ಮೀರಿ ಅವನು ನನ್ನನ್ನೇ ಮಾಡಿಕೊಳ್ಳಬಹುದು. ಪರೀಕ್ಷೆ ಕೊಟ್ಟು ಅವನು ಊರಿಗೆ ಬರುತ್ತಲೂ ಕೇಳಿಬಿಡುತ್ತೇನೆ...."

ಹಾಗೆ ಯೋಚಿಸಿ ನಾನು ಮೌನವಾಗಿದ್ದುಬಿಟ್ಟೆ. ಅಪ್ಪ ನನಗಾಗಿ ವರ ಹುಡುಕುತ್ತಲೇ ಇದ್ದ. ಸಾಹುಕಾರರೂ ಮಲಕಾಜಿಗಾಗಿ ವಧು ಹುಡುಕುತ್ತಿದ್ದರು.

ಮಲಕಾಜಿಯ ಪರೀಕ್ಷೆ ಮುಗಿಯಿತು. ಅವನು ಊರಿಗೆ ಬಂದ. ಅವನನ್ನು ಏಕಾಂತದಲ್ಲಿ ಸಂಧಿಸಿ, ಮದುವೆಯ ಮಾತನಾಡುವ ಪ್ರಸಂಗವನ್ನೇ ನಾನು ಎದುರು ನೋಡತೊಡಗಿದೆ.

ಒಂದು ದಿನ ಸೀತವ್ವತ್ತೆಯ ಮೈಯಲ್ಲಿ ವಿಪರೀತ ಜ್ವರ. ಡಾಕ್ಟರರು ಬಂದು ಸೂಜಿ ಮದ್ದು ಕೊಟ್ಟು ಹೋದರೂ ಜ್ವರವಿಳಿಯಲಿಲ್ಲ. ಸಾಹುಕಾರರು ಬಹಳ ದಿಗಿಲುಗೊಂಡಿದ್ದರು.

"ಇವತ್ತು ರಾತ್ರಿ ನೀನಿಲ್ಲೇ ಇರು ಗಿರಿಜವ್ವಾ," ಎಂದರವರು.

ರಾತ್ರಿಯ ಹೊತ್ತು ನಾನೆಂದೂ ಅವರ ಮನೆಯಲ್ಲಿ ಮಲಗಿದ್ದವಳಲ್ಲ. ನಾನು ಋತುಮತಿಯಾದಂದಿನಿಂದ ಅವ್ವ ನನ್ನ ವಿಚಾರವಾಗಿ ಬಹಳ ಎಚ್ಚರಿಕೆ ವಹಿಸುತ್ತಿದ್ದಳು. ಮಧ್ಯಾಹ್ನದ ಅಡುಗೆ ಮಾಡಿಕೊಟ್ಟರೆ ಸಾಕು, ಸಾಯಂಕಾಲ ಹೋಗಬೇಕಾಗಿಲ್ಲವೆಂದೇ ಅವಳು ಹೇಳಿದ್ದಳಾದರೂ ಸಾಹುಕಾರರ ಆಗ್ರಹಕ್ಕೊಳಗಾಗಿ ನಾನು ಸಂಜೆಯ ಅಡುಗೆಯನ್ನೂ ಮಾಡಿಟ್ಟು ಬರಬೇಕಾಗಿತ್ತು. ರಾತ್ರಿಯೂ ಅಲ್ಲೇ ಮಲಗುವುದೆಂದರೆ ಖಂಡಿತವಾಗಿಯೂ ಅವ್ವ ಕೋಪಿಸಿಕೊಳ್ಳಬಹುದು....

"ಅಪ್ಪನ್ನ ಕೇಳಿ ಬರ್ತೀನಿರೀ," ಎಂದು ನಾನು ಹೇಳುತ್ತಲೂ ಸಾಹುಕಾರರು,

"ನೀನೇನು ಹೋಗಬೇಕಾಗಿಲ್ಲ. ನಾನೇ ಆಳು ಕಳಿಸಿ ತಿಳಿಸುತ್ತೀನಿ," ಎಂದರು.

ಸರಿ. ಅಷ್ಟೇ ತೊಂದರೆ ತಪ್ಪಿತೆಂದುಕೊಂಡು ನಾನು ಆನಂದದಿಂದಲೇ ಅಲ್ಲಿ ಉಳಿದುಕೊಂಡೆ. ರಾತ್ರಿಯಾಗುತ್ತಲೂ ಮಲಕಾಜಿಯನ್ನು ಏಕಾಂತದಲ್ಲಿ ಸಂಧಿಸಲು ಸಾಧ್ಯವಾಗಬಹುದೆಂದೇ ನನಗೆನ್ನಿಸುತ್ತಿತ್ತು.

ಆ ದಿನ ವಿಪರೀತ ಸೆಕೆ. ರಾತ್ರಿ ಎಲ್ಲರೂ ಊಟ ಮಾಡಿದ ತರುವಾಯ ನಾನೂ ಉಂಡು, ಸೀತವ್ವತ್ತೆಯ ಕೊಠಡಿಗೆ ಹೋಗಿ ಅವಳು ನಿದ್ದೆಯಲ್ಲಿದ್ದುದನ್ನು ಕಂಡು ಹಾಗೇ ಹೊರಳಿ ಮನೆಯ ಮೇಲಿನ ಅಂಗಳದಲ್ಲಿ ಮಲಗಿಕೊಳ್ಳಲು ಹೋದೆ. ಬೆಳುದಿಂಗಳ ರಾತ್ರಿ. ಸೆಕೆಯಿಂದಾಗಿ ಮೈಯಲ್ಲೆಲ್ಲ ಬೆವರು ಹನಿಯುತ್ತಿತ್ತು. ಸೀರೆಯ ಸೆರಗಿನಿಂದ ಗಾಳಿ ಹಾಕಿಕೊಳ್ಳುತ್ತಾ ಚಾಪೆಯ ಮೇಲೊರಗಿ ಆಕಾಶದಲ್ಲಿ ವಿಹರಿಸುತ್ತಿದ್ದ ಚಂದ್ರನನ್ನು ದಿಟ್ಟಿಸುತ್ತಿದ್ದ ಹಾಗೇ ಮಲಕಾಜಿಯ ನೆನಪು ಬಂತು. ಅವನಿಗಾಗ ಹತ್ತೊಂಭತ್ತು ಇಪ್ಪತ್ತರ ಪ್ರಾಯ. ಶ್ರೀಮಂತಿಕೆಯಲ್ಲಿ ಸುಖವಾಗಿ ಬಳೆದ ದೇಹ. ಲಕ್ಷಣವಾಗಿದ್ದ ಕಣ್ಣುಮೂಗು. ಆಗ ತಾನೆ ಚಿಗುರುತ್ತಿದ್ದ ಎಳೆಯ ಮೀಸೆ. ಚಂದ್ರಬಿಂಬವನ್ನು ದಿಟ್ಟಿಸಿದ ಹಾಗೆಲ್ಲಾ ಮಲಕಾಜಿಯ ಮುಖವೇ ನನ್ನ ಕಣ್ಣೆದುರು ಮೂಡುತ್ತಿತ್ತು. ಅವನು ಬಂದು ನನ್ನನ್ನು ತಬ್ಬಿಕೊಂಡ ಹಾಗೆ; "ನಿನ್ನ ಮುಗು ಇಶ್ಶೀ ಮಾಡಿತು," ಎಂದು ಹೇಳಿದ ಹಾಗೆ; ನನ್ನ ಕೆನ್ನೆಗಳಿಗೆ ಮುತ್ತಿಟ್ಟ ಹಾಗೆ; ಕೂದಲು ನೇವರಿಸಿದ ಹಾಗೆ ಭಾಸವಾಯಿತು. ಹಲವು ವರ್ಷಗಳ ಹಿಂದೆ ಗೊಂಬೆಯಾಟದ ಕಾಲಕ್ಕೆ ನಡೆದ ಘಟನೆಯೆಲ್ಲವೂ ನನ್ನ ಮನಸ್ಸಿನ ಕಣ್ಣುಗಳೆದುರಿಗೆ ಮತ್ತೆ ನಡೆಯತೊಡಗಿತು. ನಾನು ಹಾಗೇ ಚಾಪೆಯ ಮೇಲೆ ಬಿದ್ದುಕೊಂಡಿದ್ದೆ. ಅರ್ಧ ನಿದ್ದೆ, ಅರ್ಧ ಎಚ್ಚರ.

ಚಂದ್ರಬಿಂಬದಲ್ಲಿದ್ದ ಮುಖ ನನ್ನನ್ನು ಕಂಡು ಮೋಹಕವಾಗಿ ನಗುತ್ತಾ ಕೇಳಿತು :

“ ಗಿರಿಜಾ ನನ್ನ ಮದುವಿಯಾಗ್ತೀಯಾ ?”

“ ಹೂಂ. ಆದರೆ ನಿಮ್ಮ ತಂದೆತಾಯಿ ಒಪ್ಪಬೇಕಲ್ಲ? ನಾನು ಬಡವರ ಮಗಳು.”

“ ಬಡವರ ಮಗಳಾದರೇನಾಯಿತು ಗಿರಿಜಾ ? ನಾನು ಒಪ್ಪಿದರಾಯಿತು, ನಾನು ಮದುವಿಯಾಗುತ್ತೀನಿ. ಅಪ್ಪ ಅವ್ವಗೆ ಹೇಳಿ ಅವರನ್ನೂ ಒಪ್ಪಿಸುತ್ತೀನಿ. ನಾವಿಬ್ಬರೂ ಗಂಡಹೆಂಡಿರಾಗಿ ಬಾಳ್ವೆ ಮಾಡೋಣ – ನಿನಗೆ ಚಲೋ ಚಲೋ ಸೀರೆ ಕುಬುಸ ತಂದುಕೊಡುತೀನಿ. ಏನಂತೀ ? ಒಪ್ಪಿದಿಯಾ ?”

“ ಹೂಂ,” ಎಂದಿದ್ದೆ ನಾನು. ಅದೊಂದು ಕನಸೆಂದೇ ನನ್ನ ಭಾವನೆ ಯಿತ್ತು. ಆದರೆ ವಾಸ್ತವವಾಗಿ ಅದು ಕನಸಾಗಿರಲಿಲ್ಲ. ಮನೆಯವರಿಗೆಲ್ಲ ನಿದ್ದೆ ಹತ್ತಿದ ತರುವಾಯ ಮಲಕಾಜಿಯೇ ಸದ್ದಾಗದಂತೆ ಎದ್ದು ನನ್ನನ್ನು ಹುಡುಕಿಕೊಂಡು ಬಂದಿದ್ದ, ನನ್ನ ತಲೆಯ ಹತ್ತಿರ ಕುಳಿತುಕೊಂಡಿದ್ದ, ಮಾತನಾಡಿದ್ದ.

“ ನನ್ನ ಗಿರಿಜಾ,” ಎಂದು ಅವನು ನನ್ನನ್ನು ಬಿಗಿಯಾಗಿ ತಬ್ಬಿಕೊಂಡು ತುಟಿಗಳನ್ನು ಚುಂಬಿಸಿದಾಗಲೇ ವಾಸ್ತವ ಜಗತ್ತಿನ ಅರಿವಾಗಿತ್ತು ನನಗೆ. ನಾಚಿಕೆಯಿಂದ ಮುಖ ಮುಚ್ಚಿಕೊಂಡಿದ್ದೆ. ಅವನ ಬಾಹುಬಂಧನದಿಂದ ಬಿಡುಗಡೆ ಹೊಂದಬೇಕೆಂದು ಮನಸ್ಸಾಗಿರಲಿಲ್ಲ.

“ ಬೆಳಗಾಗುತ್ತಲೂ ಅವ್ವಗೆ ಹೇಳಿ ಒಪ್ಪಿಸುತೀನಿ. ಅವಳು ಅಪ್ಪನ್ನ ಒಪ್ಪಿಸುತಾಳೆ. ನೀನೇನೂ ಚಿಂತೆ ಮಾಡಬ್ಯಾಡ ಗಿರಿಜಾ,” ಎಂದು ನನ್ನನ್ನು ಸಂತೈಸಿದ್ದ ಮಲಕಾಜಿ. ಅವನ ಮಾತಿನ ಮೇಲೆ ಪೂರ್ಣ ವಿಶ್ವಾಸವಿತ್ತು ನನಗೆ.

ಹಾಗೆ ನಾವಿಬ್ಬರೂ ಒಂದಾಗಿದ್ದೆವು ಆ ರಾತ್ರಿ.

ಬೆಳಿಗ್ಗೆ ಎದ್ದು ನಾನು ಮನೆಗೆ ಹೊರಟು ನಿಂತಾಗ ಮಲಕಾಜಿ ನನಗೊಂದು ರೇಶಿಮೆಯ ರವಿಕೆ ತಂದುಕೊಟ್ಟು, ಕೆಲ ದಿನಗಳಲ್ಲಿಯೇ ಒಂದು ಸೀರೆಯನ್ನೂ ತಂದುಕೊಡುವುದಾಗಿ ಹೇಳಿದ. ರಾತ್ರೆ ನಾನು ಅವನಿಗೆ ಕೊಟ್ಟ ಸುಖಕ್ಕಾಗಿ ನನಗೆ ದೊರೆಯುತ್ತಿದ್ದ ಫಲವೆಂದರೆ ಅಷ್ಟೇ ಎಂಬುದು ನನಗಾಗ ಹೊಳೆಯಲಿಲ್ಲ.

ಮುಗುದೆ ನಾನು; ನನಗಾಗ ಏನೂ ತಿಳಿಯುತ್ತಿರಲಿಲ್ಲ. ಅಲ್ಲವೆ?

ಯಾರಿಗೆ ಗೊತ್ತು! ನನಗಾಗಲೇ ಎಲ್ಲವೂ ತಿಳಿಯುತ್ತಿದ್ದಿತೋ ಏನೊ.

ಮಲಕಾಜಿ ನನ್ನ ಶರೀರ ಸುಖವನ್ನು ಬಯಸಿದ ಹಾಗೇ ನಾನೂ ಅವನ ಶರೀರ ಸುಖವನ್ನು ಬಯಸಿದ್ದೆನೋ ಏನೊ.

ವಿಚಿತ್ರ ಪ್ರಪಂಚ. ವಿಚಿತ್ರ ಮನಸ್ಸು. ನಮ್ಮ ಮನಸ್ಸನ್ನು ನಾವೇ ಸರಿಯಾಗಿ ಅರಿತುಕೊಳ್ಳುವುದೂ ಅತ್ಯಂತ ಕಷ್ಟಕರವಾದ ವಿಚಾರವೆಂದು ತೋರುತ್ತದೆ.

# ೯

ಮಲಕಾಜಿ ಕೊಟ್ಟ ರವಿಕೆಯನ್ನು ಮಡಿಕೆಮಾಡಿ ಕುಬುಸದಲ್ಲಿ ಮುಚ್ಚಿಟ್ಟುಕೊಂಡು ಮನೆಗೆ ಬಂದೆ. ಅದನ್ನು ಬಚ್ಚಿಟ್ಟುಕೊಳ್ಳಬೇಕೆಂದು ನಾನೇನೂ ಯೋಚಿಸಿರಲಿಲ್ಲ. ನನಗರಿವಾಗದಂತೆಯೇ ನಾನು ಅದನ್ನು ಅಡಗಿಸಿಟ್ಟುಕೊಂಡಿದ್ದೆ.

ಮನೆಯೊಳಗಡೆ ಅಡಿಯಿಡುವಾಗ ನನ್ನ ಕಾಲುಗಳೆರಡೂ ಕಂಪಿಸುತ್ತಿದ್ದ ಹಾಗಿತ್ತು. ಯಾವುದೋ ಅಪರಾಧ ಮಾಡಿದವರ ಹಾಗೆ ಎದೆ ಹೊಡೆದು ಕೊಳ್ಳುತ್ತಿತ್ತು.

ನನ್ನನ್ನು ನೋಡುತ್ತಲೂ ಗೌರಿ ಓಡಿಬಂದು ನನ್ನ ಕಾಲುಗಳನ್ನು ತಬ್ಬಿ ಕೊಂಡಳು. ಅವಳನ್ನೆತ್ತಿಕೊಳ್ಳಲೆಂದು ನಾನು ಕೆಳಕ್ಕೆ ಬಾಗುತ್ತಿದ್ದ ಹಾಗೇ ಕುಬುಸದೊಳಗಿದ್ದ ರೇಶಿಮೆಯ ರವಿಕೆ ಜಾರಿ ನೆಲಕ್ಕೆ ಬಿತ್ತು.

ರೊಟ್ಟಿ ತಟ್ಟುತ್ತಲಿದ್ದ ಅವ್ವ ದೃಷ್ಟಿ ಹೊರಳಿಸಿ ಆ ರವಿಕೆಯನ್ನು ನೋಡಿದಳು. ನನ್ನ ಮುಖವನ್ನು ನೋಡಿದಳು, ನನ್ನ ದೇಹವನ್ನು ನೋಡಿದಳು. ಅವಳ ದೃಷ್ಟಿಯನ್ನೆದುರಿಸದೆ ನಾನು ತತ್ತರಿಸಿದೆ.

"ಎಲ್ಲೀದೇ ಈ ರವಿಕೆ?"

"ನನ್ನ ಸರ್ವಾಂಗವೂ ಕಂಪಿಸತೊಡಗಿತು, ಬಾಯಿಯೊಣಗಿತು. ಉತ್ತರವೀಯಬೇಕೆಂದರೆ ನಾಲಗೆಯೇ ಚಲಿಸದಾಯಿತು. ಅವ್ವನ ಪ್ರಶ್ನೆಗೆ ಏನಾದರೊಂದು ಉತ್ತರವೀಯಲೇಬೇಕು. ಅವಳಿಗೆ ನಂಬಿಕೆ ಹುಟ್ಟುವಂಥ ಉತ್ತರವಾವುದು?

"ಯಾರು ಕೊಟ್ಟರೇ ಇದನ್ನ?" ಮತ್ತೆ ಬಂತು ಪ್ರಶ್ನೆ.

"ಸೀ – ತ – ವ್ವ – ತ್ತೆ ಕೊಟ್ಟಳವ್ವಾ," ಎಂದು ನಾನು ತೊದಲುತ್ತಾ ನುಡಿದೆ.

"ಸೀತವ್ವತ್ತೆ ಕೊಟ್ಟಳೇ?" ಎಂದು ವಿಲಕ್ಷಣವಾದ ಧ್ವನಿಯಲ್ಲಿ ಕೇಳುತ್ತಾ ಅವ್ವ ಎದ್ದು ಬಂದು ನನ್ನನ್ನು ಹತ್ತಿರದಿಂದ ವೀಕ್ಷಿಸಿದಳು. ನನ್ನ ಕೆದರಿದ ಕೂದಲು, ನಡುಗುತ್ತಿದ್ದ ಶರೀರ, ಬಣ್ಣಗೆಟ್ಟಿದ ಮುಖ, ಎಲ್ಲವೂ ನಿಜಸ್ಥಿತಿಯನ್ನಾಕೆಗೆ ನಿವೇದಿಸಿರಲು ಸಾಕು. ನನ್ನ ಕೆನ್ನೆಗಳ ಮೇಲೆ, ಉಗುರಿನಿಂದಾದ ಗುರುತುಗಳೂ ಎದ್ದುಕಾಣಿಸುತ್ತಿದ್ದುವೊ ಏನೊ.

ಅವ್ವ ಮತ್ತೆ ಮಾತನಾಡಲಿಲ್ಲ. ಮೂಲೆಯಲ್ಲಿದ್ದ ಬಡಿಗೆಯನ್ನೆತ್ತಿಕೊಂಡು ನನ್ನನ್ನು ಹೊಡೆಯತೊಡಗಿದಳು.

"ಅಯ್ಯೋ ಅವ್ವಾ, ಬಡೀಬ್ಯಾಡ. ಸತ್ತಿನಿ, ಸತ್ತಿನಿ," ಎಂದು ನಾನು ಕೂಗಿಕೊಂಡೆ.

"ಯಾರು ಕೊಟ್ಟರು ಈ ರೇಶಿಮಿ ಕುಬುಸಾ? ಖರೇ ಹೇಳು," ಎಂದು ಗದರಿಸಿದರು ಅವ್ವ.

"ಹೇಳ್ತೀನವ್ವಾ, ಹೇಳ್ತೀನಿ."

ಹೊಡೆಯುವುದನ್ನು ನಿಲ್ಲಿಸಿದಳು ಅವ್ವ. ನಾನು ಸತ್ಯಸಂಗತಿಯನ್ನೆಲ್ಲ ಅವಳೆದುರಿಗೆ ಒಪ್ಪಿಕೊಂಡೆ.

ಭೀಕರವಾದ ರೋಷದಿಂದ ಆ ರವಿಕೆಯನ್ನು ಒಲೆಗೆ ಹಾಕಿ ಸುಟ್ಟುಬಿಟ್ಟಳು ಅವ್ವ. ಅದರಂತೆಯೇ ನನ್ನನ್ನು ಬೆಂಕಿಯಲ್ಲಿ ಹಾಕಿ ಸುಡಲು ಬಯಸುವಂತಿತ್ತು ಅವಳ ಮುಖಮುದ್ರೆ.

ಅಂದು ಸಾಯಂಕಾಲವೇ ಸೀತವ್ವತ್ತೆ ಸತ್ತುಹೋದಳು.

ಅವ್ವನೊಬ್ಬಳೇ ಅವರ ಮನೆಗೆ ಹೋಗಿ ಬಂದಳು. ಹೆಣವನ್ನು ಮಣ್ಣುಗಾಣಿಸಲು ಅಪ್ಪ ಹೋಗಿದ್ದ.

ನಾನು ಮಾತ್ರ ಆ ಮನೆಗೆ ಹೋಗದಂತೆ ನಿರ್ಬಂಧಿಸಲಾಯಿತು.

ಅದುವರೆಗೆ ಪಾತರಗಿತ್ತಿಯಂತೆ ಊರಲ್ಲೆಲ್ಲ ಹಾರಾಡುತ್ತಿದ್ದ ನಾನು

ಒಳಗೊಳಗೇ ತಳಮಳಿಸುತ್ತ, ನನ್ನ ವಿಧಿಯನ್ನು ಹಳಿಯುತ್ತ ಮನೆಯಲ್ಲೇ ಬಿದ್ದುಕೊಂಡಿರಬೇಕಾಯಿತು. ಸೆರೆಯಾಳುಗಳನ್ನು ಕಾಯುವ ಪೋಲೀಸಿನವರಂತೆ ಅವ್ವ ನನ್ನನ್ನು ಕಾದುಕೊಂಡಿರುತ್ತಿದ್ದಳು.

ಮಲಕಾಜಿ ಎಷ್ಟೋ ಬಾರಿ ನಮ್ಮ ಮನೆಯ ಸುತ್ತಮುತ್ತ ಸುಳಿದು ನನ್ನನ್ನು ಕಾಣಲು ಯತ್ನಿಸಿದನಂತೆ, ಅವನನ್ನು ಕಂಡು ಮಾತನಾಡಲು ನನ್ನ ಹೃದಯವೂ ಕಾತರದಿಂದ ಕಾದಿತ್ತು. ಅವನು ಕೊಂಚ ಸಾಹಸಮಾಡಿ ಒಂದೆರಡು ನಿಮಿಷಗಳಮಟ್ಟಿಗಾದರೂ ನನ್ನನ್ನು ಕಂಡಿದ್ದಲ್ಲಿ ನಾನು ಅವನ ಜೊತೆಗೆ ಓಡಿಹೋಗುವುದಕ್ಕೂ ಸಿದ್ಧಳಾಗಬಹುದಾಗಿತ್ತು.

ಆದರೆ ಮಲಕಾಜಿ ಮುಖ ತೋರಿಸಲಿಲ್ಲ.

ಅಷ್ಟು ದೀರ್ಘಕ್ಕೆ ಹೋಗುವ ಇಚ್ಛೆ ಅವನಿಗಿದ್ದಿತೊ ಇಲ್ಲವೊ.

ನನ್ನ ಬಗೆಗೆ ಅವನಿಗಿದ್ದ ಪ್ರೀತಿಯ ಆಳವಾದರೂ ಎಷ್ಟಿದ್ದಿತೊ ಏನೊ.

ಅವನಿಗೂ ನನಗೂ ಭೆಟ್ಟಿಯಾಗಲಿಲ್ಲ. ಆಗದಿದ್ದರೇನಾಯಿತು ? ಅಂದು ರಾತ್ರಿ ನನಗೆ ವಚನವಿತ್ತ ಮೇರೆಗೆ ಅವನು ತನ್ನ ತಂದೆಯನ್ನೊಪ್ಪಿಸಿ ನನ್ನನ್ನೇ ಮದುವೆಯಾಗುವುದಾಗಿ ಹಟ ಹಿಡಿಯಬೇಕಾಗಿತ್ತು. ಸಾಹುಕಾರರು ಕೇಳಿದ್ದಲ್ಲಿ ನನ್ನ ತಂದೆ ತಾಯಿಗಳು ಆ ಮದುವೆಗೆ ಸಂತೋಷದಿಂದ ಒಪ್ಪಿಕೊಳ್ಳಬಹುದಾಗಿತ್ತು.

ತನ್ನ ತಂದೆಯೆದುರಿಗೆ ಆ ಮಾತು ಪ್ರಸ್ತಾಪಿಸುವಷ್ಟು ಧೈರ್ಯವಾದರೂ ಮಲಕಾಜಿಯಲ್ಲಿದ್ದಿತೋ ಇಲ್ಲವೊ.

ಒಂದು ತಿಂಗಳು ಕಳೆಯುವುದರೊಳಗಾಗಿ ಕಳ್ಳೀಕಾಯಿ ನಗರದ ಹುಡುಗಿಯೊಬ್ಬಳನ್ನು ಮಲಕಾಜಿಗೆ ತಂದುಕೊಳ್ಳುವ ಬಗೆಗೆ ನಿಶ್ಚಯವಾಯಿತೆಂಬ ವಾರ್ತೆಯನ್ನು ನಾನು ಕೇಳಿದೆ.

ಆ ಸುದ್ದಿ ತಿಳಿಯುತ್ತಲೂ ನನಗೆ ವ್ಯಸನವಾಗಬಹುದು, ಅಳು ಬರಬಹುದು ಎಂದು ನಾನು ಭಾವಿಸಿದ್ದೆ. ಆದರೆ, ವಾಸ್ತವವಾಗಿ ಹಾಗೇನೂ ಆಗಲಿಲ್ಲ.

" ಕೊಟ್ಟ ಮಾತು ಮುರಿದು ಅವನು ಬೇರೆಯವಳನ್ನು ಕಟ್ಟಿಕೊಳ್ಳಲು

ತಯಾರಾದನಲ್ಲವೇ! ಆದರೆ ಆಗಲಿ. ಜಗತ್ತಿನಲ್ಲಿ ಗಂಡುಗಳಿಗೇನು ಬರಗಾಲ ಬಂದಿಲ್ಲ. ನಾನೂ ಇನ್ನೊಬ್ಬನನ್ನಾಗುತ್ತೇನೆ. ಮಲಕಾಜಿಗೆ ಚೆನ್ನಾಗಿ ಬುದ್ಧಿ ಕಲಿಸುತ್ತೇನೆ," ಎಂದು ಹೇಳಿತು ನನ್ನ ಒಳದನಿ.

"ವಿಚಿತ್ರ!" ಅನ್ನುವಿಯಲ್ಲವೇ ನೀನು, ಪ್ರಿಯಸಖಿ?

ವಿಚಿತ್ರವೆನ್ನುವುದೇನೋ ಸರಿಯೆ, ಆದರೆ ಅಂದು ನನಗೆ ಹಾಗೆ ಅನ್ನಿಸಿದ್ದುದು ಮಾತ್ರ ನಿಜ.

ಏಳೆಂಟು ತಿಂಗಳುಗಳ ತರುವಾಯ ಒಂದು ದಿನ ಮಲಕಾಜಿಯ ಮದುವೆಯೂ ಆಗಿಹೋಯಿತು.

ಊರೆಲ್ಲವೂ ನೆರೆದಿತ್ತು ಅವನ ಮದುವೆಗೆ. ಅಪ್ಪ ಅವ್ವ ಇಬ್ಬರೂ ಹೋಗಿದ್ದರು.

ಗೌರಿಯನ್ನಾಡಿಸುತ್ತ ನಾನೊಬ್ಬಳೇ ಮನೆಯಲ್ಲಿ ಕುಳಿತುಕೊಂಡಿದ್ದೆ.

ನನ್ನನ್ನೇಕೆ ಕರೆದುಕೊಂಡು ಬರಲಿಲ್ಲವೆಂದು ಸಾಹುಕಾರರು ಕೇಳಿರಲು ಸಾಕು. ಅಪ್ಪ ಏನು ಹೇಳಿದನೋ. ಅವ್ವ ಏನು ಹೇಳಿದಳೋ.

ನಾನು ಹೋಗದಿದ್ದುದನ್ನು ಕಂಡು ಸುಂದರೂ ಏನು ತಿಳಿದುಕೊಂಡಳೋ ಪಾರೂ ಏನು ಯೋಚಿಸಿದಳೋ. ಉಳಿದವರೆಲ್ಲಾ ಏನು ಮಾತನಾಡಿಕೊಂಡರೋ.

ನನಗೂ ಅನ್ನಿಸಿತ್ತು: ಹೋಗಬೇಕು, ಮಲಕಾಜಿಯ ವಧುವಾದ ಆ ಶ್ರೀಮಂತ ಕನ್ನೆಯ ಮುಖ ನೋಡಬೇಕು, ಅವಳು ನನಗಿಂತ ಸುಂದರಿಯೇ ಎಂಬುದನ್ನು ಪರೀಕ್ಷಿಸಬೇಕು, ಮಲಕಾಜಿಯ ಮುಂದೆ ನಿಂತು ಅಣಕದ ನಗು ನಕ್ಕು ಅವನನ್ನು ಅವಮಾನಗೊಳಿಸಿ ಬರಬೇಕು – ಎಂದು ನನಗೂ ಅನ್ನಿಸಿತ್ತು.

ಆದರೆ, ನಾನು ಅಲ್ಲಿಗೆ ಹೋಗುವಂತಿರಲಿಲ್ಲ.

ಪುಟ್ಟ ಗೌರಿಯನ್ನೇ ಮಲಕಾಜಿಯ ಹೆಂಡತಿಯನ್ನಾಗಿ ಭಾವಿಸಿ ನನ್ನೆದೆಯ ಕಹಿಯನ್ನೆಲ್ಲ ಅವಳೆದುರಿಗೇ ಆಡಿ ತೋಡಿಕೊಂಡೆ.

"ನಿನ್ನ ಕಟ್ಟಿಕೊಂಡು ಅವ ಎಷ್ಟು ಚಂದಾಗಿ ಸಂಸಾರ ಮಾಡ್ತಾನೋ ಮಾಡಲಿ. ನಾನೂ ನಿನಗಿಂತ ಇಪ್ಪತ್ತುಪಟ್ಟು ಸುಖದಿಂದ ಬಾಳ್ವೆ ಮಾಡ್ತೀನಿ."

ಆ ಹಸುಳೆಗೆ ನನ್ನ ಮಾತು ಅರ್ಥವಾಗುವುದು ಹೇಗೆ ಸಾಧ್ಯ? ಅವಳು ನನ್ನನ್ನೇ ದಿಟ್ಟಿಸುತ್ತಾ ನಗ ತೊಡಗಿದಳು.

"ನಗ್ತೀಯಾ ಕಳ್ಳೀ! ನಗು! ನಗು! ನಾನೇನು ಅಳ್ತೀನಿ ಅಂತ ತಿಳಿದೀಯೇನು? ನಾನೂ ನಗುನಗುತಾ ಬಾಳ್ವೆ ಮಾಡ್ತೀನಿ."

*

## ೧೦

ಆರೇಳು ತಿಂಗಳುಗಳ ತರುವಾಯ ಒಂದು ದಿನ ನಾನು ರೊಟ್ಟಿಮಾಡುತ್ತ ಒಲೆಯೆದುರಿಗೆ ಕುಳಿತಿದ್ದಾಗ ಅಪ್ಪ ಹೇಳಿದ.

" ಇವತ್ತು ನಿನ್ನ ನೋಡುವದಕ್ಕ ಬರುತಾರ ಗಿರಿಜವ್ವಾ. ಜಳಕಾ ಮಾಡಿ ತಯಾರಾಗಿರು."

ನೀರು ತರಲೆಂದು ಭಾವಿಗೆ ಹೋಗಿದ್ದಳು ಅವ್ವ. ಗೌರಿಯಿನ್ನೂ ನಿದ್ದೆಯಲ್ಲಿದ್ದಳು. ಮನೆಯಲ್ಲಿ ಬೇರಾರೂ ಇರಲಿಲ್ಲ. ಅವ್ವನಿಲ್ಲದ ವೇಳೆಯಲ್ಲಿ ಅಪ್ಪನೊಡನೆ ಸಲುಗೆಯಿಂದ ಮಾತಾಡುವುದು ರೂಢಿಯಾಗಿತ್ತು ನನಗೆ.

" ಯಾವೂರವರು ಅಪ್ಪಾ ?" ಎಂದು ನಾನು ಕೇಳಿದೆ.

" ಓರೆಕೋರೆ ನಗರದವರು, ತಂಗೀ."

" ಏನು ಮಾಡ್ತಾರಪ್ಪಾ ಅವರು ?"

" ಅವರೂ ನಮ್ಮ ಹಾಂಗೇ ನೇಕಾರರು."

" ಸಾಹುಕಾರರೇನು ಅವರು ಅಪ್ಪಾ ?"

ಅಪ್ಪ ಥಟ್ಟನೆ ಉತ್ತರವೀಯಲಿಲ್ಲ; ತಡೆತಡೆಯುತ್ತ ಹೇಳಿದ :

" ಸಾಹುಕಾರರು ನಮ್ಮಂಥವರ ಸಂಗಡ ಸಂಬಂಧ ಹೆಂಗ ಮಾಡ್ಯಾರು ಗಿರಿಜವ್ವಾ ?"

" ಮತ್ತೆ ?"

" ನಮ್ಮಷ್ಟೇನೂ ಬಡವರಲ್ಲ ಅನ್ನು. ಮನೆಯೊಳಗೆ ಸ್ವಂತದ ಮಗ್ಗ ಇದಾವೆ. ಅಲ್ಲದೆ ನಿನ್ನ ಗಂಡನಾಗುವ ರಾಚಪ್ಪ ಮುನಿಸಿಪಾಲ್ಟಿಯೊಳಗೆ ನೌಕರಿ ಮಾಡುತಾರೆ. ಕಲಿತವರು. ಮ್ಯಾಟ್ರಿಕ್‌ವರೆಗೆ ಓದಿದ್ದಾರಂತೆ."

ಅವರ ವಯಸ್ಸೆಷ್ಟು ಎಂಬುದನ್ನು ತಿಳಿದುಕೊಳ್ಳುವ ಆತುರತೆಯೇನೂ ಉತ್ಪನ್ನವಾಗಲಿಲ್ಲ. ಅವರು ಮ್ಯಾಟ್ರಿಕ್ ಪಾಸಾದವರೆಂದು ತಿಳಿಯುತ್ತಲೂ ನನಗೆ ವಿಲಕ್ಷಣವಾದ ಸಮಾಧಾನ ಲಭಿಸಿತು. ಮಲಕಾಜಿಯೊಬ್ಬನೇ ಅಲ್ಲ ಈ ಜಗತ್ತಿನಲ್ಲಿ – ಮ್ಯಾಟ್ರಿಕ್ ಪಾಸು ಮಾಡಿದವನು! ನನ್ನ ಕೈ ಹಿಡಿಯುವವರೂ ಅವನಷ್ಟೇ ಓದಿದ್ದಾರೆ!

" ಸಂಬಳ ಎಷ್ಟಂತೆ ಅಪ್ಪಾ ಅವರಿಗೆ?"

ಆ ಪ್ರಶ್ನೆಗೆ ಅಪ್ಪನಿಂದ ಸಮರ್ಪಕ ಉತ್ತರ ಬರಲಿಲ್ಲ.

" ನನಗ್ಗೊತ್ತಿಲ್ಲ ತಾಯಿಾ. ಹೊಟ್ಟಿ ಬಟ್ಟೆಗಾಗುವಷ್ಟು ಆದರೆ ಸಾಕಲ್ಲ!"

ಅಷ್ಟಾದರೆ ಸಾಲದು. ಅಷ್ಟರಿಂದ ನನಗೆ ತೃಪ್ತಿಯಾಗದು. ನನಗೆ ಬಣ್ಣ ಬಣ್ಣಗಳ ಸೀರೆಗಳು ಬೇಕು, ರವಿಕೆಗಳು ಬೇಕು, ಆಭರಣಗಳು ಬೇಕು, ಒಳ್ಳೊಳ್ಳೆಯ ತಿಂಡಿ ತಿನಿಸು ಬೇಕು. ಅದಕ್ಕೆಲ್ಲ ನೂರಾರು ರೂಪಾಯಿಗಳಾದರೂ ಬೇಡವೆ? ಅವರಿಗೆ ಅಷ್ಟು ಸಂಬಳ ಸಿಗುತ್ತಿರಬಹುದೋ ಏನೊ....

ಮಧ್ಯಾಹ್ನದ ವೇಳೆಗೆ ಅವರು ಬಂದರು. ಅಷ್ಟರೊಳಗಾಗಿ ನಾನು ಸ್ನಾನ ತೀರಿಸಿ, ತಲೆ ಬಾಚಿಕೊಂಡು, ಅವ್ವನ ರೇಶಿಮೆ ಸೀರೆಯುಟ್ಟುಕೊಂಡು ಸಿದ್ಧಳಾಗಿದ್ದೆ.

ನನ್ನನ್ನು " ನೋಡುವ " ಶಾಸ್ತ್ರ ಪೂರೈಸಿತು. ಅವರೇನೋ ನನ್ನನ್ನೇ ನೋಡುತ್ತಿದ್ದುದು ಸ್ಪಷ್ಟವಾಗಿ ಕಾಣಿಸುತ್ತಿತ್ತು. ನಾನು ಮಾತ್ರ ಅವರನ್ನು ಸರಿಯಾಗಿ ನೋಡಲಿಲ್ಲ – ಅದೇನು ಸಂಕೋಚವೋ ಲಜ್ಜೆಯೋ ತಿಳಿಯದು. ಲಜ್ಜೆಯಂತೂ ಇರಲಾರದು. ನನ್ನದು ಮೊದಲಿನಿಂದಲೂ ದಿಟ್ಟ ಸ್ವಭಾವವಲ್ಲವೆ ?

" ಹುಡುಗಿ ಓದಲಿಕ್ಕೆ ಬರೀಲಿಕ್ಕೆ ಕಲಿತಾಳೇನು?" ಎಂದು ಅವರು ಕೇಳಿದರು.

ಅವರನ್ನು ಕರೆದುಕೊಂಡು ಬಂದಿದ್ದ ದೇವಪ್ಪನವರು ನಗುತ್ತಾ ಉತ್ತರವಿತ್ತರು.

" ಮನೆಗೆಲಸ ಮಾಡೂದರಾಗ ಗಿರಿಜವ್ವನನ್ನ ಹಿಂದೆ ಹಾಕುವವರು

ಯಾರೂ ಇಲ್ಲ ಈ ಊರೊಳಗೆ. ಓದೂದು ಬರೆಯೂದು ಮಾತ್ರ ಅವಳು ಕಲಿತಿಲ್ಲ. ನಿಮಗೆ ಅದು ಬೇಕೆಂದರೆ ತಿಂಗಳೊಪ್ಪತ್ತಿನೊಳಗೇ ಅದನ್ನೂ ಕಲಿತಾಳು. ಬಹಾಳ ಚುರುಕು ಹುಡುಗಿ ನಮ್ಮ ಗಿರಿಜವ್ವ."

'ಅವರಿಗೆ' ಅಷ್ಟರಿಂದಲೇ ಸಮಾಧಾನವಾಗಿರಬೇಕು. ಮತ್ತೆ ಪ್ರಶ್ನೆ ಕೇಳದೆ ಅವರು ಸುಮ್ಮನಾದರು.

ಅಂದು ಅವರೆಲ್ಲರಿಗೂ ನಮ್ಮಲ್ಲೇ ಊಟವಾಯಿತು. ಬಡಿಸುವುದಕ್ಕೂ ನಾನೇ ಓಡಾಡುತ್ತಿದ್ದೆ. 'ಅವರು' ನನ್ನನ್ನು ಕಂಡು ಸಂಪೂರ್ಣವಾಗಿ ಮರುಳಾದ ಹಾಗೇ ತೋರುತ್ತಿತ್ತು. ನನಗೆ ಹಿಡಿಸಲಾರದಷ್ಟು ಹಿಗ್ಗು. ಕೇವಲ ನನ್ನ ಸೌಂದರ್ಯದಿಂದಲೇ ಅವರನ್ನು ಗೆದ್ದುಕೊಂಡಿದ್ದೆನಲ್ಲವೆ?

ಆ ಸಂತಸದಲ್ಲಿ ಮೈಮರೆತು ನಾನು 'ಅವರ' ಮುಖವನ್ನೂ ಸರಿಯಾಗಿ ನೋಡಲಿಲ್ಲ. ಬಣ್ಣಬಣ್ಣಗಳ ರೆಕ್ಕೆಗಳನ್ನು ಬೀಸುತ್ತ ಸುಖವಿಹಾರ ಮಾಡುವ ಪಾತರಗಿತ್ತಿಯಂತೆ ನಾನು ನನ್ನ ಸ್ವಪ್ನ ಸೃಷ್ಟಿಯಲ್ಲೇ ಹಾರಾಡುತ್ತಿದ್ದೆ.

ಒಂದು ತಿಂಗಳಿನ ತರುವಾಯ 'ಅವರೊಡನೆ' ನನ್ನ ವಿವಾಹ ಜರಗಿದುದೂ ಆಯಿತು. ಇದೇ ನಗರದಲ್ಲಿ ನೇಕಾರರ ಓಣಿಯಲ್ಲಿರುವ ಅವರ ಮನೆಯೆದುರಿಗೇ ಮದುವೆ ನಡೆಯಿತು. ಶಿವಪುರದಿಂದ ದೇವಪ್ಪನವರೂ ಬಂದಿದ್ದರು. ಮಲಕಾಜಿ ಮಾತ್ರ ಬರಲಿಲ್ಲ; ಬರುವ ಹಾಗಿರಲಿಲ್ಲ.

ಮದುವೆಗೆ ಸಾಕಷ್ಟು ಜನ ನೆರೆದಿದ್ದಿತೆಂದೇ ಹೇಳಬಹುದು. ನಮ್ಮವರದು ಬಲು ದೊಡ್ಡ ಮನೆತನವೆಂಬ ವಿಚಾರ ನನಗೆ ಗೊತ್ತಾದುದು ಅದೇ ಮೊದಲ ಬಾರಿ. ಅವರ ಮನೆಯಲ್ಲಿ ತಂದೆ ತಾಯಿಗಳಲ್ಲದೆ ಗಂಡನನ್ನು ಬಿಟ್ಟು ಬಂದ ಒಬ್ಬ ಅಕ್ಕನೂ ಇದ್ದಳು. ನೀಲಕ್ಕ ಎಂದು ಹೆಸರು ಅವಳಿಗೆ. ಸುಮಾರು ಮೂವತ್ತೈದು ವರ್ಷ ವಯಸ್ಸು. ದಪ್ಪಗೆ ಕುಂಬಳ ಕಾಯಿಯ ಹಾಗೆ ಮೈ. ಕಪ್ಪುಬಣ್ಣ. ನನ್ನನ್ನು ನೋಡಿದ ಮೊದಲ ಗಳಿಗೆಗೇ ಅವಳಿಗೆ ನನ್ನ ಬಗೆಗೆ ಅಸೂಯೆಯುಂಟಾಗಿರಲು ಸಾಕು. ನನ್ನ ಚೆಲುವಿಕೆಯನ್ನು ಕಂಡು ಅವಳ ಹೊಟ್ಟೆಯಲ್ಲಿ ಬೆಂಕಿ ಬಿತ್ತೋ ಏನೊ.

"ಈ ಪಾತರಗಿತ್ತೀನ್ನ ನಮ್ಮ ರಾಚಣ್ಣ ಯಾತಕ್ಕ ಕಟ್ಟಿಕೊಂಡನೋ

ಏನೊ," ಎಂದು ಅವಳು ಗೊಣಗಿಕೊಳ್ಳುತ್ತಿದ್ದುದು ನನ್ನ ಕಿವಿಗೆ ಬೀಳದಿರಲಿಲ್ಲ. ನನ್ನ ಮೈಯೆಲ್ಲಾ ಉರಿಯತೊಡಗಿತು. ಈಗಲೇ ಹೀಗೆ ದೂಷಿಸುತ್ತಿರುವ ಈಕೆ ಮುಂದೆ ನನ್ನನ್ನು ಎಷ್ಟು ಪೀಡಿಸುವಳೋ! ಇವಳ ಅಂಕೆಯಲ್ಲಿದ್ದು ಕೊಂಡು ಬಾಳುವೆ ಮಾಡುವುದು ಹೇಗೋ!

'ಅಕ್ಕೀಕಾಳು' ಬಿದ್ದ ಬಳಿಕ ನಮಗೆ ಇಳಿದುಕೊಳ್ಳಲು ಕೊಡಲ್ಪಟ್ಟಿದ್ದ ಮನೆಗೆ ಬರುತ್ತಲೂ ಅವ್ವನನ್ನು ಕೇಳಿದೆ :

" ನನ್ನ ನೋಡಿ ಹಂಗ್ಯಾಕ ಮಾತಾಡಿದಳೇ ಅವ್ವಾ ಆಕೆ ?"

ನೀಲಕ್ಕನ ಮಾತನ್ನಾಲಿಸಿ ಅವ್ವನಿಗೂ ಬಹಳ ವ್ಯಸನವಾಗಿತ್ತು. ನೊಂದ ಧ್ವನಿಯಲ್ಲಿ ಅವಳೆಂದಳು :

" ಆವಳಿಗ್ಯಾಕೋ ನಿನ್ನ ಕಂಡರಾಗಲಿಲ್ಲ. ನೀ ಮಾತ್ರ ಅವಳ ಮ್ಯಾಲ ಸಿಟ್ಟಾಗಬ್ಯಾಡ ಗಿರಿಜಾ. ಅವಳ ಮನಸ್ಸಿನ ಹಾಂಗ ನಡಕೊಳ್ಳಲಿಕ್ಕೆ ಕಲಿ."

" ಮನಿಯಾಗ ಅವಳೇ ಹಿರಿಯಳೇನೇ ಅವ್ವಾ ?"

" ಅವಳ ಅವ್ವ ಇದ್ದಾಳಲ್ಲ? ಆದರೂ ಇವಳದೇ ಕಾರಭಾರ ಅಂತ ಕಾಣುತೈತಿ. ನೀ ಸೊಸಿಯಾಗಿ ಹೋಗುವಾಕಿ. ಇಬ್ಬರ ಮಾತೂ ಕೇಳಿ ಕೊಂಡಿರಾಕಬೇಕು."

ಮದುವೆಗೆ ನೆರೆದಿದ್ದ ಹೆಂಗಸರಲ್ಲೊಬ್ಬಾಕೆ ಕೈ ತಿರುವುತ್ತಾ ಹೇಳಿದಳು :

" ಅವ್ವನಿಗಿಂತ ಮಗಳದೇ ಹೆಚ್ಚು ದಿಮಾಕು ಮನಿಯಾಗ. ಗಂಡನ್ನಂತೂ ಬಿಟ್ಟು ಕುಂತಾಳ. ಜೀವ ಹೆಂಗ ರಮಿಸಬೇಕು? ಅದಕ್ಕಃ ಏನಾರೆ ಗದ್ದಲ ಮಾಡುತಾ ಇರುತಾಳ."

" ಗಂಡನ್ನ ಯಾಕ ಬಿಟ್ಟಾಳ ?" ಎಂದು ಅವ್ವ ಕೇಳಿದಳು.

" ಹೂಂ. ಅದೊಂದು ದೊಡ್ಡ ಕಥಿ. ಅದನ್ನೆಲ್ಲಾ ಏನು ಹೇಳೂದು ? ನಮಗಾದರೂ ಯಾತಕ್ಕ ಅದೆಲ್ಲಾ ಉಸಾಬರಿ ?" ಎಂದು ಆ ಹೆಂಗಸು ಅಷ್ಟಕ್ಕೇ ಸುಮ್ಮನಾದಳು.

" ಅವಳ ಗಂಡ ಎಲ್ಲಿದ್ದಾನವ್ವಾ ?"

" ಇದಾನ ಇದೇ ಊರಾಗ. ಅದೊಂದು ಹುಚ್ಚ ಪಂಡರಿ," ಎಂದಳು ಆ ಹೆಂಗಸು.

" ಹಾಂಗ ಹುಚ್ಚ ಅಂತೇನೂ ಅಲ್ಲ, ಚಲೋ ಶ್ಯಾಣ್ಯಾ ಅದಾನು. ದೊಡ್ಡ ದೊಡ್ಡ ಪರೀಕ್ಷಾ ಪಾಸು ಮಾಡಿದಾನು. ಆದರಃ ಅವಗ ಸಂಸಾರ ಮಾಡೂದೇ ಬ್ಯಾಡಾಗ್ಯೆತಿ. ಒಬ್ಬ ಸ್ವಾಮಿಯ ನಾದಕ್ಕ ಬಿದ್ದು ಸಾಧೂ ಆದಂಗ ಆಗಿ ಹೋಗಿದಾನ." ಎಂದು ಇನ್ನೊಬ್ಬ ಹೆಂಗಸು ಹೇಳಿದಳು.

" ಯಾವ ಸ್ವಾಮಿ ?"

" ಇಲ್ಲೇ ಇದಾನ ಒಬ್ಬ ಸ್ವಾಮಿ. ಅವಂದೂ ಬಲೇ ಸೋಗು."

" ಅಕ್ಕೀಕಾಳಿಗೆ ಬಂದಿದ್ದನೇನು ನೀಲವ್ವನ ಗಂಡ ?"

" ಬಂದಿದ್ದನಲ್ಲ. ನೀನು ನೋಡಲಿಲ್ಲೇನು ?"

" ಇಲ್ಲ."

" ತೆಳ್ಳಗಃ ಕಡ್ಡೀಯ ಹಾಂಗ ಗಿಡ್ಡ ಅದಾನಲ್ಲ – ದೋತರಾ ಉಟ್ಟು ರುಮಾಲು ಸುತ್ತಿ ಕೋಟು ಹಾಕಿದ್ದನಲ್ಲ. ಹಣೆಯ ಮ್ಯಾಲ ವಿಭೂತೀ ಪಟ್ಟಿ. ಪಿಳೀ ಪಿಳೀ ಅಂತ ಕಣ್ಣು ಬಿಡುತಾ ನಿಂತಿದ್ದನಲ್ಲ, ಕಾಣಿಸಲಿಲ್ಲೇನು ?"

" ಇಲ್ಲವ್ವಾ," ಎಂದಳು ನಮ್ಮ ಅವ್ವ. " ಹೋಗಲಿ ಬಿಡವ್ವಾ. ಅದನ್ನೆಲ್ಲಾ ತಗೊಂಡು ಮಾಡೂದಾದ್ರೂ ಏನು ?"

ಮತ್ತೊಂದು ದಿನ ಅಲ್ಲಿ ಇದ್ದು ನಾವು ಊರಿಗೆ ಹೊರಟೆವು. ಒಂದು ತಿಂಗಳು ಬಿಟ್ಟು ನನ್ನನ್ನು ಕರೆಯಲು ಬರುವುದಾಗಿ 'ಅವರು' ಹೇಳಿದ್ದರಂತೆ.

" ಹುಡುಗಿ ದೊಡ್ಡಾಕಿಯಾಗಿದ್ದಾಳ. ಮನಿಯಾಗಿಟ್ಟುಕೊಂಡಾದರೂ ಏನು ಮಾಡುತೀರಿ? ಲಗೂನಃ ಕಳಿಸಿಬಿಡಿರಿ," ಎಂದು ನೀಲಕ್ಕನೂ ಹೇಳಿದಳು.

ನನ್ನನ್ನು ಸಾಧ್ಯವಾದಷ್ಟು ಬೇಗನೆ ಶಿವಪುರದಿಂದ ಕಳಿಸುವ ವಿಚಾರ ಅವ್ವನಿಗೆ ಇದ್ದೇ ಇತ್ತು.

" ಹಂಗೇ ಆಗಲವ್ವ. ಗಿರಿಜವ್ವನ್ನ ನಿಮ್ಮ ಮಡಿಲಾಗ ಹಾಕಿಬಿಟ್ಟೇವಿ. ಇನ್ನು ಮ್ಯಾಲ ನಿಮ್ಮದೇ ವಸ್ತು ಇದು," ಎಂದಳು ಅವ್ವ.

ಒಂದು ತಿಂಗಳು ಕಳೆದುಹೋಗುತ್ತಲೂ 'ಅವರು' ಬಂದು ನನ್ನನ್ನು ಕರೆದುಕೊಂಡು ಹೊರಟರು. ಅವರೊಡನೆ ಹೊರಡಲು ಅಂಥ ಆತುರವೇನೂ ನನಗಿರಲಿಲ್ಲ. ಶಿವಪುರದಲ್ಲೇ ಇರುವ ಬಯಕೆಯೂ ನನಗಿರಲಿಲ್ಲ. ಮದುವೆಯ ಸೀರೆಯನ್ನುಟ್ಟು ಹೊರಟುನಿಂತೆ.

"ಅತ್ತೆ ಮಾವಂದಿರು ದೇವರಂತ ತಿಳೀಬೇಕು ಗಿರಿಜವ್ವಾ. ಗಂಡನ ಮಾತು ಮೀರಬಾರದು. ನೀಲವ್ವಕ್ಕ ನಿನ್ನ ಅಕ್ಕ ಅಂತಲೇ ತಿಳೀಬೇಕು. ಯಾರ ಸಂಗಡಲೂ ಜಗಳ ಮಾಡಬ್ಯಾಡ. ಚಂದಾಗಿ ಬಾಳ್ವೆಮಾಡಿ ತವರು ಮನೀಗೆ ಹೆಸರು ಉಳಿಸು," ಎಂದು ಉಪದೇಶ ಮಾಡಿದಳು.

"ನೀ ಎಲ್ಲೇ ಇದ್ದರೂ ಸುಖವಾಗಿದ್ದರ ಸಾಕು," ಎಂದಿಷ್ಟೇ ಹೇಳಿ ಅಪ್ಪ ಕಣ್ಣೀರು ಸುರಿಸಿದ. ನನ್ನನ್ನು ಅಗಲಲಾರದೆ ಗೌರಿ ಬಿಕ್ಕಿ ಬಿಕ್ಕಿ ಅತ್ತಳು.

ನನ್ನ ಕಣ್ಣುಗಳಲ್ಲೂ ನೀರೂರದಿರಲಿಲ್ಲ. ಸೀರೆಯ ಸೆರಗಿನಿಂದ ಅವುಗಳನ್ನು ಮಿಡಿದುಕೊಂಡು, ತಂದೆತಾಯಿಗಳಿಗೆ ನಮಸ್ಕರಿಸಿ, ಗೌರಿಯನ್ನು ತಬ್ಬಿ ಮುದ್ದಿಟ್ಟು, ಮೋಟಾರು ಏರಿದೆ.

ಮೋಟಾರು ಹೊರಟಿತು. ಬೀದಿಯ ಚೌಕದಲ್ಲಿ ತಿರುಗಿಕೊಂಡು ಮುಖ್ಯ ರಸ್ತೆಗೆ ಬಂದು ಓಡತೊಡಗಿತು.

ಕಣ್ಮರೆಯಾಯಿತು ನನ್ನ ತವರುಮನೆ. ನಾನು ಅದನ್ನು ಕಂಡದ್ದು ಅದೇ ಕೊನೆಯ ಬಾರಿ. ಮತ್ತೆ ಅವ್ವ ನನ್ನನ್ನು ಅಲ್ಲಿಗೆ ಕರೆಯಿಸಿಕೊಳ್ಳಲಿಲ್ಲ. ಅಪ್ಪ ಅವ್ವ ಇಬ್ಬರೂ ಎರಡು ಮೂರು ಬಾರಿ ಇಲ್ಲಿಗೇ ಬಂದು ಒಂದೆರಡು ದಿನ ಇದ್ದು ಹೋದರು. ಅಪ್ಪನಿಗೇನೋ ನನ್ನನ್ನು ಕರೆದೊಯ್ಯುವ ಮನಸ್ಸಿತ್ತು. ಅವ್ವನ ಮನಸ್ಸು ನೋಯಿಸಲಿಷ್ಟವಿಲ್ಲದೆ ಅವನೂ ಸುಮ್ಮನಿದ್ದುಬಿಟ್ಟ. ಚೊಚ್ಚಲು ಬಾಣಂತನಕ್ಕೂ ನಾನು ತವರೂರಿಗೆ ಹೋಗಲಿಲ್ಲ – ಅವರೇ ಬಂದು ಸೀರೆಯುಡಿಸಿ ಹೋದರು. ಮುಂದೆ, ಹಲ ವರ್ಷಗಳ ಬಳಿಕ ಕಳ್ಳೀಕಾಯಿ ನಗರದಲ್ಲಿ ಗೌರಿಯ ಮದುವೆ ನಡೆದಾಗ ಎಲ್ಲರೂ ಅಲ್ಲಿ ಕೂಡಿದ್ದೆವು. ಆಗಲೂ ನನ್ನನ್ನು ಶಿವಪುರಕ್ಕೆ ಕರೆಯಲಿಲ್ಲ ಅವ್ವ. ಅವಳು ನನ್ನನ್ನು ದೂರವಿರಿಸಲು ಕಾರಣವೇನೆಂಬುದು ನನಗೂ ಗೊತ್ತೇ ಇದ್ದಿತಲ್ಲವೆ? ಅವಳ ಮನಸ್ಸಿನಲ್ಲಿನ

ಶಂಕೆಯನ್ನು ಕಂಡು ನಾನು ಒಳಗೊಳಗೇ ನಗುತ್ತಿದ್ದೆ. ಆ ದಿನಗಳಲ್ಲಿ ನನಗೆ ಮಲಕಾಜಿಯ ಬಗೆಗೆ ತುಂಬಾ ಕೋಪವಿತ್ತು, ತುಂಬಾ ದ್ವೇಷವಿತ್ತು – ಅವನೇ ಬಂದು ನನ್ನ ಕಾಲಿಗೆ ಬಿದ್ದು ಬೇಡಿಕೊಂಡರೂ ಕೂಡ ನಾನು ಅವನೊಡನೆ ಸ್ನೇಹ ಬೆಳಸುವಂತಿರಲಿಲ್ಲ. ನನ್ನ ಆ ಮನಃಸ್ಥಿತಿ ಅವ್ವನಿಗೆ ತಿಳಿಯುವುದಾದರೂ ಹೇಗೆ?

# ೧೧

ಮೂವತ್ತು ಮೈಲಿಗಳ ಮೋಟರು ಪ್ರವಾಸ ಮುಗಿದು ರೈಲು ಪ್ರವಾಸಕ್ಕಾರಂಭವಾಯಿತು. ರೈಲಿನಲ್ಲಿ 'ಅವರ' ಪಕ್ಕದಲ್ಲಿ ಮುದುಡಿಕೊಂಡು ಕುಳಿತಿದ್ದೆ. ಸಂಕೋಚವೆನ್ನಲೇ? ಇಲ್ಲ. ಅಂಥ ಸಂಕೋಚವೇನೂ ಇರಲಿಲ್ಲ.

ರೈಲಿನಲ್ಲಿದ್ದ ಗಂಡಸರ ಕಣ್ಣುಗಳೆಲ್ಲ ನನ್ನ ಕಡೆಗೇ ತಿರುಗಿದ್ದುವು. ಎಲ್ಲರ ದೃಷ್ಟಿಗಳನ್ನು ಆಕರ್ಷಿಸುವಂಥ ಚೆಲುವಿಕೆ ನನ್ನದೆಂಬ ಹೆಮ್ಮೆಯಿಂದ ಬೀಗುತ್ತಾ ನಾನು ತುಟಿಗಳಲ್ಲೇ ನಗುತ್ತಾ ಕುಳಿತುಕೊಂಡಿದ್ದೆ. ಎವೆಯಿಕ್ಕದೆ ನನ್ನನ್ನು ದಿಟ್ಟಿಸುತ್ತಿದ್ದ ಗಂಡಸರನ್ನು ನಾನೂ ದಿಟ್ಟಿಸಿ ನೋಡಬೇಕೆನ್ನಿಸುತ್ತಿತ್ತು. 'ಅವರಿಗೆ' ಗೊತ್ತಾಗದಂತೆ ಒಬ್ಬಿಬ್ಬರನ್ನು ಕದ್ದು ನೋಡಿದುದೂ ಆಯಿತು.

ಕಳ್ಳೀಕಾಯಿ ನಿಲ್ದಾಣದಲ್ಲಿ ರೈಲು ಅರ್ಧಗಂಟೆ ನಿಂತು ಕೊಂಡಿತ್ತು. 'ಅವರು' ಇಳಿದುಹೋಗಿ ನನಗಾಗಿ ಚಹ ತೆಗೆದುಕೊಂಡು ಬಂದರು. ಚಹದ ಗ್ಲಾಸು ಹಿಡಿದುಕೊಂಡು ಅವರು ಗಾಡಿಯತ್ತ ನಡೆದು ಬರುತ್ತಿದ್ದಾಗ ಮೊತ್ತ ಮೊದಲು ಬಾರಿ ನಾನು ಅವರನ್ನು ಸರಿಯಾಗಿ ದಿಟ್ಟಿಸಿ ನೋಡಿದೆ. ಅವರದು ಬಡಕಲು ದೇಹ. ಎತ್ತರವೂ ಅಷ್ಟಕ್ಕಷ್ಟೆ. ಮುಖವೂ ಆಕರ್ಷಕವಲ್ಲ. ಕೊಂಚವೂ ಬಿಂಕವಿಲ್ಲದ ಸಾಧಾರಣ ತರದ ನಡಿಗೆ. ಉಡಿಗೆ ತೊಡುಗೆಗಳೂ ಸಾಧಾರಣವಾದುವೇ.

"ಇಂಥ ಗಂಡನನ್ನ ಮಾಡಿಕೋಬೇಕು ಅಂತ ನನ್ನ ಹಣೆಯೊಳಗ ಬರದಿತ್ತೇನೋ!" ಎಂದು ನನ್ನಷ್ಟಕ್ಕೆ ನಾನೇ ಅಂದುಕೊಂಡು ಮುಖವನ್ನತ್ತ ತಿರುಗಿಸಿದೆ.

" ಚಹಾ ತಗೋ ಗಿರಿಜಾ," ಎಂದರವರು.

" ಬ್ಯಾಡ. ನಾ ಕುಡಿಯೂದಿಲ್ಲ."

ಅಷ್ಟು ವರ್ಷಗಳವರೆಗೂ ನಾನೆಂದೂ ಚಹ ಸೇವಿಸಿರಲಿಲ್ಲ. ನಮ್ಮ ಮನೆಯಲ್ಲಂತೂ ಚಹದ ಪರಿಪಾಠವಿರಲೇ ಇಲ್ಲ.

" ಇರಲಿ ತಗೋ. ಪ್ರವಾಸ ಮಾಡುವಾಗ ಚಹಾ ಚಲೋದು," ಎಂದು ಅವರು ಬಲವಂತಪಡಿಸಿದರು. ಇನ್ನು ನಿರಾಕರಿಸುವಂತಿರಲಿಲ್ಲ. ಗ್ಲಾಸ್ ಕೈಗೆ ತೆಗೆದುಕೊಂಡು ಮುಖವನ್ನತ್ತ ತಿರುಗಿಸಿ ಚಹ ಕುಡಿದು ಮುಗಿಸಿದೆ. ಗ್ಲಾಸ್ ಕೊಟ್ಟು ಅವರೂ ಚಹ ಕುಡಿದು ಬಂದರು.

" ಇವರು ಒಳ್ಳೆಯವರೇ ಇರಬೇಕು," ಎಂದು ನಾನು ನನ್ನಲ್ಲಿಯೇ ಹೇಳಿಕೊಂಡೆ.

ಮುಂದೆ ಓರೆಕೋರೆ ನಿಲ್ದಾಣ ಬರುವವರೆಗೂ ಅವರು ಮಾತನ್ನೇ ಆಡಲಿಲ್ಲ. ಅವರು ಮಾತಿಗಾರಂಭಿಸಿದ್ದಲ್ಲಿ ನಾನೂ ಮಾತಾಡಬಹುದಾಗಿತ್ತು. " ಹೆಚ್ಚು ಮಾತಾಡದಿರುವದೂ ಇವರ ಸ್ವಭಾವವಾಗಿರಬೇಕು," ಎಂದು ನಾನು ನನ್ನಲ್ಲಿಯೇ ಹೇಳಿಕೊಂಡೆ.

ರೈಲು ಓರೆಕೋರೆ ನಿಲ್ದಾಣದಲ್ಲಿ ನಿಂತುಕೊಂಡಾಗ ರಾತ್ರಿಯ ಒಂಭತ್ತು ಗಂಟೆಯಾಗಿತ್ತು. ಅವ್ವ ಕಟ್ಟಿಕೊಟ್ಟ ಗಂಟನ್ನು ಕಂಕುಳಲ್ಲಿರಿಸಿಕೊಂಡು ನಾನು ಗಾಡಿಯಿಳಿದು ಬಂದೆ. ಮನೆಗೆ ಹೋಗುವುದಕ್ಕಾಗಿ ಅವರು ಟಾಂಗಾ ಗೊತ್ತು ಮಾಡಬಹುದೆಂದು ನಾನು ಭಾವಿಸಿದ್ದೆ. ಅವರೇನೂ ಹಾಗೆ ಮಾಡಲಿಲ್ಲ. ನಿಲ್ದಾಣದಿಂದ ಸುಮಾರು ಎರಡು ಮೈಲಿಗಳಷ್ಟು ಹಾದಿಯನ್ನು ನಡೆದುಕೊಂಡೇ ಮುಗಿಸಬೇಕಾಯಿತು.

" ತಮ್ಮ ಜನ್ಮದಲ್ಲಿ ಒಂದು ಸಾರಿ ಕೂಡಾ ಟಾಂಗಾ ಹತ್ತಿರಲಿಕ್ಕಿಲ್ಲ ಇವರು," ಎಂದು ನಾನು ಮನಸ್ಸಿನಲ್ಲೇ ಹೇಳಿಕೊಂಡೆ.

ನಿನಗೆ ನಗು ಬರುವುದಲ್ಲವೆ ಪ್ರಿಯಸಖಿ? ನಗು ಬರುವಂಥ ಮಾತೇ ಅಲ್ಲವೇ ಇದು? ನಾನಾದರೂ ಎಂದು ಟಾಂಗಾ ಹತ್ತಿದ್ದೆ ಅದುವರೆಗೆ?

ಮನೆಗೆ ಬರುತ್ತಲೂ ಇವರ ತಾಯಿ ಒಳಗಿನಿಂದ ಓಡುತ್ತ ಬಂದು ನನ್ನ

'ನಿವಾಳಿ' ತೆಗೆದು, ನೆಟಿಕೆ ಮುರಿದು ಬರಮಾಡಿಕೊಂಡಳು. ನೀಲಕ್ಕ ಮತ್ತು ಕೆಲವರು ಹೆಂಗಸರು ಅಲ್ಲಿ ಸೇರಿದ್ದರು. ನಾನು ಅವರೆಲ್ಲರಿಗೂ ನಮಸ್ಕಾರ ಮಾಡಿದೆ. ನೀಲಕ್ಕ ನನ್ನನ್ನು ದೇವರ ಕೋಣೆಗೆ ಕರೆದೊಯ್ದಳು. ದೇವರಿಗೆ ವಂದಿಸಿದ್ದೂ ಆಯಿತು. ಅನಂತರ ಊಟ. ಗಂಡಸರು ಉಂಡು ಎದ್ದ ಬಳಿಕ ನಾವೂ ಊಟಮಾಡಿ ಮುಗಿಸಿದೆವು.

"ಹುಡುಗೀನೊಬ್ಬಾಕೀನ್ನs ಕಳಿಸಿದ್ದಾರ ನೋಡಿರಿ. ಎಂಥಾ ಮಂದಿಯೋ ಅದು!" ಎಂದು ಟೀಕೆ ಮಾಡಿದಳು ನೀಲಕ್ಕ.

ನಾನು ಬಾಯಿ ಮುಚ್ಚಿಕೊಂಡು ಸುಮ್ಮನೆ ಕುಳಿತಿದ್ದೆ. ನೀಲಕ್ಕನೊಡನೆ ವಾದಕ್ಕೆ ನಿಲ್ಲಬಾರದೆಂದು ಅವ್ವ ಎಚ್ಚರಿಕೆ ಕೊಟ್ಟಿರಲಿಲ್ಲವೇ ನನಗೆ?

"ಗಾಡಿಗ್ಯಾಕೆ ಐದು ರೂಪಾಯಿ ಖರ್ಚುಮಾಡೂದು ಅಂತ ಲೆಕ್ಕ ಹಾಕಿದ್ದಾರು ಬಿಡೇ," ಎಂದಳು ನನ್ನ ಅತ್ತೆ.

ಅವರು ಇನ್ನೂ ಏನೇನನೋ ಮಾತನಾಡಿಕೊಂಡರು. ನಾನು ಅದಕ್ಕೆಲ್ಲ ಲಕ್ಷ್ಯ ಕೊಡಲೇ ಇಲ್ಲ.

ಆವೇಳೆಗಾಗಲೇ ಹನ್ನೊಂದು ಗಂಟೆಯಾಗುತ್ತ ಬಂದಿತ್ತು. ಮಾವನವರು ಪಡಸಾಲೆಯಲ್ಲಿ ಹಾಸಿಗೆ ಬಿಡಿಸಿ ಮಲಗಿಕೊಂಡಿದ್ದರು. ನನಗೂ ತೂಕಡಿಕೆಗಾರಂಭವಾಗಿತ್ತು.

ದೇವರ ಕೋಣೆಯ ಪಕ್ಕದ ಕೋಣೆಯಲ್ಲಿ ನನ್ನನ್ನು ಬಿಟ್ಟು ನೀಲಕ್ಕ ಹೊರಟುಹೋದಳು. ಹಳೆಯಕಾಲದ ಕೋಣೆ. ಮಣ್ಣು ಸಾರಿಸಿದ ಗೋಡೆ. ಮಾಡವೊಂದರಲ್ಲಿ ಚಿಮಣಿದೀಪ ಉರಿಯುತ್ತಿತ್ತು. ಅಲ್ಲಿ ನಮಗಾಗಿ ಸಿದ್ಧವಾಗಿದ್ದುದೆಂದರೆ ಒಂದು ಗುಡಾರ. ಅದರ ಮೇಲೆ, ನಮ್ಮ ಅಪ್ಪ ನನಗೆಂದು ಕೊಟ್ಟು ಕಳಿಸಿದ್ದ ಜಮಖಾನ, ಮತ್ತು ಚದ್ದರು. ಗಾದಿಯಿರಲಿಲ್ಲ, ಮಗ್ಗುಲು ಹಾಸಿಗೆಯಿರಲಿಲ್ಲ, ದಿಂಬುಗಳಿರಲಿಲ್ಲ, ಏನೂ ಇರಲಿಲ್ಲ.

ಮಲಕಾಜಿಯ ಮಲಗುವ ಕೋಣೆ ನನ್ನ ಕಣ್ಣುಗಳೆದಿರು ಮೂಡಿದಂತಾಯಿತು. ಅದರ ಅಂದ....ಅದರ ಚೆಂದ....ಗೋಡೆಗಳ ಮೇಲಿನ ಬಣ್ಣ, ಹೂಗಿಡ ಬಳ್ಳಿಗಳ ಚಿತ್ರ ಗೆಲಸ, ಬಣ್ಣ ಬಣ್ಣಗಳ ಚಿತ್ರಪಟಗಳು, ಮಲಕಾಜಿಯ

ದೊಡ್ಡ ಮಂಚ, ದಪ್ಪನೆಯ ಗಾದಿ, ದುಂಡು ದುಂಡಾದ ದಿಂಬುಗಳು, ಗಾಳಿ ಹಾಕಿಕೊಳ್ಳುವ ಬೀಸಣಿಗೆ, ತಾಂಬೂಲದ ಪೆಟ್ಟಿಗೆ....

ಗುಡಾರದ ಮೇಲೆ ಕುಳಿತುಕೊಂಡಿದ್ದವಳು ಇದ್ದಕ್ಕಿದ್ದ ಹಾಗೇ ಮೇಲಕ್ಕೆದ್ದೆ. ನನ್ನೆದೆಯಲ್ಲಿ ವಿಚಿತ್ರವಾದ ಉದ್ವೇಗ ತುಂಬಿ ಬಂದ ಹಾಗಾಗಿತ್ತು. ಆ ದರಿದ್ರ ಕೊಠಡಿಯನ್ನು, ಮನೆಯನ್ನು ತ್ಯಜಿಸಿ ಓಡಿಹೋಗಿಬಿಡಬೇಕೆಂದೂ ನನಗೆನ್ನಿಸುತ್ತಿತ್ತು.

ಅಷ್ಟರಲ್ಲಿ ಅವರು ಒಳಬಂದರು. ಬಾಗಿಲು ಮುಚ್ಚಿದರು, ಚಿಲಕ ಹಾಕಿದರು....

ನನ್ನ ಕಣ್ಣಿನೆದುರಿಗೆ ಮಲಕಾಜಿಯ ಮೂರ್ತಿ, ಮಲಕಾಜಿಯ ಕೊಠಡಿ. 'ಇವರು' ನನಗೆ ಅಪರಿಚಿತರೆಂದೇ ತೋರುತ್ತಿತ್ತು. ಇವರು ಯಾರು? ಇದು ಯಾರ ಮನೆ? ನಾನೇಕೆ ಇಲ್ಲಿಗೆ ಬಂದೆ? ಯಾರು ನನ್ನನ್ನು ಕರೆದು ತಂದರಿಲ್ಲಿಗೆ?....

ನನಗೆ ಹುಚ್ಚು ಹಿಡಿದ ಹಾಗಾಗಿತ್ತು. ಕೂಗಿಕೊಳ್ಳಬೇಕೆನ್ನಿಸುತ್ತಿತ್ತು. ಕೂದಲು ಕೆದರಿಕೊಂಡು ಬಟ್ಟೆಗಳನ್ನು ಹರಿದುಕೊಂಡು ಅಲ್ಲಿಂದ ಓಡಿಹೋಗ ಬೇಕೆನ್ನಿಸುತ್ತಿತ್ತು.

ನನ್ನ ಮುಖದ ಮೇಲಿನ ವಿಲಕ್ಷಣ ಕಳೆಯನ್ನು ಕಂಡು ಅವರಿಗೆ ದಿಗಿಲಾಗಿರಲು ಸಾಕು.

"ಯಾಕೆ ಗಿರಿಜಾ, ಯಾಕೆ? ಏನಾತು?" ಎಂದರು, ಪಿಸುದನಿಯಲ್ಲಿ.

ನಗಬೇಕು ಎನ್ನಿಸುತ್ತಿತ್ತು ನನಗೆ. ಗಟ್ಟಿಯಾಗಿ ನಗಬೇಕು ಎನ್ನಿಸುತ್ತಿತ್ತು.

"ಮಲಗಿಕೊಳ್ಳೂದಿಲ್ಲವೇನೇ ಗಿರಿಜಾ?" ಎಂದರವರು ಮತ್ತೆ, ಜಮಖಾನದ ಮೇಲೊರಗಿಕೊಳ್ಳುತ್ತಾ,

ನಗಬೇಕೆನ್ನಿಸಿತು ನನಗೆ – ಮತ್ತೆ ನಗಬೇಕೆನ್ನಿಸಿತು.

ಅವರು ಅಂಜುತ್ತಂಜುತ್ತಾ ನನ್ನ ಕೈಹಿಡಿದೆಳೆದು ತಮ್ಮ ಮಗ್ಗುಲಲ್ಲಿ ಮಲಗಿಸಿಕೊಂಡರು. ಮತ್ತೆ ಅವರಿಗೇ ಏನೆನ್ನಿಸಿತೋ ಏನೋ. ದೀಪದ

ಬೆಳಕಿನಲ್ಲಿ ನನ್ನೊಡನೆ ಸರಸವಾಡಲು ಲಜ್ಜೆಯಾಯಿತೋ ಏನೊ. ಎದ್ದು, ದೀಪವನ್ನೂದಿ ಆರಿಸಿದರು.

ಕತ್ತಲು ಕವಿಯಿತು ಕೊಠಡಿಯಲ್ಲಿ. ದಟ್ಟವಾದ ಕತ್ತಲು. ಭೀಕರವಾದ ಕತ್ತಲು. ಅಂಥ ಕತ್ತಲನ್ನು ಅದಕ್ಕೆ ಮೊದಲು ನಾನೆಂದೂ ನೋಡಿದ ಹಾಗಿರ ಲಿಲ್ಲ. ಅರಿಯದ ಆಳವೊಂದರಲ್ಲಿ ಯಾರೋ ನನ್ನನ್ನೆತ್ತಿ ಬಿಸುಟದ ಹಾಗೆ ಭಾಸವಾಯಿತು. ನಾನು ಬೀಳುತ್ತಿದ್ದೆ, ಶೂನ್ಯದ ಗರ್ಭದಲ್ಲಿ ಬೀಳುತ್ತಿದ್ದೆ, ಹಾಗೇ ಬೀಳುತ್ತಿದ್ದೆ, ಬೀಳುತ್ತಿದ್ದೆ, ಬೀಳುತ್ತಿದ್ದೆ.

ಎಲ್ಲಿಗೆ ನಡೆದಿದ್ದೆ ನಾನು? ಯಾವ ಬಂಡೆಗೆ ಅಪ್ಪಳಿಸಿ ಕುಪ್ಪಳಿಸಿ ಬೀಳುವುದರಲ್ಲಿದ್ದೆನೋ. ನನ್ನ ಗತಿಯೇನಾಗುವುದಿತ್ತೋ?

"ಗಿರಿಜಾ....ಗಿರಿಜಾ...."

ಬಾವಿಯ ಕಟ್ಟೆಯ ಮೇಲೆ ನಿಂತು ಯಾರೋ ಕೂಗುತ್ತಿದ್ದರು.

"ಗಿರಿಜಾ....ಗಿರಿಜಾ...."

ಅಷ್ಟೆ. ಅವೆರಡೇ ಶಬ್ದಗಳು. 'ಓ' ಕೊಡಬೇಕೆಂಬ ಮನಸ್ಸು ಬರಲಿಲ್ಲ. ನನಗೆ. ಆ ಆಳದಲ್ಲಿ ಮುಳುಗುವುದರಲ್ಲೇ ಸಮಾಧಾನವಿದ್ದ ಹಾಗಿತ್ತು.

ಒಂದೆರಡು ಗಳಿಗೆ ಕಳೆದ ತರುವಾಯ ಯಾರೋ ನನ್ನನ್ನು ಹಿಡಿದು ಮೇಲಕ್ಕೆತ್ತಿದಂತಾಯಿತು. ಅವರ ಕೈಯಿಂದ ತಪ್ಪಿಸಿಕೊಂಡು ಬಾವಿಯಲ್ಲೇ ಇದ್ದು ಬಿಡಬೇಕೆಂದು ನಾನು ಯತ್ನಿಸಿದೆ. ಕೈ ಕೊಸರಿಕೊಂಡೆ. ಮೈ ಜಾಡಿಸಿದೆ. ಬಿಡುಗಡೆ ಹೊಂದಲು ಸಾಧ್ಯವಾಗಲಿಲ್ಲ.

ನಾನು ನಿಧಾನವಾಗಿ ಮೇಲೇರುತ್ತಲಿದ್ದೆ. ಮೇಲೆ....ಮೇಲೆ....ಮೇಲೆ....

ಮೇಲೆ ಅಂದರೆಲ್ಲಿಗೆ? ಸ್ವರ್ಗಕ್ಕೋ? ನರಕಕ್ಕೋ?

ನರಕವಿರುವುದು ಕೆಳಗಡೆ ಅಲ್ಲವೆ? ಪಾತಾಳದಲ್ಲಿ ಅಲ್ಲವೆ?

ಹಾಗಾದರೆ ನಾನು ನಡೆದಿದ್ದುದೆಲ್ಲಿಗೆ?

ಮತ್ತೆ ಕೂಗಿಕೊಳ್ಳಬೇಕೆನ್ನಿಸಿತು ನನಗೆ. ಬಾಯಿ ತೆರೆದೆ. ನಾಲಗೆ ಸತ್ತು ಹೋಗಿತ್ತು. ಧ್ವನಿ ಹೊರಡಲಿಲ್ಲ.

"ಗಿರಿಜಾ, ಗಿರಿಜಾ, ನೀನೀಗ ನನ್ನ ಹೆಂಡತಿ...."

ಆಗ ನಾನು ಶುದ್ಧಿಯ ಮೇಲೆ ಬಂದೆ. ನಾನು ಗಿರಿಜಾ, 'ಅವರ' ಹೆಂಡತಿ....ಅವರು ನನ್ನ ಗಂಡ....ಗಿರಿಜಳ ಗಂಡ....ಆ ಗಂಡನ, ಈ ಹೆಂಡತಿಯ ಸಮಾಗಮದ ಪ್ರಥಮ ರಾತ್ರಿ ಅದು....ಆ ದೇಹಕ್ಕೆ ಈ ದೇಹ....ಈ ಮನಸ್ಸಿಗೆ ಆ ಮನಸ್ಸು ?

ಇಲ್ಲ. ಇಲ್ಲ. ಇಲ್ಲ. ಆ ಮನಸ್ಸಿನಿಂದ ಬಲು ದೂರವಿತ್ತು ಈ ಮನಸ್ಸು.

ದೇಹಗಳೇನೋ ಕೂಡಿದುವು, ತಾಕಲಾಡಿದುವು, ಪರಸ್ಪರ ಬೆಸೆದು ಕೊಂಡುವು, ಹೆಣೆದುಕೊಂಡುವು, ಬೇರೆಯಾದುವು, ಮತ್ತೆ ಕೂಡಿದುವು, ತಾಕ ಲಾಡಿದುವು....ಶಿವಪುರದಲ್ಲಿ ನಾವು ಆಡುತ್ತಿದ್ದ ಚೆಂಡಾಟದ ನೆನಪು ಬಂತು. ಚೆಂಡು ಹಿಡಿಯಲೆಂದು ನಾವು ಅತ್ತಿತ್ತ ಓಡುತ್ತಿದ್ದುದರ ನೆನಪು ಬಂತು ಇಲ್ಲಿ. ನಾವೂ ಎಂಥದೋ ಒಂದು ಅದ್ಭುತ ಚೆಂಡನ್ನು ಹಿಡಿಯಲು ಎತ್ತೆತ್ತಲೋ ಸುತ್ತುತ್ತಿದ್ದ ಹಾಗಿತ್ತು.

ದೃಶ್ಯ ಬದಲಾಯಿತು....

ಬೇಸಗೆಕಾಲದ ರಾತ್ರಿ....ಸೆಕೆ....ಅಟ್ಟದ ಮೇಲಿನ ಅಂಗಳ....ಮೋಡ ಗಳಿಲ್ಲದ ಆಕಾಶದಲ್ಲಿ ಚಿಕ್ಕೆಗಳ ರಾಜ ಚಂದ್ರ....ಅಯ್ಯೋ ಏನು ಸೆಕೆ....ಏನು ಸೆಕೆ....ಗಾಳಿ....ಗಾಳಿ....ಪಕ್ಕದಲ್ಲಿ ಮಲಕಾಜಿ....

" ಗಿರಿಜಾ, ನನ್ನ ಮದುವಿಯಾಗ್ತೀಯಾ ?"

" ಹೂಂ ಮಲಕಾಜಿ...."

ದೇಹಗಳು ಕೂಡಿದುವು, ತಾಕಲಾಡಿದುವು, ಹೆಣೆದುಕೊಂಡುವು, ಬೇರೆ ಯಾದುವು, ಮತ್ತೆ ಕೂಡಿದುವು. ಚೆಂಡಾಟ....ಬುಗುರಿಯಾಟ....ಗೋಲಿ ಯಾಟ....ಫುಗಡಿಯಾಟ....

" ಫುಗಡಿ ಹಾಕಃ ಪುಟ್ಟಾಣೀ
ನವಣೀ ಕಾಳ ಚಿಟ್ಟಾಣೀ
ಭಾವ ಕೊಟ್ಟ ಬುಗುರೀ
ಬಣ್ಣಾದ ಚವರೀೀ....
ಫಿಯ್ಯೋ ಫಿಯ್ಯೋ...."

ಪುಗಡಿಯಾಟ ನಡೆದಿತ್ತು. ನಗುತ್ತಿದ್ದ ಚಂದ್ರ. ಸಿಳ್ಳುಹಾಕುತ್ತಿತ್ತು ಗಾಳಿ. ಚೆಂಡು ಹಾರುತ್ತಿತ್ತು....ಮೇಲೆ ಮೇಲೆ ಹಾರುತ್ತಿತ್ತು. ಅತ್ತ ಓಡುತ್ತಿತ್ತು, ಇತ್ತ ಓಡುತ್ತಿತ್ತು....

"ಬಣ್ಣದ ಚವರೀ‌ೕ

ಫಿಯ್ಯೋ ಫಿಯ್ಯೋ...."

ಮತ್ತೆ ಬದಲಾಯಿತು ದೃಶ್ಯ....

ನಿಂತು ಹೋಗಿತ್ತು ಚೆಂಡಾಟ. ಆಡಿ ಆಡಿ ದಣಿದು ಹೊರಳಿ ಬಿದ್ದುಕೊಂಡಿದ್ದ ಆಟಗಾರ. ಮೂಗಿನಿಂದ ರೈಲು ಕೂಗುತ್ತಿತ್ತು, ತಿದಿ ಎದ್ದೆದ್ದು ಬೀಳುತ್ತಿತ್ತು.

ಪ್ರಥಮ ರಾತ್ರಿ....

ಅವನು ಗಂಡ, ನಾನು ಹೆಂಡತಿ....ಹ ಹಾ ಹ್ಹಾ....ಹೆಂಡತಿ! ಹೆಂಡತಿ!

ಆಟಗಾರನಿಗೆ ಆಯಾಸವಾಗಿತ್ತು, ನನಗಿನ್ನೂ ಆಗಿರಲಿಲ್ಲ. ನಾನಿನ್ನೂ ಆಡಬಯಸುತ್ತಿದ್ದೆ, ನೆಗೆಯಬಯಸುತ್ತಿದ್ದೆ, ಓಡಬಯಸುತ್ತಿದ್ದೆ, ಕುಪ್ಪಳಿಸಬಯಸುತ್ತಿದ್ದೆ—

—ಚೆಂಡಿನಂತೆ. ಪಾತರಗಿತ್ತಿಯಂತೆ.

ಪಾತರಗಿತ್ತಿ?

ಅದೀಗ ಸರಿಯಾದ ವಿಶೇಷಣ. ನನ್ನ ಹಾರಾಟದಲ್ಲಿ ನಾನೇ ಆನಂದಿತಳಾಗಿ, ಮದೋನ್ಮತ್ತಳಾಗಿ ಹೂವಿನಿಂದ ಹೂವಿಗೆ, ಗಿಡದಿಂದ ಗಿಡಕ್ಕೆ, ಬಳ್ಳಿಯಿಂದ ಬಳ್ಳಿಗೆ ನೆಗೆಯಬಯಸುತ್ತಿದ್ದೆ.

ಪೂರ್ವಜನ್ಮದಲ್ಲಿ ನಾನು ಪಾತರಗಿತ್ತಿಯಾಗೇ ಹುಟ್ಟಿದ್ದೆನೋ ಏನೊ.

ಯಾರು ಬಲ್ಲರು ತಾಯಿ, ಆ ಜನ್ಮದ ಕಥೆಯ?

ನೀನಾದರೂ ಹೇಳು ತಾಯಿ, ನಿನಗಾದರೂ ಗೊತ್ತಿದ್ದರೆ!

# ೧೨

ಕೇಳು ಮುಂದಿನ ಕಥೆಯ, ಪ್ರಿಯಸಖಿ !

ಆ ರಾತ್ರೆ ಅವರು ಕೊರಡಿನಂತೆ ನಿದ್ರಿಸಿದರು.

ನನಗೆ ಮಾತ್ರ ಕೊಂಚವೂ ನಿದ್ದೆ ಬರಲಿಲ್ಲ. ರಾತ್ರೆಯಿಡೀ ನನ್ನ ಮನಸ್ಸು ಹಾಗೇ ಹಾರುತ್ತಿತ್ತು.

ಪಾತರಗಿತ್ತಿಯಂತೆ;

ಅಥವಾ—

ತೂಗಲುಬಾವಲಿಯಂತೆ ?

ನನಗೆ ಮಂಚ ಬೇಕಾಗಿತ್ತು. ಗಾದಿ ಬೇಕಾಗಿತ್ತು. ಮಗ್ಗುಲಾಸಿಗೆ ಬೇಕಾಗಿತ್ತು, ಚಿಗುರೆಲೆ ಬೇಕಾಗಿತ್ತು, ಲವಂಗ ಬೇಕಾಗಿತ್ತು, ಏಲಕ್ಕಿ ಬೇಕಾಗಿತ್ತು, ಬೀಸಣಿಗೆ ಬೇಕಾಗಿತ್ತು....

ಬೇಕಾಗಿತ್ತು....ಬೇಕಾಗಿತ್ತು....ಇನ್ನೂ ಏನೇನೋ ಬೇಕಾಗಿತ್ತು.

– ಅಷ್ಟರಲ್ಲೇ ಬೆಳಗಾಯಿತು.

ಬೆಳಗಿನ ಸೂರ್ಯನಂತಾಗಿದ್ದ ಕಣ್ಣುಗಳನ್ನು ಹೊತ್ತು ಅಡುಗೆಯ ಮನೆಗೆ ಕಾಲಿರಿಸಿದೆ. ಒಲೆಗೆ ಉರಿ ಹೊತ್ತಿಸುತ್ತಿದ್ದ ಸೀಲಕ್ಕ ನನ್ನ ಕಡೆ ಹೊರಳಿ ವಿಚಿತ್ರವಾಗಿ ನಗುತ್ತಾ,

"ನಿದ್ದೆ ಹತ್ತಿತೇನೇ ರಾತ್ರಿ ?" ಎಂದು ಕೇಳಿದಳು.

ಉತ್ತರವೀಯದೆ ನಾನು ಬಚ್ಚಲಿಗಿಳಿದು ಮುಖ ತೊಳೆದುಕೊಂಡೆ. ತಣ್ಣೀರಿನ ಆಲಿಂಗನಕ್ಕೂ ಶಾಂತವಾಗಲಿಲ್ಲ ಕಣ್ಣು. ಬೆಂಕಿ ಆರಲಿಲ್ಲ.... ಆರಲಿಲ್ಲ....

" ತಗೋ, ಉಳ್ಳಾಗಡ್ಡೀ ಹೆರಚು," ಎಂದು ಈಳಿಗೆಮಣೆ ಮುಂದೆ ಮಾಡಿದಳು ನೀಲಕ್ಕ. ನಾನು ಅದನ್ನು ಕೈಗೆ ತೆಗೆದುಕೊಂಡು ಕುಳಿತಿದ್ದ ಹಾಗೇ ಅತ್ತೆ ಒಳಗೆ ಬರುತ್ತಾ ಸಿಡುಕಿನ ಧ್ವನಿಯಲ್ಲಿ ಹೇಳಿದಳು :

" ಹಾಸಿಗೀ ತಗದಿಟ್ಟು ಕಸಾ ಹೊಡದು ಬಂದಿಯೋ ಇಲ್ಲೋ ?"

ಆ ಹಾಸಿಗೆ! ಹೇಸಿಕೆಯಾಯಿತು ನನ್ನ ಮನಸ್ಸಿಗೆ. ಉಳ್ಳಾಗಡ್ಡಿಯ ಖಾರ ಸಿಡಿಯಿತು ಕಣ್ಣಿಗೆ. ಬೆಂಕಿಯಲ್ಲಿ ಎಣ್ಣೆ ಬಿದ್ದಂತಾಯಿತು. ತಟ ತಟನೆ ತೊಟ್ಟಿಕ್ಕಿತು ಕಣ್ಣೀರು.

" ಹೋಗು. ಮೊದಲು ಖೋಲಿಯ ಕಸ ಹೊಡೆದು ಬಂದು ಆ ವ್ಯಾಲ ಅಡಿಗಿಗೆ ಕೂಡು," ಎಂದು ಹುಕುಂ ಕೊಟ್ಟಳು ಅತ್ತೆ. ಉಳ್ಳಾಗಡ್ಡಿಯನ್ನು ಮಣೆಯ ಮೇಲಿಟ್ಟು ನಾನು ಮತ್ತೆ ಕೊಠಡಿಗೆ ಹೊರಟೆ. ಆ ವೇಳೆಗಾಗಲೆ ಅವರೂ ಎದ್ದು ಹೋಗಿದ್ದರು. ಅಸ್ತವ್ಯಸ್ತವಾಗಿದ್ದ ಜಮಖಾನ – ಗುಡಾರ – ಚದ್ದರುಗಳನ್ನು ಕಂಡಾಗ, ಗಾಯಗೊಂಡು ಬಿದ್ದ ಹಕ್ಕಿಗಳನ್ನು ಕಂಡಂತಾ ಯಿತು. ಅವುಗಳನ್ನೆತ್ತಿ ಮಡಿಕೆ ಮಾಡುವಾಗ ಹೃದಯವನ್ನು ಯಾರೋ ಹಿಡಿದು ಹಿಸುಕಿದಂತಾಯಿತು.

ಸಗಣಿಯಿಂದ ಸಾರಿಸಿದ ನೆಲ. ಕಸಬರಿಗೆಯ ಸ್ಪರ್ಶವಾಗುತ್ತಲೂ ಧೂಳು ಹಾರತೊಡಗಿತು ಗಾಳಿಯಲ್ಲಿ. ಎಷ್ಟು ದಿವಸ ಆ ಕೊಠಡಿಯ ಕಸ ತೆಗೆದಿರ ಲಿಲ್ಲವೋ ಏನೋ. ನನ್ನ ಮೂಗು ರೇಗಿಕೊಂಡು ಉಗ್ರವಾಗಿ ಪ್ರತಿಭಟಿಸಿತು, ಕೊಠಡಿಯ ಭಾವಣಿಯನ್ನು ಹಾರಿಸುವ ಹಾಗೆ ಸಿಳ್ಳು ಹಾಕಿತು.

" ಒಂಟಿ ಸೀತಳು ನೋಡು ಕರಿಗಾಲ ಮಾರಿಯಾಕಿ," ಎಂದು ಅಡುಗೆಯ ಮನೆಯಲ್ಲಿ ಅತ್ತೆ ಗೊಣಗಿಕೊಂಡುದು ಕೇಳಬಂದಿತು.

" ಮತ್ತೊಂದು ಸಲ ಸೀನ ಬಾರದೇ ನನ್ನ ಮೂಗೇ!" ಎಂದು ಮನಸ್ಸಿ ನಲ್ಲೇ ಹೇಳಿಕೊಂಡು ಬೇಗ ಬೇಗ ಕಸ ಗುಡಿಸಿ, ಅದನ್ನು ಕಸಬರಿಗೆಯ ಮೇಲಿಟ್ಟುಕೊಂಡು ಹಿತ್ತಿಲ ಕಡೆ ಹೋಗಿ ಬಿಸುಟು ಬರುತ್ತಿದ್ದ ಹಾಗೇ, ನನ್ನ ವಿನಂತಿಯನ್ನು ಕೇಳಿಕೊಂಡಿದ್ದ ಮೂಗು ಕನಿಕರದಿಂದ ಮತ್ತೊಮ್ಮೆ ಸೀಟಿ ಹಾಕಿತು.

" ಮತ್ತೂ ಒಂಟಿ ಸೀನೇ!" ಎಂದು ಮುದುಕಿ ಮತ್ತೆ ಗೊಣಗಿಕೊಂಡಳು.

" ಒಂದೊಂದೇ ಯಾಕ ಸೀನುತೀ ನನ್ನ ಮೂಗೇ!" ಎಂದು ನಾನು ಮನಸ್ಸಿನಲ್ಲೇ ನಕ್ಕುಬಿಟ್ಟೆ.

ನಾನು ಅಡುಗೆಯ ಮನೆಗೆ ಹೋಗುತ್ತಲೂ ಅತ್ತೆಯೆಂದಳು :

" ಒಂದು ಖೋಲಿಯ ಕಸ ಹೊಡಿಯೂದಕ್ಕ ಒಂದು ತಾಸಾತಲ್ಲ! ಇನ್ನ ನೀ ಮನೀ ಕೆಲಸ ಯಾವಾಗ ಮಾಡುತೀಯೋ ದೇವರೇ ಬಲ್ಲ!"

" ಹೌದು! ದೇವರೇ ಬಲ್ಲ!" ಎಂದು ಮನಸ್ಸಿನಲ್ಲೇ ಹೇಳಿಕೊಳ್ಳುತ್ತಾ ನಾನು ಈಳಿಗೆಮಣಿಯೆಳೆದುಕೊಂಡೆ.

" ನಾವೆಲ್ಲಾ ಎದ್ದವ್ಯಾಲ ರಾಣಿಯ ಹಂಗ ಎದ್ದು ಬರುತೀಯಲ್ಲ. ಅಂಥಾದ್ದೆಲ್ಲಾ ನಡಿಯೂದಿಲ್ಲ ಈ ಮನಿಯಾಗ. ಕೋಳಿ ಕೂಗುವದಕ್ಕ ಮೊದಲಃ ಏಳಾಕಬೇಕು," ಎಂದಳು ಅತ್ತೆ.

" ಎದ್ದು, ನಾನಃ ಕೋಳಿಯ ಹಂಗ ಕೂಗಬೇಕೇನೋ!" ಎಂದು ನಾನು ಮನಸ್ಸಿನಲ್ಲೇ ಕೇಳಿಕೊಂಡೆ.

" ನಿಮ್ಮೂರಾಗ ಎಷ್ಟು ಗಂಟೇಕ್ಕ ಏಳುತಿದ್ದೆಯೋ?" ಎಂದು ಪ್ರಶ್ನಿಸಿದಳು ನೀಲಕ್ಕ.

ಅವಳಿಗೇನು ಹೇಳಬೇಕೆಂಬುದು ಹೊಳೆಯದೆ ನಾನು ಮೌನವಾಗಿಯೇ ಇದ್ದು ಬಿಟ್ಟೆ.

ನೀಲಕ್ಕ ಬಿಡಲಿಲ್ಲ. ಮತ್ತೆ ಕೇಳಿದಳು :

" ಯಾಕೇ, ಕೇಳಿಸಲಿಲ್ಲೇನು ಮಾತು?"

" ಅ....ಹಂ....ಹಂ....ಹಂ....ಇಷ್ಟೊತ್ತಿಗೇ ಏಳುತ್ತಿದ್ದೆ ನೀಲಕ್ಕಾ."

ಆ ವೇಳೆಗೆ ನೀಲಕ್ಕನ ಮಕ್ಕಳಿಗೂ ಎಚ್ಚರವಾಯಿತು. ಅವಳಿಗಿದ್ದುದು ಎರಡು ಮಕ್ಕಳು. ಒಂದು ಗಂಡು, ಒಂದು ಹೆಣ್ಣು. ಹುಡುಗ ಕಲ್ಯಾಣನಿಗೆ ಐದು ವರ್ಷ. ಹುಡುಗಿ ಅಕ್ಕಮಹಾದೇವಿಗೆ ಮೂರು ವರ್ಷ. ಹುಡುಗಿ ಹುಟ್ಟಿದ ವರ್ಷವೇ ಗಂಡನೊಡನೆ ಜಗಳವಾಡಿ ಅವನ ಮನೆ ಬಿಟ್ಟು ಬಂದು ತವರು ಮನೆಯಲ್ಲಿ ಧ್ವಜ ಊರಿದ್ದಳು ನೀಲಕ್ಕ. ಹುಡುಗರೂ ಇಲ್ಲಿಯೇ ಬೆಳೆಯು

ತ್ತಿದ್ದರು. ಇವರನ್ನು ಕರೆದೊಯ್ಯಲು ಆತ–ಆ ಶರಣ–ಬಂದಿರಲಿಲ್ಲ. ನೀಲಕ್ಕನೂ ತಾನಾಗಿಯೇ ಹೋಗಿರಲಿಲ್ಲ.

"ಅವ್ವಾ, ಅಸಿವು ಅಸಿವು...." ಎಂದು ರೋದಿಸುತ್ತ ಬಂದ ಕಲ್ಯಾಣ.

"ಅವ್ವಾ, ನಂಗ ಅಚ್ಚಿ...." ಎಂದು ರೋದಿಸುತ್ತ ಬಂದಳು ಅಕ್ಕ ಮಹಾದೇವಿ.

"ನಿಲವಿನ ಮ್ಯಾಲಿನ ಗಡಿಗಿಯೊಳಗಿನ ಅನ್ನ ತಗದು ಹುಡುಗರಿಗಿಡು ಗಿರಿಜಾ," ಎಂದಳು ನೀಲಕ್ಕ.

ಪಿಚ್ಚು ತುಂಬಿದ ಕಣ್ಣುಗಳನ್ನೂ ಜೊಲ್ಲು ಸೋರಿದ ಬಾಯಿಯನ್ನೂ ತೊಳೆಯದೇ ಹಾಗೇ 'ನ್ಯಾಕೆ'ಗೆ ಕುಳಿತುಕೊಂಡರು ಹುಡುಗರು. ಬೆಳಿಗ್ಗೆ ಎದ್ದೊಡನೆ ಅವರ ಮುಖ ತೊಳೆಯುವ ಪರಿಪಾಠವನ್ನೂ ಇಟ್ಟುಕೊಂಡ ಹಾಗಿರಲಿಲ್ಲ ನೀಲಕ್ಕ. ಹಠಾತ್ತಾಗಿ ನನಗೆ ನನ್ನ ತಂಗಿ ಗೌರಿಯ ನೆನಪು ಬಂತು. ನಾನಾಗಲಿ ಅವಳಾಗಲಿ ಮುಖ ತೊಳೆಯದೆ ಹಾಗೇ ತಿಂಡಿಗೆ ಕುಳಿತಿರಲಿಲ್ಲ ಎಂದೂ. ಬಹಳ ಬಡವರಾಗಿದ್ದರೂ ನಮ್ಮ ಮನೆಯಲ್ಲಿ ಸ್ವಚ್ಛತೆಯಿತ್ತು. ನಮ್ಮ ತಾಯಿಯದೂ ಬಹಳ ಅಚ್ಚುಕಟ್ಟಿನ ಸ್ವಭಾವ.

ಹುಡುಗರಿಗೆ ಅನ್ನವಿಡುವ ಮುನ್ನ ನಾನು ಅವರ ಮುಖ ತೊಳೆಯಲು ಯತ್ನಿಸಿದೆ. ಅವರು ಒಪ್ಪಲಿಲ್ಲ.

"ಊಹೂಂ. ನನಗ ಬ್ಯಾಡಾ," ಎಂದ ಕಲ್ಯಾಣ.

"ಊಹೂಂ. ನನಗ ಅನ್ನಾ!" ಎಂದಳು ಅಕ್ಕವ್ವ.

"ಇರಲಿ ಬಿಡಃ! ನಿಮ್ಮ ತವರುಮನಿಯ ಬಡಿವಾರ ಏನೂ ಬ್ಯಾಡ ಈ ಮನಿಯಾಗ. ಅವು ಹಂಗೇ ಉಣ್ಣುತಾವ," ಎಂದಳು ಅತ್ತೆ.

ಹತ್ತು ಗಂಟೆಯ ಊಟ ಮುಗಿಸಿಕೊಂಡು ಇವರು ಕೆಲಸಕ್ಕೆ ಹೊರಟು ಹೋದರು. ನೀಲಕ್ಕನೇ ಬಡಿಸುತ್ತಿದ್ದಳು. ನಾನು ಅವರಿಗೆ ಮುಖ ಕಾಣಿಸ ದಂತೆ ಒಲೆಯೆದುರಿಗೆ ಕುಳಿತುಕೊಂಡಿದ್ದೆ.

ಅವರು ಉಂಡು ಹೋದ ಬಳಿಕ ಮಧ್ಯಾಹ್ನ ಹನ್ನೆರಡರ ವೇಳೆಗೆ ಮಾವನವರು ಬಂದು ಉಂಡರು. ನೀಲಕ್ಕನೇ ಬಡಿಸಿದಳು ಅವರಿಗೂ.

ಆಗಲೂ ನಾನು ಒಲೆಯೆದುರಿಗೇ ಕುಳಿತುಕೊಂಡಿದ್ದೆ. ನಡುಮನೆಯಲ್ಲಿ ಕುಳಿತುಕೊಂಡು ನೂಲು ತೋಡುತ್ತಿದ್ದಳು ಅತ್ತೆ.

"ಗಿರಿಜವ್ವಗ ಏನಾದರೂ ತಿನ್ನುವದಕ್ಕ ಕೊಟ್ಟೆಯೋ ಇಲ್ಲೋ?" ಎಂದು ನೀಲಕ್ಕನನ್ನು ಕೇಳಿದರು.

"ನಾನ್ಯಾಕ ಕೊಡಬೇಕು? ಹಸಿವಾದರ ತಾನಃ ತಗೊಂಡು ತಿಂತಾಳ."

"ಹಾಂಗನ್ನಬಾರದು ನೀಲಕ್ಕಾ. ಪಾಪ, ಅರೀದ ಹುಡುಗಿ, ಅರೀದ ಮನಿಗೆ ಬಂದಿದ್ದಾಳ. ತಾನಃ ಹ್ಯಾಂಗ ತಗೊಂಡು ತಿಂದಾಳು? ಇಲ್ಲೀದೆಲ್ಲಾ ರೂಢಿ ಆಗೂತನಕಾ ಅವಳನ್ನು ಸಂಭಾಳಿಸಿಕೊಂಡು ಹೋಗು" ಎಂದರು ಮಾವನವರು.

"ಅರೀದ ಹುಡುಗಿ ಅಂದರೇನು ಕುಕ್ಕೊ ಬಾಳ ಏನು?" ಎಂದು ನುಡಿದು ಗಟ್ಟಿಯಾಗಿ ನಕ್ಕಳು ನೀಲಕ್ಕ.

ಮಾವನವರು ಮತ್ತೆ ಮಾತನಾಡಲಿಲ್ಲ. ಹೆಂಡತಿ ಮತ್ತು ಮಗಳು ಇಬ್ಬರೂ ಅವರನ್ನು ಹೆದರಿಸಿಕೊಂಡಿದ್ದ ಹಾಗಿತ್ತು. ನನ್ನವರಂತೂ ಆ ಹೆಂಗಸರೊಡನೆ ವಾದಕ್ಕೆ ನಿಲ್ಲುತ್ತಿರಲೇ ಇಲ್ಲ. ತಾಯಿ ಮಗಳಿಬ್ಬರೂ ಕೂಡಿ ಆ ಮನೆಯನ್ನು ಅತ್ಯಂತ ದರ್ಪದಿಂದ ಆಳುತ್ತಿದ್ದುದು ಸ್ಪಷ್ಟವಾಗಿತ್ತು.

"ಏಳು, ಉಣ್ಣೇಳು. ಬಾಳ ಹಸಿದಿರಬೇಕು?" ಎಂದಳು ನೀಲಕ್ಕ.

ಹಸಿವಾಗದಿರುತ್ತದೆಯೆ? ಬೆಳಗಿನಿಂದ ಏನನ್ನೂ ತಿಂದಿರಲಿಲ್ಲ ನಾನು. ಹಾಗೆ ಹಸಿವು ತಡೆಹಿಡಿದುಕೊಳ್ಳುವ ಅಭ್ಯಾಸವೂ ನನಗಿರಲಿಲ್ಲ. ತವರೂರಿನಲ್ಲಿನ ನಮ್ಮ ಮನೆಯಲ್ಲಿ ಆ ವೇಳೆಗಾಗಲೆ ಎರಡು ಊಟಗಳಾಗಿ ಹೋಗುತ್ತಿದ್ದುವು.

ಇಲ್ಲಿ ಮಾತ್ರ ಇನ್ನೂ ಒಂದು ಊಟವೂ ಆಗಿರಲಿಲ್ಲ.

ನೀಲಕ್ಕ ಹೇಳಿದ ಮಾತ್ರಕ್ಕೆ ನಾನು ಎದ್ದು ಊಟಕ್ಕೆ ಕುಳಿತುಕೊಳ್ಳುವ ಹಾಗೂ ಇರಲಿಲ್ಲ. ಅತ್ತೆ ಊಟ ಮಾಡಿದ ಮೇಲೆ ತಾನೇ ನಾನು ಊಟ ಮಾಡಬೇಕಾದುದು? ಅವಳು ಬೆಳಿಗ್ಗೆ ಏನನ್ನು ತಿಂದಿದ್ದಳೋ ಯಾರಿಗೆ ಗೊತ್ತು. ನಾನು ನೀರು ತರಲು ಹೋಗಿದ್ದ ಸಮಯದಲ್ಲಿ ತಾಯಿ ಮಗಳಿಬ್ಬರೂ

ಏನನ್ನಾದರೂ ತಿಂದು ಹಾಕಿರಬಹುದು. ಅಂತೆಯೆ, ಅವರಿಗಿನ್ನೂ ಹಸಿವೆ ಯಾಗಿರಲಾರದು....

ಅತ್ತೆ ಊಟಕ್ಕೇಳಬೇಕಾದರೆ ಒಂದು ಗಂಟೆಯಾಯಿತು. ಅವರೆಲ್ಲರೂ ಉಂಡು ಎದ್ದ ಬಳಿಕ ನಾನು ಕುಳಿತುಕೊಂಡೆ. ರೊಟ್ಟಿಗಳೇನೋ ಇದ್ದವು – ಪಲ್ಯದ ಗಡಿಗೆಯಲ್ಲಿ ಪಲ್ಯವಿರಲಿಲ್ಲ, ಅನ್ನದ ಗಡಿಗೆಯಲ್ಲಿ ಅನ್ನವಿರಲಿಲ್ಲ. ನಾನು ಬರಿಯ ಒಣರೊಟ್ಟಿಗಳನ್ನು ತಿಂದು ಹಸಿವು ಹಿಂಗಿಸಿಕೊಳ್ಳಬೇಕಾಗಿತ್ತು.

ಪಲ್ಯದ ಗಡಿಗೆಯ ತಳದಲ್ಲಿ ಉಳಿದುಕೊಂಡಿದ್ದ ಎಸರನ್ನು ರೊಟ್ಟಿಯ ಮೇಲೆ ಸುರಿದುಕೊಂಡು ತಿನ್ನತೊಡಗಿದೆ. ಒಂದು ತುಪ್ಪವಿಲ್ಲ, ಒಂದು ಮೊಸರಿಲ್ಲ, ಒಂದು ಮಜ್ಜಿಗೆಯಿಲ್ಲ.

ಇದ್ದಕ್ಕಿದ್ದ ಹಾಗೇ ನನ್ನ ಕೊರಳುಬ್ಬಿ ಬಂತು. ರೊಟ್ಟಿಯ ತುಣುಕು ಇಳಿಯಲಿಲ್ಲ ಗಂಟಲಲ್ಲಿ. ನನ್ನ ತವರುಮನೆಯಲ್ಲಿ ತುಪ್ಪವಿರದಿದ್ದರೂ ಮೊಸರಾದರೂ ಇದ್ದೇ ಇರುತ್ತಿತ್ತು. ಪಲ್ಯಕ್ಕೂ ಕೊರತೆಯಾಗುತ್ತಿರಲಿಲ್ಲ. ಇಲ್ಲಿ ಮಾತ್ರ....

ರೊಟ್ಟಿಯನ್ನು ಮಣೆಯ ಮೇಲಿಟ್ಟು, ಮೊಳಕಾಲುಗಳಲ್ಲಿ ತಲೆ ಹುದುಗಿಸಿ ಒಂದೆರಡು ನಿಮಿಷ ಅತ್ತುಕೊಂಡೆ. ಎದೆಯ ದುಃಖವೆಲ್ಲ ಹೊರಬಿದ್ದು ಎಷ್ಟೋ ಹಾಯೆನಿಸಿತು.

ಮತ್ತೆ ಹಸಿವು ತನ್ನ ಅಸ್ತಿತ್ವವನ್ನು ಸಾರಿಹೇಳಿತು.

ಒಂದು ಬಟ್ಟಲು ನೀರು ಕುಡಿದು ರೊಟ್ಟಿ ಕಡಿಯತೊಡಗಿದೆ.

....ರಾತ್ರೆ ನನ್ನನ್ನು ತೆಕ್ಕೆಯಲ್ಲಿ ಹಿಡಿದುಕೊಂಡಿದ್ದ ಹಾಗೆ ಅವರು ಕೇಳಿದರು.

“ ನೆಟ್ಟಗ ಉಂಡಿಯಾ ಗಿರಿಜಾ ?”

ನಾನು ಪ್ರತ್ಯುತ್ತರವೀಯದೆ ಹಾಗೇ ಬಿದ್ದುಕೊಂಡಿದ್ದೆ. ರಾತ್ರಿಯೂಟದ ಕಾಲಕ್ಕೂ ನನಗೆ ಅನ್ನ ಸಿಕ್ಕಿರಲಿಲ್ಲ. ತಂಗಳುರೊಟ್ಟಿ ತಿಂದು ನೀರು ಕುಡಿದು ಎದ್ದು ಬಿಡಬೇಕಾಗಿ ಬಂದಿತ್ತು.

ನನ್ನ ಮೌನವನ್ನು ಅವರು ಹೇಗೆ ಅರ್ಥ ಮಾಡಿಕೊಂಡರೊ ಏನೊ.

ಮತ್ತೆ ಅವರು ಮಾತನಾಡಲಿಲ್ಲ. ಆ ಮನೆಯಲ್ಲಿ ನಾನು ಸುಖವಾಗಿರುವೆನೆಂದೇ ಅವರು ತಿಳಿದುಕೊಂಡಿರಲಿ ಸಾಕು.

ನಾಲ್ಕೈದು ದಿನಗಳ ತರುವಾಯ ಒಂದು ರಾತ್ರಿ ಅವರು ಹೇಳಿದರು :

" ನಿನಗೆ ಇಲ್ಲಿ ಏನಾದರೂ ತ್ರಾಸ ಆದರೆ ಸಹಿಸಿಕೊಂಡಿರು ಗಿರಿಜಾ. ಅವ್ವನದು ಸ್ವಲ್ಪ ಸಿಟ್ಟಿನ ಸ್ವಭಾವ. ಅಕ್ಕನೂ ಹಟಮಾರಿ. ಅವರು ಒಂದೆರಡು ಮಾತು ಹೆಚ್ಚು ಕಡಿಮೆ ಅಂದರೂ ನೀ ಮನಸ್ಸಿಗೆ ಹಚ್ಚಿಕೊಳ್ಳಬ್ಯಾಡ."

ಅವ್ವನೂ ಹಾಗೇ ಉಪದೇಶ ಮಾಡಿದ್ದಳಲ್ಲವೇ ನನಗೆ? ಇವರೂ ಹಾಗೇ ಹೇಳುತ್ತಿದ್ದರು.

" ಮನಸ್ಸಿಗೆ ಹಚ್ಚಿಕೊಳ್ಳಬಾರದು...."

" ಸಹಿಸಿಕೊಳ್ಳಬೇಕು...."

" ಮನಸ್ಸೆಂಬುದೇ ಇರದಿದ್ದರೆಷ್ಟು ಚಲೋ ಆಗುತಿತ್ತು!" ಎಂದು ನಾನು ಮನಸ್ಸಿನಲ್ಲೇ ಹೇಳಿಕೊಂಡೆ.

ಅವರು ಮುಂದುವರಿಸಿದ್ದರು :

" ನಾವು ಬಡವರು ಗಿರಿಜಾ. ನೀನೇನು ಶ್ರೀಮಂತರ ಮಗಳಲ್ಲ. ಅದಕ್ಕೇ ನಾ ನಿನ್ನನ್ನೇ ಮದುವಿ ಮಾಡಿಕೊಂಡದ್ದು. ನಮ್ಮಪ್ಪ ಅವ್ವ ಹಳೆಯ ಕಾಲದವರು. ಅಕ್ಕನೂ ಹಾ ಗೇ. ಅವರನ್ನ ಎದುರುಹಾಕ್ಕೊಳ್ಳಬಾರದು. ಅವರ ಮರ್ಜಿಯ ಪ್ರಕಾರ ನಡಕೋಬೇಕು...."

" ಹೂಂ ಹೂಂ ಹೂಂ," ಎನ್ನುತ್ತಿತ್ತು ನನ್ನ ಮನಸ್ಸು.

" ನನಗೇನು ಬಹಳ ಸಂಬಳವಿಲ್ಲ. ಆದರೂ ಅಂಥಾ ತ್ರಾಸ ಏನೂ ಇಲ್ಲ ನನಗೆ. ನಾನು ಮ್ಯಾಟ್ರಿಕ್ ಮುಗಿಸಬೇಕಾದರೆ ಸ್ವಲ್ಪ ಸಾಲವಾಗಿತ್ತು. ಈ ಮೂರು ವರ್ಷದೊಳಗೆ ಅದನ್ನೂ ಮುಗಿಸಿಬಿಟ್ಟೆ. ನನಗಿನ್ನೇನು ಚಿಂತಿಲ್ಲ."

" ಇವರಿಗಂತೂ ಚಿಂತಿಲ್ಲ. ನನಗೆ?" ಎಂದು ನಾನು ನನ್ನನ್ನೇ ಕೇಳಿ ಕೊಂಡೆ.

" ನಿನಗೇನಾದರೂ ಬೇಕಾದರೆ ನನಗೆ ಹೇಳು. ನಾಚಿಕೆ ಬೇಡ," ಎಂದರವರು.

ನನಗೆ ಬೇಕಾದುದನ್ನೆಲ್ಲ ಒದಗಿಸಿಕೊಡುವ ಸಾಮರ್ಥ್ಯವಿತ್ತೇ ಅವರಲ್ಲಿ? ನಾನು ಒಳಗೇ ನಕ್ಕು ಸುಮ್ಮನಿದ್ದು ಬಿಟ್ಟೆ. ಮನಸ್ಸು ಮಾತ್ರ ಸುಮ್ಮನಾಗಲಿಲ್ಲ; ನನಗೆ ಬೇಕಿದ್ದುದನ್ನೆಲ್ಲ ದೊರಕಿಸಿಯೇ ತೀರುವುದಾಗಿ ಹಟ ಹಿಡಿಯುತ್ತಿತ್ತು.

ತವರುಮನೆಯಿಂದ ತಂದಿದ್ದ ರೇಶಿಮೆ ಸೀರೆಯನ್ನಾಗಲಿ, ಮದುವೆಯ ಸೀರೆಯನ್ನಾಗಲಿ ನಾನು ಉಟ್ಟುಕೊಳ್ಳುವ ಹಾಗಿರಲಿಲ್ಲವಲ್ಲ. ಹಬ್ಬ ಹುಣ್ಣಿವೆ ಗಳಲ್ಲಿ ಮಾತ್ರ ಉಡಬೇಕಾದ ಸೀರೆಗಳಲ್ಲವೇ ಅವು? ಪ್ರತಿ ದಿನವೂ ಒಂದು ಹಬ್ಬದ ಹಾಗೇ ಕಳೆಯಬೇಕೆಂದು ನನ್ನ ಬಯಕೆ. ತೆಳ್ಳನೆಯ ನುಣ್ಣನೆಯ ಬಣ್ಣ ಬಣ್ಣಗಳ ಬಟ್ಟೆ ತೊಡಬೇಕೆಂದು ನನ್ನ ಆಸೆ. ಆದರೆ, ಈ ಮನೆಯಲ್ಲಿ ಅದು ಕೈಗೂಡುವಂತಿರಲಿಲ್ಲ. ಹಳೆಯ ಮಾದರಿಯ ಒರಟು ನೂಲಿನ ಸೀರೆ ಗಳಲ್ಲೇ ನಾನು ತೃಪ್ತಿಪಟ್ಟುಕೊಳ್ಳಬೇಕಾಯಿತು. ಅವೂ ಹೆಚ್ಚಿಗಿರಲಿಲ್ಲ. ಎರಡೇ ಎರಡು ಮಾತ್ರ.

ಚಿಕ್ಕತನದಿಂದಲೂ ನನಗೆ ಪ್ರತಿದಿನವೂ ಸ್ನಾನ ಮಾಡುವುದು ಅಭ್ಯಾಸ ವಾಗಿತ್ತು. ಶಿವಪುರದಲ್ಲಿ ನೀರಿಗೇನೂ ಕೊರತೆಯಿರಲಿಲ್ಲ. ನಮ್ಮ ಮನೆಯ ಹತ್ತಿರವೇ ದೊಡ್ಡದಾದ ಬಾವಿಯಿದ್ದಿತಲ್ಲ! ಅಲ್ಲಿ ಕಟ್ಟಿಗೆಗೂ ಕೊರತೆಯಿರಲಿಲ್ಲ. ಮನೆಯ ಹತ್ತಿರವೇ ಹತ್ತಿಪ್ಪತ್ತು ಗಿಡಗಳಿದ್ದುವು.

ಈ ಊರಿನಲ್ಲಾದರೋ ನೀರಿನದೂ ಕೊರತೆ. ಕಟ್ಟಿಗೆಗೂ ಕೊರತೆ. ಶಿವಪುರದ ಹಾಗೆ ಇಲ್ಲಿ ಬಿಟ್ಟಿಯಾಗಿ ಕಟ್ಟಿಗೆ ಸಿಕ್ಕದು. ಅದಕ್ಕೂ ಹಣ ಸುರಿಯ ಬೇಕು. ಅಕ್ಕಿ ಜೋಳಗಳನ್ನುಪಯೋಗಿಸುವಷ್ಟೇ ಎಚ್ಚರಿಕೆಯಿಂದ ಕಟ್ಟಿಗೆ ಯನ್ನು ಉಪಯೋಗಿಸಬೇಕು.

ಇವರು, ನಮ್ಮವರು ವಾರದಲ್ಲೆರಡು ಬಾರಿ ಮಾತ್ರ ಸ್ನಾನಮಾಡುತ್ತಿದ್ದರು. ಇನ್ನುಳಿದವರೆಲ್ಲ ವಾರಕ್ಕೊಂದು ಬಾರಿ ಮೈಮೇಲೆ ಅಷ್ಟು ನೀರು ಸುರಿದುಕೊಂಡು ಸ್ನಾನದ ಶಾಸ್ತ್ರ ಮುಗಿಸುತ್ತಿದ್ದರು. ಗಂಡನಾದವನೇ ವಾರಕ್ಕೆರಡು ಬಾರಿ ಸ್ನಾನ ಮಾಡುವಾಗ ಅವನ ಹೆಂಡತಿಯಾದ ನಾನು ಪ್ರತಿನಿತ್ಯ ಸ್ನಾನ ಮಾಡುವುದು ಹೇಗೆ ಸಾಧ್ಯ? ಕೆಲವು ದಿನಗಳವರೆಗೂ ನನಗೆ ಅದೊಂದು ಸಂಕಟವಾಗಿ ಪರಿಣಮಿಸಿತ್ತು. ನಿತ್ಯ ಸ್ನಾನದ ಅಭ್ಯಾಸವನ್ನು ತ್ಯಜಿಸುವುದು ಬಹಳ ಕಷ್ಟಕರ

ವಾಗಿ ತೋರಿತು. ನನಗೇನು ಬಿಸಿನೀರೇ ಬೇಕೆಂಬ ಹಟವಿರಲಿಲ್ಲ. ತಣ್ಣೀರಾದರೂ ನಡೆಯುತ್ತಿತ್ತು. ಅಂತೂ ಮೈಮೇಲೆ ನೀರು ಬಿದ್ದಾಗಲೇ ಮನಸ್ಸಿನಲ್ಲಿ ನೆಮ್ಮದಿಯಿರುತ್ತಿತ್ತು. ಆದರೆ....

ಒಂದೆರಡು ದಿನ ನಾನು ಏಕಪ್ರಕಾರವಾಗಿ ಸ್ನಾನ ಮಾಡುತ್ತಲೂ ಟೀಕೆಗಳ ಬಿರುಗಾಳಿಯೇ ಬೀಸತೊಡಗಿತು.

"ಏನು ದೊಡ್ಡ ರಾಣಿಯು ಹಂಗ ದಿನಾ ಜಳಕ ಮಾಡುತಾಳಲ್ಲ!"

"ನಾವೇ ವಾರಕ್ಕೊಮ್ಮೆ ನೀರು ಹಾಕೊಳ್ಳುತೀವಿ. ಇವಳಿಗೆ ಮಾತ್ರ ದಿನಾ ಝುಳ ಝುಳ ಆಗಬೇಕು ಮೈ. ಗೊಂಬೀ ಹಾಂಗ ಅಲಂಕಾರ ಮಾಡಿ ಕೊಂಡು ತಿರುಗೂದಕ್ಕ ಹೋಗಬೇಕಂತ ಮಾಡಿದಾಳೋ ಏನೊ."

"ಇವರಪ್ಪ ಕಟ್ಟಿಗೀ ಅಂಗಡಿ ಇಟ್ಟಾನ! ದಿನಾ ಜಳಕಾ ಮಾಡುತಾಳ!"

ಆ ವಿಷಯ 'ಇವರ' ಕಿವಿಗೆ ಬೀಳುವುದಕ್ಕೂ ವಿಲಂಬವಾಗಲಿಲ್ಲ. ಒಂದು ರಾತ್ರೆ ಮಾತು ತೆಗೆದರು :

"ಏನದು ಗಿರಿಜಾ, ಜಳಕದ ಜಗಳಾ?"

"ನನಗೇನು ಬಿಸೀನೀರೇ ಬೇಕಂತಿಲ್ಲ. ತಣ್ಣೀರು ಹಾಕ್ಕೊಂಡರೂ ಇವರ್‍ಯಾಕ ಮೂಗು ಮುರೀಬೇಕು?"

"ಅದೊಂದು ಪದ್ಧತಿ ಅವರದು ಗಿರಿಜಾ. ನೀನೂ ಯಾಕ ಅವರ ಹಾಂಗೇs ಇರಬಾರದು?"

"ಛೆ. ಅವರ ಹಾಗೆ ನಾನಿರೂದು ಶಕ್ಯವೇ ಇಲ್ಲ," ಎಂದು ನನ್ನಷ್ಟಕ್ಕೆ ನಾನೇ ಹೇಳಿಕೊಂಡೆ. ಬಾಯಿ ಬಿಟ್ಟು ಏನನ್ನೂ ಆಡಲಿಲ್ಲ.

"ದಿನಾ ಜಳಕಾ ಮಾಡದಿದ್ದರೆ ನಡಿಯೂದೇ ಇಲ್ಲೇನೇ?"

ಆಗಲೂ ನಾನು ಬಾಯಿ ಬಿಡಲಿಲ್ಲ. ಅವರ ಹತ್ತಿರ ಮಲಗಿಕೊಳ್ಳುವುದಕ್ಕೂ ಹೇಸಿಕೊಳ್ಳತೊಡಗಿತ್ತು ನನ್ನ ಮನಸ್ಸು. ಓರೆಕೋರೆ ನಗರದಲ್ಲಿ ಬಿಸಿಲು ವಿಪರೀತ, ಯಾವಾಗಲೂ. ಇವರು ಯಾವಾಗಲೂ ಹೊರಗಡೆ ತಿರುಗುವವರು. ಬೆವರು ಬಸಿದು ಮೈಯೆಲ್ಲ ವಾಸನೆ ಹೊಡೆಯುವುದು. ವಾರಕ್ಕೆರಡು ಬಾರಿ ಸ್ನಾನ ಮಾಡಿದರೆ ವಾಸನೆ ಹೋಗುವುದೆಲ್ಲಿ ಸಾಧ್ಯ? ಅವರಿಗಂತೂ ಅದರ

ಅರಿವೇ ಇದ್ದ ಹಾಗಿರಲಿಲ್ಲ. ನನಗೆ ಮಾತ್ರ ಆ ದುರ್ನಾತವನ್ನು ಸಹಿಸಲಾಗುತ್ತಿರಲಿಲ್ಲ.

ಆದರೂ....

ಅವರು ನನ್ನ ಗಂಡ. ನಾನು ಅವರ ಹೆಂಡತಿ. ಅಸಹನೆಯನ್ನೆಲ್ಲ ಹತ್ತಿಕ್ಕಿಕೊಂಡು ಅವರ ತೆಕ್ಕೆಯಲ್ಲೇ ಬಿದ್ದುಕೊಳ್ಳಬೇಕಾಗುತ್ತಿತ್ತು.

ಈ ಹಾಳು ನಗರದಲ್ಲಿ ನೀರಿನ ತಾಪತ್ರಯವಾದರೂ ಎಷ್ಟು! ನಲ್ಲಿಯ ನೀರು ಕುಡಿಯುವುದಕ್ಕೂ ಸಾಲದು. ಸ್ನಾನ ಮಾಡಲು, ಬಟ್ಟೆ ತೊಳೆಯಲು ಬಾವಿಯ ನೀರೇ ಗತಿ. ಬಾವಿಯಿಂದ ನೀರು ಹೊತ್ತು ತರಲು ನಾನೇನೋ ಯಾವಾಗಲೂ ಸಿದ್ಧಳಾಗಿಯೇ ಇದ್ದೆ. ಆದರೆ ಅದಕ್ಕೂ ನೀಲಕ್ಕನ ಆತಂಕವೇ.

"ಮತ್ತೆ ಮತ್ತೆ ಏನದು ನೀರು ತರೂದು? ನೋಡಿದವರು ನಗುತಾರೆ," ಎನ್ನುವಳು ನೀಲಕ್ಕ.

"ಕೈಬೀಸುತ್ತಾ ರಸ್ತೆಯೊಳಗ ಹೋಗಿ ಬರೀ ನೀರು ತುಂಬಿ ತರೂದಕ್ಕಂತಃ ನಿನ್ನ ಮಾಡಿಕೊಂಡಿಲ್ಲ ನನ್ನ ಮಗ. ಮನೀ ಕೆಲಸ ಮಾಡುವರು ಯಾರೇ?" ಎನ್ನುವಳು ಅತ್ತೆ.

ನಾನು ಪ್ರತಿದಿನವೂ ಸೀರೆಯನ್ನೊಗೆದು ಹಾಕುವುದನ್ನು ಅವರು ಸಹಿಸುತ್ತಿರಲಿಲ್ಲ.

"ಸೀರೀ ಏನು ನಿಮ್ಮಪ್ಪ ಕೊಟ್ಟಿಲ್ಲ. ದಿನಾಲು ಒಗದು ತಿಂಗಳಿಗೊಂದು ಸೀರೀ ಹರಿದು ಹಾಕಿದರೆ ಆಮ್ಯಾಲ ನಿನಗ ತಂದುಕೊಡುವವರ್ಯಾರು, ಮಿಂಡ ಏನು?" ಎನ್ನುವಳು ಅತ್ತೆ.

"ನೀನಿಷ್ಟು ದಿಮಾಕು ಮಾಡಿ ಯಾರನ್ನ ಮೆಚ್ಚಿಸಬೇಕಂತ ಮಾಡೀಯೇ?" ಎನ್ನುವಳು ನೀಲಕ್ಕ.

"ಇವರ್ಯಾಕೆ ನನ್ನ ದಿನಾ ಸುಮ್ಮ ಸುಮ್ಮನೆ ಕಾಡಿಸುತಾರೆ?" ಎಂದು ಒಂದು ರಾತ್ರೆ 'ಇವರನ್ನು' ಕೇಳಿದೆ.

ಅವರು ತಲೆ ಕೆರೆದುಕೊಂಡು ಅತ್ತ ಮುಖ ತಿರುಗಿಸಿ ಮಲಗಿಕೊಂಡರು. ನನ್ನ ಪಕ್ಷವಹಿಸಿ ತಾಯಿಯನ್ನು ಅಕ್ಕನನ್ನು ಖಂಡಿಸುವ ಧೈರ್ಯ ಅವರಿಗೆಲ್ಲಿಂದ

ಬಂದೀತು? ನನ್ನ ಬಗೆಗೆ ಸಹಾನುಭೂತಿಯೇನೋ ಇತ್ತು ಅವರಲ್ಲಿ. ಆದರೆ ಆ ಒಣ ಸಹಾನುಭೂತಿಯಿಂದ ಯಾವ ಪ್ರಯೋಜನವೂ ಇರಲಿಲ್ಲ.

ಮಾವನವರು ಮಾತ್ರ ಆಗಾಗ ನನ್ನ ಪರವಾಗಿ ಧ್ವನಿಯೆತ್ತುತ್ತಿದ್ದರು.

" ಆ ಹುಡುಗೀನ್ನ ಯಾಕ ಹರಕೊಂಡು ತಿಂತೀರೇ? ಅವಳ ಪಾಡಿಗೆ ಅವಳನ್ನ ಬಿಡಬಾರದೇ?" ಎಂದು ಅವರೆನ್ನುತ್ತಲೂ,

" ನಾವ್ಯಾಕ ತಿನ್ನೂಣು ಅವಳನ್ನ? ನೀವು ಸುಮ್ಮನೆ ನಿಮ್ಮ ಕೆಲಸಾ ಮಾಡಿರಿ. ಈ ಬಿನ್ನಾಣಗಿತ್ತಿಯ ನಡತೆ ನಿಮಗೇನು ಗೊತ್ತು!" ಎಂದು ದಬಾಯಿಸುವಳು ಅತ್ತೆ.

" ಹಾಳಾಗಿ ಹೋಗಲಿ. ಇವಳ ಬಾಯಿಗೆ ಯಾರು ಹತ್ತಬೇಕು!" ಎಂದುಕೊಂಡು ಮಾವನವರೂ ಸುಮ್ಮನಾಗುವರು. ತಮ್ಮ ಮಗ್ಗ, ನೇಯ್ಗೆಯ ಕೆಲಸ ಬಿಟ್ಟು ಬೇರಾವುದರ ಕಡೆಗೂ ಅವರು ಗಮನಕೊಡುತ್ತಿರಲಿಲ್ಲ.

ಮನೆಯಲ್ಲಿ ಕಿರುಕುಳ ಬೆಳೆಯುತ್ತ ಬಂದಂತೆ ನನಗೂ ಬೇಸರು ಬೆಳೆಯುತ್ತ ಬಂತು. ಒಂದು ರಾತ್ರೆ 'ಅವರನ್ನು' ಸ್ಪಷ್ಟವಾಗಿ ಕೇಳಿದೆ:

" ನನಗೆ ತ್ರಾಸ ಕೊಡಬಾರದಂತ ನಿಮ್ಮವ್ವಗೂ ಅಕ್ಕಗೂ ಹೇಳುತೀರೋ ಇಲ್ಲೋ?"

ಅಷ್ಟು ಸ್ಪಷ್ಟವಾಗಿ ಅದುವರೆಗೆ ನಾನು ಅವರೆದುರಿಗೆ ಮಾತನಾಡಿರಲಿಲ್ಲ. ಸಹಜವಾಗಿಯೆ ಅವರಿಗೆ ದಿಗಿಲಾಗಿರಲು ಸಾಕು.

" ನಾಳೆ ಹೇಳಿ ನೋಡುತೀನಿ ಗಿರಿಜಾ," ಎಂದು ಹೇಳಿ ಅವರು ಮಲಗಿ ಕೊಂಡರು.

ಬೆಳಿಗ್ಗೆ ನಾನು ಪಡಸಾಲೆಯ ಕಸ ಗುಡಿಸುತ್ತಲಿದ್ದೆ. ಅವರು ಅಡುಗೆಯ ಮನೆಗೆ ಹೋಗಿ ತಮ್ಮ ತಾಯಿಯನ್ನು ಕುರಿತು ಹೇಳಿದರು:

" ಏನವ್ವಾ ಜಗಳ ಮನಿಯಾಗ ದಿನಾಲೂ?"

ಎಂದೂ ಆ ರೀತಿ ಮಾತನಾಡದಿದ್ದ ಮಗ ಆ ದಿನ ಮಾತನಾಡಿದುದನ್ನು ಕೇಳಿ ಅತ್ತೆಗೆ ವಿಸ್ಮಯವಾಗಿರಬೇಕು. ಅವನು ಅಷ್ಟು ಧೈರ್ಯ ಮಾಡಲು ನನ್ನ

ಚಿತಾವಣೆಯೇ ಕಾರಣವೆಂದೂ ಆಕೆಗೆನ್ನಿಸಿರಬೇಕು. ಧ್ವನಿಯನ್ನೇರಿಸಿ ಕೇಳಿದಳು :

" ನಿನ್ನ ಹೆಂಡತಿ ಏನಾರ ಚಾಡಿ ಹೇಳಿದಳೇನು ?"

" ಅವಳಿಗೆ ದಿನಾ ಜಳಕ ಮಾಡುವದು ರೂಢಿ. ಮಾಡಿಕೊಳ್ಳಲಿ ಬಿಡಬಾರದೇ? ಅವಳೇ ಬಾವಿಗೆ ಹೋಗಿ ನೀರು ತಂದು ಸುರಿದುಕೊಂಡರೆ ನಿಮ್ಮದೇನು ಹೋಗುತದೆ? ಅವಳ ಸಂಗಡ ಯಾಕೆ ಹೊಡೆದಾಡುತೀರಿ ?"

ಅಷ್ಟು ಮಾತಾಡಿದವರೇ ಅವರು ಅಲ್ಲಿ ನಿಲ್ಲದೆ ಕೊಠಡಿಗೆ ಹೋಗಿಬಿಟ್ಟರು. ಅಡುಗೆಯ ಮನೆಯಲ್ಲಿ ಗುಡುಗು ಗರ್ಜನೆಗಳಿಗಾರಂಭವಾಯಿತು.

" ಅಯ್ಯೋ! ಹೊಟ್ಟ್ಯಾಗ ಹುಟ್ಟಿದ ಮಗನೂ ನನಗ ವಿರುದ್ಧ ಆದನಲ್ಲ! ನನಗಿಂತ ಆ ಹೊಯ್ಮಾಲಿಯೇ ಹೆಚ್ಚಿನಾಕೆಯಾದಳಲ್ಲ ಅವಗ! ಇನ್ನೇನು ಮಾಡಲಿ? ಇನ್ನು ಹ್ಯಾಂಗ ಮಾಡಲಿ ?" ಎಂದು ಅತ್ತೆ ಬೊಬ್ಬೆಯಿಟ್ಟಳು.

" ಅವಳೇನೋ ಅವನ ಕಿವಿಯಾಗ ಊದಿರಬೇಕು. ಅವಳ ಮಾತು ಕೇಳಿ ಹುಚ್ಚ ಮಂಗನಾಂಗ ಮಾಡಾಕ ಹತ್ತಿದಾನ ಇವ ?" ಎಂದಳು ನೀಲಕ್ಕ.

" ನನ್ನ ಮಗನ ಮನಸು ಕೆಡಿಸಿ ಮನೀ ಒಡೀಬೇಕಂತ ಮಾಡಿದ್ದಾಳ!" ಎಂದು ಅತ್ತೆ.

" ನಾನಿಲ್ಲಿ ಇರೂದೂ ಅವಳಿಗೆ ಸಹನ ಆಗಿಲ್ಲ. ನಿನ್ನೂ ನನ್ನೂ ಹೊರಗ ಹಾಕಿಸಬೇಕಂತ ಮಾಡಿರಬೇಕು," ಎಂದು ನೀಲಕ್ಕ.

ನೆಲಕ್ಕೆ ಕೈ ಅಪ್ಪಳಿಸಿ ಅಪ್ಪಳಿಸಿ ಅತ್ತು ಕೊಂಡಳು ಅತ್ತೆ.

ತನ್ನ ಮಕ್ಕಳನ್ನು ಕರೆದುಕೊಂಡು ಹೊರಗೆ ಹೋಗಿ ಕಟ್ಟೆಯ ಮೇಲೆ ಕುಳಿತುಕೊಂಡಳು ನೀಲಕ್ಕ.

'ಅವರು' ಗಾಬರಿಗೊಂಡು, ಊಟಕ್ಕೂ ನಿಂತುಕೊಳ್ಳದೆ ತಕ್ಷಣ ಹೊರಗಡೆ ಹೊರಟುಹೋದರು. ನಾನು ದಿಙ್ಮೂಢಳಾಗಿ ಕುಳಿತುಕೊಂಡೆ.

ಎರಡು ಮೂರು ದಿನಗಳವರೆಗೆ ಮನೆಯಲ್ಲಿ ಎಡೆಬಿಡದ ರೋದನ ನಡೆದಿತ್ತು. ಅತ್ತೆ ನನ್ನನ್ನು ಶಪಿಸುತ್ತಿದ್ದಳು. ನೀಲಕ್ಕ ಮುಸುಕು ಬಿಗಿದು ಮಲಗುತ್ತಿದ್ದಳು. 'ಇವರು' ಯಾರನ್ನು ಮಾತನಾಡಿಸುತ್ತಿರಲಿಲ್ಲ.

ಅತ್ತೆಯ ಬಯ್ಗುಳನ್ನು ಕೇಳಿ ಸಹಿಸಲಾರದೆ ಒಂದು ದಿನ ನಾನು ಬಹಳ ಧೈರ್ಯ ತಂದುಕೊಂಡು,

" ಹೀಗ್ಯಾಕೆ ಮಾಡುತೀರಿ ಅತ್ತೆವರೆ? ನಾನೇನು ತಪ್ಪು ಮಾಡೀನಿ?" ಎಂದೆ.

" ಅಯ್ಯೋ, ನೀನ್ಯಾಕ ತಪ್ಪು ಮಾಡೀಯೋ! ನಾನೇ ತಪ್ಪು ಮಾಡಿದಿನಿ. ನಿನ್ನಂಥಾ ತಿರುಕನ ಮಗಳನ್ನ ತಂದು ನಾನೇ ತಪ್ಪು ಮಾಡಿದಿನಿ. ನನ್ನ ಮಗನಿಗೇನು ಬ್ಯಾರೆ ಹೆಣ್ಣು ಸಿಗುತಿರಲಿಲ್ಲೇನು? ಮ್ಯಾಟ್ರಿಕ್ ಕಲಿತಾನೇ, ಮುನಿಸೀಪಾಲ್ಟಿಯೊಳಗ ನೋಕರಿ ಮಾಡುತಾನೆ. ವರದಕ್ಷಿಣಾ ಕೊಟ್ಟು ಹೆಣ್ಣು ಕೊಡುವವರು ಬೇಕಾದಷ್ಟು ಮುಂದಿಯಿದ್ದರು. ಈ ಹುಚ್ಚ ನನ್ನ ಮಗ ನಿನ್ನ ಬಣ್ಣಾ ನೋಡಿ ಮದುವೀಮಾಡಿಕೊಂಡ. ಬಾರೇ ರಾಣೀ, ನೀನೇನು ತಪ್ಪು ಮಾಡೀಯೋ? ಕೇಳೂದಕ್ಕ ನಾಚಿಕಿ ಇಲ್ಲೇನೇ ನಿನಗೆ?"

ಅತ್ತೆಯ ಈ ಆರ್ಭಟವನ್ನು ಕೇಳಿ ಸಹಿಸುವುದಾದರೂ ಹೇಗೆ? ನನಗೂ ರೇಗಿತು.

" ಹೌದು. ನಾನು ಬಡವರ ಮಗಳು. ತಿರುಕನ ಮಗಳು. ನಿಮ್ಮ ಐಶ್ವರ್ಯ ನಮಗೆಲ್ಲಿಂದ ಬಂದೀತು? ಇಲ್ಲಿ ನನಗೆ ಮತ್ತೊಂದು ಸೀರೆಯಿಲ್ಲ, ಕುಬುಸ ಇಲ್ಲ. ಹಾಸಲಿಲ್ಲ, ಹೊದೆಯಲಿಲ್ಲ. ಮತ್ತೆ ಮ್ಯಾಲ ದಿಮಾಕಿನ ಮಾತು!"

ನಾನು ಅಷ್ಟು ಮಾತಾಡುತ್ತಲೂ ಅತ್ತೆ ತನ್ನ ಕೈಯಲ್ಲಿದ್ದ ಹುಟ್ಟನ್ನೇ ಎತ್ತಿ ನನ್ನ ಕಡೆ ಬಿಸುಟಳು. ನನ್ನ ಮೊಳಕಾಲಿಗೆ ಏಟು ಬಿದ್ದುದರಿಂದ ನಾನು ಕೂಗಿಕೊಂಡೆ. ಮುಗ್ಗವನ್ನು ಬಿಟ್ಟು ಮಾವ ಎದ್ದು ಬಂದು ನನ್ನನ್ನು ಸಂತೈಸಿ ಕೊಠಡಿಗೆ ಕಳಿಸಿದರು. ನಾನು ಅಳುತ್ತಾ ಬಿದ್ದುಕೊಂಡೆ. ಅಡುಗೆಯ ಮನೆಯಲ್ಲಿ ಅತ್ತೆಯ ಕೂಗಾಟ ನಡೆದೇ ಇತ್ತು.

ರಾತ್ರಿ 'ಅವರು' ಬರುತ್ತಲೂ ಮಧ್ಯಾಹ್ನ ನಡೆದ ಘಟನೆಯ ಬಗೆಗೆ ಉಪ್ಪುಕಾರ ಹಚ್ಚಿ ವರದಿಯೊಪ್ಪಿಸಿದಳು ಅತ್ತೆ. ಅವರಿಗೂ ಊಟ ರುಚಿಸಲಿಲ್ಲ.

ಅಂದು ಅವರು ಮಲಗುವ ಕೋಣೆಗೂ ಬರಲಿಲ್ಲ. ಪಡಸಾಲೆಯಲ್ಲೇ ಕಂಬಳಿ ಬಿಡಿಸಿ ಮಲಗಿ ಕೊಂಡರು.

ನಾನು ಮಧ್ಯಾಹ್ನವೂ ಊಟ ಮಾಡಿರಲಿಲ್ಲ. ರಾತ್ರಿಯಂತೂ ನನ್ನನ್ನು ಯಾರೂ ಊಟಕ್ಕೆಬ್ಬಿಸಲಿಲ್ಲ–ಕೈ ಹಿಡಿದ ಗಂಡನೂ ನನ್ನ ಕಡೆ ಹೊರಳಿ ನೋಡಲಿಲ್ಲ. ನನಗೆ ಮತ್ತೆ ದುಃಖವುಕ್ಕಿ ಬಂದಿತು. ಏನಾಯಿತು ನನ್ನ ಬಾಳು! ಮಲಕಾಜಿಯೊಡನೆಯೇ ಮದುವೆಯಾಗಿದ್ದಲ್ಲಿ ನಾನು ಸುಖದಿಂದಿರ ಬಹುದಾಗಿತ್ತು. ಮಲಕಾಜಿ....ಅಯ್ಯೋ ಮಲಕಾಜಿ....

ಅವನಿಗಾಗಿ ನಾನು ಹಲುಬಿ ಬಹಳ ದಿನಗಳಾಗಿದ್ದುವು. ಆ ರಾತ್ರಿ–ಯಿಡೀ ಅವನನ್ನು ನೆನೆದು ನೆನೆದು ಕಂಬನಿ ಸುರಿಸಿದೆ. ಅದೆಲ್ಲ ವ್ಯರ್ಥ ವೆನ್ನುವುದೇನೋ ನನಗೆ ಗೊತ್ತಿತ್ತು. ಆದರೂ ಅಳು ನಿಲ್ಲಲಿಲ್ಲ.

ಬೆಳಗಾಗುತ್ತಲೂ ಮಾವನವರು 'ಇವರನ್ನು' ಕರೆದು ಹೇಳಿದರು :

"ಹೆಂಗಸರ ಜಗಳಾ ನೋಡಿ ನೋಡಿ ನನಗೂ ರೋಸಿ ಹೋಗಿ ಬಿಟ್ಟದಪ್ಪಾ ತಮ್ಮಾ. ನಾನೇ ಎಲ್ಲಿಗಾದರೂ ಹೊಂಟುಹೋಗಿ ಬಿಡಬೇಕಂತ ಮಾಡೀನಿ."

"ನೀನ್ಯಾಕ ಹೋಗಬೇಕು ಅಪ್ಪಾ? ಇದರಾಗ ನಿನ್ನದೇನು ತಪ್ಪು?"

"ಮನೀಗೇ ಹಿರಿಯಾ ಆಗಿ ಇವರ ಜಗಳಾ ನಿಲ್ಲಿಸೂದಕ್ಕ ಆಗಲಿಲ್ಲಲ್ಲ ನನ್ನಿಂದ? ನನ್ನಂಥಾ ಹಿರಿಯಾ ಇದ್ದರೆಷ್ಟು, ಬಿಟ್ಟರೆಷ್ಟು! ದಿನ ಬೆಳಗಾದರ ರಂಭಾಟ ಸುರು ಆಗುತ್ತೈತಿ. ಗಂಟಲಾಗ ಅನ್ನ ಇಳಿಯೂದಿಲ್ಲ. ನಿನ್ನ ಹೆಂಡತಿಗೂ ಇವರಿಗೂ ಕೂಡಿ ನಡಿಯೂದಿಲ್ಲ. ನೀನೇ ಬ್ಯಾರೆ ಮನೀ ಮಾಡುತೀಯೇನು?"

'ಇವರು' ತಕ್ಷಣ ಉತ್ತರವೀಯದೆ, ಒಂದು ಗಳಿಗೆ ಸುಮ್ಮನಿದ್ದು, ಅನಂತರ ಹೇಳಿದರು :

"ಯಾವ ಮೋರೆಯಿಂದ ನಾ ಬ್ಯಾರೆ ಮನೀ ಮಾಡಲಿ ಅಪ್ಪಾ? ನಿಮ್ಮನ್ನೆಲ್ಲಾ ಬಿಟ್ಟು ಹ್ಯಾಗೆ ಹೋಗಲಿ? ಈ ಹೆಂಗಸರಲ್ಲಿ ಯಾರಾದರೂ ಸ್ವಲ್ಪ

ತಾಳಿಕೊಂಡರೆ ಎಲ್ಲಾ ನೆಟ್ಟಗಾಗುತದೆ. ಒಬ್ಬರಿಗೂ ತಾಳ್ಮೆ ಇಲ್ಲ. ಇವಳಾದರೂ ಯಾಕೆ ಸಹಿಸಿಕೊಂಡಿರಬಾರದು ?"

"ಇವಳದೇನೂ ತಪ್ಪಿರದಿದ್ದರೂ ಇವರಿಬ್ಬರೂ ಇವಳನ್ನ ಹರಕೊಂಡು ತಿನ್ನುತಾರ. ಇವಳಾದರೂ ಎಷ್ಟಂತ ಸಹಿಸಿಕೊಂಡಾಳು ? ಇನ್ನುವ್ಯಾಲ ಇವರಿಗೆ ಕೂಡಿ ನಡಿಯೂದೇ ಶಕ್ಯ ಇಲ್ಲ. ಸಂಬಂಧ ಪೂರಾ ಕೆಟ್ಟು ಹೋಗಿ ಬಿಟ್ಟದೆ. ಗಿರಿಜವ್ವಗ ಅಡಿಗೀ ಮಾಡೂದಕ್ಕೂ ಬರುತದೆ. ಸಂಸಾರ ಸಾಗಿಸೂದು ಗೊತ್ತದೆ. ನಿನಗೂ ನಿನ್ನ ನೌಕರಿ ಅದೆ. ಸಂಬಳ ಬರುತದೆ. ನಿಮ್ಮಿಬ್ಬರ ಸಂಸಾರ ನಡಿಯೂದೇನು ತ್ರಾಸ ಅಲ್ಲ. ಹಾಂಗೇನಾದರೂ ನಿನಗೆ ಅಡಚಣಿ ಬಂದರ ನಾಸಿದೀನಿ – ಅಂಜಬ್ಯಾಡ. ನಾಳೇನೇ ಬ್ಯಾರೆ ಮನೆ ನೋಡಿಬಿಡು."

"ಅದು ಮಾತ್ರ ನನ್ನಿಂದಾಗದಪ್ಪ. ಮದುವೆಯಾಗಿ ಇನ್ನೂ ನಾಕ್ಕೈದು ತಿಂಗಳೂ ಆಗಿಲ್ಲ. ಹೆಂಡತೀ ಮಾತು ಕೇಳಿ ತಂದೆತಾಯಿಗಳನ್ನ ಬಿಟ್ಟು ಬ್ಯಾರೆ ಸಂಸಾರ ಮಾಡಿದ ಅಂತ ಮಂದಿ ಅನ್ನಲಿಕ್ಕಿಲ್ಲೇನು ?"

"ಮಂದಿಗೇನು ತಮ್ಮಾ, ಬೇಕಾದ್ದು ಬೊಗಳಿಕೊಳ್ಳುತಾರ. ನಮ್ಮ ಸುಖ – ದುಃಖಾನ್ನ ನಾವೇ ನೋಡಿಕೋಬೇಕು. ನೀನಿನ್ನೂ ಹುಡುಗ. ಅನುಭವ ಇಲ್ಲ. ಬ್ಯಾರೆ ಮನೆ ಮಾಡಿದರೇನಾತು, ನಮ್ಮ ನಿಮ್ಮ ಸಂಬಂಧನೇ ಕಡಿದುಹೋಗುತದೇನು ? ನೀನೂ ಬಂದು ಹೋಗುತಾ ಇರಬೇಕು. ಗಿರಿಜವ್ವನೂ ಬರಲಿ ಸಿಟ್ಟು ಇಳಿದವ್ಯಾಲ ಇವರೂ ತಣ್ಣಗಾಗುತಾರು."

ಇವರು ಹೆಚ್ಚು ಮಾತಾಡಲಿಲ್ಲ. ಮಾರನೆಯ ದಿನವೆ ಬೇರೊಂದು ಮನೆ ನೋಡಿಕೊಂಡು ಬಂದರು. ನಾನೂ ಮಾವನವರೂ ಕೂಡಿ ಹೋಗಿ ಅದನ್ನು ನೋಡಿ ಬಂದೆವು. ಸಣ್ಣದೇ ಆಗಿದ್ದರೂ ನಮ್ಮಿಬ್ಬರಿಗೆ ಸಾಕಾಗುವಷ್ಟಿತ್ತು. ಒಂದು ದಿನವೆಲ್ಲ ಕಷ್ಟಪಟ್ಟು ಅದನ್ನು ಸಾರಿಸಿ ಗುಡಿಸಿ ಸ್ವಚ್ಛಗೊಳಿಸಿದು ದಾಯಿತು. ಈ ಊರಿಗೆ ಬಂದಂದಿನಿಂದ ಒಂದು ದಿನವೂ ಬಂದಿರದಷ್ಟು ಉತ್ಸಾಹ ಬಂದಿತ್ತು ನನಗೆ. ಇನ್ನು ನನಗೂ ಒಂದು ಮನೆಯಾಗುವುದು, ನಾನೂ ಒಬ್ಬಳು ಸಂಸಾರಿಯಾಗುವೆ, ದಿನಗಳೆದ ಹಾಗೆ ನನಗೆ ಸುಖವೂ ದೊರಕಬಹುದು ಎಂದೆಲ್ಲ ಎಣಿಕೆ ಹಾಕುತ್ತಿದ್ದೆ.

ನಾವು ಮನೆ ಬಿಟ್ಟು ಹೊರಟು ನಿಂತಾಗ ನಮಗೆ ಒಂದೆರಡು ಪಾತ್ರೆಗಳನ್ನು ಕೊಡಬೇಕಾದರೆ ಅತ್ತೆ ಆಕಾಶಪಾತಾಳ ಒಂದು ಮಾಡಿದಳು. ಅವಳೊಡನೆ ವ್ಯಾಜ್ಯಕ್ಕೆ ನಿಲ್ಲದೆ, ಅವಳಾಗಿಯೆ ಕೊಟ್ಟವುಗಳನ್ನಷ್ಟು ತೆಗೆದುಕೊಂಡು ಹೊರಟು ಬಿಟ್ಟೆವು. ಹಾಸಲು ಅದೊಂದು ಗುಡಾರ, ಅದೊಂದು ಜಮಖಾನ; ಹೊದೆಯಲು ಅದೊಂದು ಚದ್ದರು, ಅಷ್ಟೆ. ನಾನು ಉಟ್ಟ ಸೀರೆಯ ಮೇಲೆ ಹೊರಟು ಬಿಟ್ಟೆ, ಇನ್ನೊಂದು ಸೀರೆಯನ್ನು ಅವರು ಕೊಡಲಿಲ್ಲ. 'ಇವರು' ಮಾತ್ರ ತಮ್ಮ ಬಟ್ಟೆಗಳನ್ನು ತೆಗೆದುಕೊಂಡು ಬಂದಿದ್ದರು.

ಅದೇ ದಿನ ಪೇಟೇಗೆ ಹೋಗಿ ಮನೇಗೆ ಅವಶ್ಯವಿದ್ದ ಮಣ್ಣಿನ ಪಾತ್ರೆಗಳನ್ನು ತೆಗೆದುಕೊಂಡು ಬಂದೆವು. ಎಲ್ಲವನ್ನೂ ಜೋಡಿಸಿಕೊಂಡು ಅಡುಗೆ ಮುಗಿಸಿ ಊಟಕ್ಕೆ ಕೂಡ ಬೇಕಾದರೆ ಹನ್ನೆರಡು ಗಂಟೆಯಾಗಿ ಹೋಯಿತು. ಇವರು ಆ ದಿನ ನನ್ನೊಡನೆ ಸರಿಯಾಗಿ ಮಾತನ್ನೂ ಆಡಲಿಲ್ಲ. ಸರಿಯಾಗಿ ಊಟವನ್ನು ಮಾಡಲಿಲ್ಲ. ಏಕೋ ಏನೋ ತಿಳಿಯದು, ನನಗೂ ಅನ್ನ ರುಚಿಸಲಿಲ್ಲ. ಅವರು ಊಟ ಮಾಡಲಿಲ್ಲವೆಂದು ನನಗೂ ಮಾಡಲಾಗಲಿಲ್ಲವೋ? ಅಂಥ ಸಹಾನುಭೂತಿಯೇನೂ ಇರಲಾರದು. ಹೊಸ ವಾತಾವರಣದಿಂದಾಗಿ ಹಾಗಾಗಿರಬಹುದು. ಅವರಿಗಂತೂ, ಹೆತ್ತ ತಂದೆತಾಯಿಗಳನ್ನು ಬಿಟ್ಟು ಬಂದುದರಿಂದ ಬಲು ವ್ಯಸನವುಂಟಾದುದು ಸ್ಪಷ್ಟವಾಗಿತ್ತು. ತವರುಮನೆ ಬಿಟ್ಟು ಬಂದಾಗ ನಾನು ಅತ್ತುಕೊಂಡಿರಲಿಲ್ಲವೆ?

ಆ ರಾತ್ರೆಯೂ ನನಗೆ ನಿದ್ದೆ ಬರಲಿಲ್ಲ. ಅವರು ಅತ್ತಿಂದಿತ್ತ ಇತ್ತಿಂದತ್ತ ಹೊರಳಾಡುತ್ತಿದ್ದರು. ಮೊದಲಿನ ಮನೆಯಲ್ಲಿ ಅವರೊಡನೆ ಕಳೆದ ಪ್ರಥಮ ರಾತ್ರಿಯ ನೆನಪು ಬರುತ್ತಿತ್ತು ನನಗೆ. ನಿಜವಾಗಿ ಇಂದಿನದೇ ನಮ್ಮ ಸಮಾಗಮದ ಪ್ರಥಮ ರಾತ್ರಿಯೆಂದು ನನಗೆನ್ನಿಸುತ್ತಿತ್ತು. ಮನೆ ಬದಲಿಸುತ್ತಲೂ ನನ್ನ ಮನಸ್ಸು ಬದಲಾಯಿಸಿದ್ದಿತೋ ಏನೊ. ಅಷ್ಟು ದಿನಗಳವರೆಗೆ ಅವರಿಂದ ಹೆಚ್ಚಿನದೇನನ್ನೂ ನಿರೀಕ್ಷಿಸದಿದ್ದ ನಾನು ಆ ರಾತ್ರೆ ಮಾತ್ರ ವಿಲಕ್ಷಣವಾದ ರೀತಿಯಿಂದ ಅವರೆಡೆಗೆ ಆಕರ್ಷಿತಳಾಗಿದ್ದೆ. ನನ್ನ ಮನಃಸ್ಥಿತಿಯನ್ನು ಅರಿತು

ಕೊಂಡು ಅವರೂ ನನ್ನೊಡನೆ ಸರಸವಾಡಿದ್ದಲ್ಲಿ ಆ ರಾತ್ರಿಯೇ ನಾನು ನಿಜವಾಗಿ ಪೂರ್ತಿಯಾಗಿ ಅವರವಳಾಗಬಹುದಾಗಿದ್ದಿತೋ ಏನೊ.

ಆದರೆ, ಹೆಣ್ಣಿನ ಹೃದಯವನ್ನರಿತುಕೊಳ್ಳುವ ಬುದ್ಧಿ ಗಂಡಸರಿಗಿರುವುದು ಬಹಳ ಅಪರೂಪ. ನಮ್ಮವರಿಗಂತೂ ಮುಖ್ಯವಾಗಿ ಬುದ್ಧಿಯೇ ಅಲ್ಪವಲ್ಲವೆ? ಇನ್ನು ಇಂಥ ನಾಜೂಕು ವಿಷಯಗಳೆಲ್ಲ ಅವರಿಗೆ ತಿಳಿಯುವುದಾದರೂ ಹೇಗೆ?

ನನ್ನತ್ತ ಬೆನ್ನು ತಿರುಗಿಸಿ ಅವರು ಮಲಗಿಕೊಂಡರು. ಅವರತ್ತ ಬೆನ್ನು ತಿರುಗಿಸಿ ನಾನೂ ಮಲಗಿಕೊಂಡೆ. ನನಗೆ ನಿರಾಸೆಯಾಗಿತ್ತು, ವ್ಯಸನವಾಗಿತ್ತು, ಅವರ ಬಗೆಗೆ ಕೋಪ ತುಂಬಿ ಬಂದಿತ್ತು.

"ಇವರು ನನಗೆ ತಕ್ಕವರಲ್ಲ. ತಕ್ಕವರಲ್ಲ. ಇವರಿಂದ ನನಗೆ ಸುಖ ಸಿಕ್ಕುವದು ಶಕ್ಯವಿಲ್ಲ," ಎಂದು ಆಗಲೆ ಪಲ್ಲವಿಗಾರಂಭಿಸಿತ್ತು ಮನಸ್ಸು.

## ೧೩

" ಬೆಳಗಾಯಿತು, ಬೆಳಗಾಯಿತು," ಎಂದು ಸಾರಿದುವು, ಮನೆಯೊಳಗಿಳಿದು ಬಂದ ಸೂರ್ಯಕಿರಣಗಳು.' ಬೆಳಗಿನ ಜಾವದಲ್ಲಿ ನಿದ್ದೆ ಹೋಗಿದ್ದ ನಾನು ಸ್ವಲ್ಪ ತಡವಾಗಿಯೇ ಎಚ್ಚತ್ತುಕೊಂಡೆ. ಮೊದಲಿನ ಮನೆಯಲ್ಲಾದರೆ ಅತ್ತೆಯ ಮತ್ತು ನೀಲಕ್ಕನ ಹೆದರಿಕೆಗೊಳಗಾಗಿ ಇನ್ನೂ ಕತ್ತಲೆಯಿದ್ದಾಗಲೇ ಎದ್ದುಬಿಡಬೇಕಾಗುತ್ತಿತ್ತು. ಇದು ನನ್ನ ಮನೆ! ಸ್ವತಂತ್ರ ಮನೆ! ನನ್ನ ತಲೆಯ ಮೇಲೆ ಮೆಣಸು ಅರೆಯುವವರಾರೂ ಇಲ್ಲಿ ಇಲ್ಲ. ನನಗೆ ಅಷ್ಟೇ ಸಂತೋಷ. ಆ ಸಂತೋಷದಲ್ಲಿಯೆ ಎದ್ದು, ಮನೆಯ ಕಸ ಗುಡಿಸಿ, ಕೊಡ ತೆಗೆದುಕೊಂಡು ನೀರಿಗೆ ಹೊರಟೆ.

ಈ ಹಾಳು ನಗರದಲ್ಲಿ ನೀರಿಗಾಗಿ ಹೆಂಗಸರು ಪಡುವ ಪರಿಶ್ರಮ ಅಷ್ಟಿಷ್ಟಲ್ಲ. ಈ ನಗರ ಸಭೆಯು ಸದಸ್ಯರಿಗೆ ತಮ್ಮತಮ್ಮಲ್ಲೇ ಹೊಡೆದಾಡುವುದೊಂದನ್ನುಳಿದು ಇನ್ನಾವುದರ ಕಡೆಗೂ ಗಮನವಿರುವುದಿಲ್ಲ. ನಗರದ ಹೊರಗೆ ದೊಡ್ಡದಾದ ಕೆರೆಯೇನೋ ಇದೆ. ಅದರಲ್ಲಿ ನೀರೂ ಸಾಕಷ್ಟಿದೆ. ಹಗಲಿನ ಹನ್ನೆರಡು ತಾಸೂ ನಗರಕ್ಕೆ ನೀರು ಬಿಟ್ಟರೂ ನಡೆಯುತ್ತದೆ. ನಗರಸಭೆಗೆ ಮಾತ್ರ ಏನು ರೋಗವೋ. " ನೀರು ನೀರು " ಎಂಬ ಬೊಬ್ಬಾಟ ಎಂದೂ ತಪ್ಪಿದಲ್ಲ. ನಲ್ಲಿಯ ನೀರಿಗಾಗಿ ತೆರಿಗೆಯನ್ನೇನೋ ಕಡ್ಡಾಯವಾಗಿ ವಸೂಲು ಮಾಡುತ್ತಾರೆ. ಅಷ್ಟೇ ಕಡ್ಡಾಯವಾಗಿ ನೀರು ಒದಗಿಸುವ ಕರ್ತವ್ಯಬುದ್ಧಿ ಮಾತ್ರ ಇವರಿಗಿಲ್ಲ.

ಇಲ್ಲಿನ ನಲ್ಲಿಗಳ ಮಾತೂ ಸ್ವಲ್ಪ ವಿಚಿತ್ರವೇ: ಗಟಾರದ ನೀರಿಗೂ

ಕುಡಿಯುವ ನೀರಿಗೂ ಏನೂ ವ್ಯತ್ಯಾಸವಿಲ್ಲವೆಂದೇ ಇವರು ತಿಳಿದುಕೊಂಡಿರುವರೇನೊ, ಗಟಾರಕ್ಕೆ ಹೊಂದಿಕೊಂಡೇ ನಲ್ಲಿಯ ವ್ಯವಸ್ಥೆಯೂ ಆಗಿದೆ. ಗಟಾರದಲ್ಲಿಯೆ ದೊಡ್ಡ ತಗ್ಗು ತೋಡಿ ಅಲ್ಲಿ ಕೊಳಾಯಿ ಇಟ್ಟಿದ್ದಾರೆ. ಅಲ್ಲಿಯೆ ಕೊಡ ಇಟ್ಟು ನೀರು ತುಂಬಬೇಕು ನಾವು. ಈ ನಗರಕ್ಕೆ ಬಂದ ಹೊಸದರಲ್ಲಿ ಈ ಹೊಲಸು ವ್ಯವಸ್ಥೆಯನ್ನು ಕಂಡು ನನಗೆ ಇಶ್ಶೀ ಅನ್ನಿಸಿತ್ತು. ಮೈಲಿಗೆಯಾದ ಆ ನೀರನ್ನು ಕುಡಿಯುವುದಕ್ಕೆ ಉಪಯೋಗಿಸುವುದಾದರೂ ಹೇಗೆ ತಾಯಿ? ಹಳ್ಳಿಯಲ್ಲಿ ಇಂಥ ಹೊಲಸು ಕಾಣಲಾರದು. ಗಟಾರಕ್ಕೆ ಹೊಂದಿಕೊಂಡು ಬಾವಿ ತೋಡುವ ಮೂರ್ಖತನವನ್ನಾರೂ ಮಾಡಲಾರರು ಹಳ್ಳಿಯಲ್ಲಿ. ಹಳ್ಳಿಗೂ ಹಿಂದುಳಿದ ಈ ಊರಿಗೆ ನಗರವೆಂದು ಕರೆಯುವುದೂ ಮೂರ್ಖತನವೇ?

ಇರಲಿ ಆ ವಿಚಾರವೆಲ್ಲ. ಕೇಳು ನನ್ನ ಕಥೆಯನ್ನು.

ಆ ಓಣಿಗೆ ನಾನು ಹೊಸಬಳಲ್ಲವೆ? ನಲ್ಲಿಯ ಬಳಿ ನೆರೆದಿದ್ದ ಹೆಂಗಳೆಯರಿಗೆ ಸಹಜವಾಗಿಯೇ ನನ್ನ ಬಗೆಗೆ ಕುತೂಹಲ. ನಾನು ಕೊಡವನ್ನೆತ್ತಿಕೊಂಡು ಹೋಗುತ್ತಲೂ ಅನೇಕರು ನನ್ನನ್ನು ಮಾತನಾಡಿಸಿ, ನನ್ನ ಬಗೆಗೆ ವಿವರಗಳನ್ನು ಕೇಳಿಕೊಂಡರು. 'ಇವರು' ನಗರಸಭೆಯಲ್ಲಿ ನೌಕರಿ ಮಾಡುವರೆಂದು ಗೊತ್ತಾಗುತ್ತಲೂ ಒಬ್ಬ ಮುದುಕಿಯೆಂದಳು.

"ಚಲೋ ಆತೇಳವ್ವಾ ನೀ ಈ ಓಣಿಗೆ ಬಂದದ್ದು. ನಿನ್ನ ಗಂಡಗ ಹೇಳಿ ಈ ನಳಕ್ಕಾದರೂ ಸಾಕಾದಷ್ಟು ನೀರು ಬರುವಂಗ ಮಾಡು."

"ಮುನಿಸೀಪಾಲ್ಟಿಯೊಳಗ ಏನು ನೌಕರಿ ಮಾಡುತಾರ ನಿಮ್ಮವರು?" ಎಂದು ಕೇಳಿದಳು ಇನ್ನೊಬ್ಬಾಕೆ.

"ಸುಂಕದ ಕಟ್ಟೆಯ ಕಾರಕೂನೀ."

"ಹಿಂಗೇನು? ಹಂಗಾದರ ನಳದ ನೀರಿಗೂ ಅವರಿಗೂ ಎಲ್ಲೀ ಸಂಬಂಧ ಬಿಡು," ಎಂದಳು ಒಬ್ಬಾಕೆ, ಕಲಿತವಳು.

"ಅದೇನೇ ಹಂಗಂದರೆ? ಮುನಿಸೀಪಾಲ್ಟಿ ನೌಕರರಾದರೆ ಮುಗೀತು. ಅವರೇನು ಬೇಕಾದ್ದು ಮಾಡಿಯಾರು?" ಎಂದಳು ಮುದುಕಿ.

ನಾನು ಹೊಸಬಳೆಂದೋ, ಅಥವಾ ನನ್ನ ಮರ್ಜಿ ಕಾಯಬೇಕೆಂದೋ

ಅವರು ಎಲ್ಲರಿಗೂ ಮೊದಲು ನನಗೇ ನೀರು ತುಂಬಲು ಬಿಟ್ಟರು. ಕೊಡ ಹೊತ್ತು ಕೊಂಡು ಮನೆಗೆ ಬಂದೆ. ಮನೆಯಲ್ಲಿದ್ದುದು ಅದೊಂದೇ ಕೊಡ. ನೀರು ತುಂಬುವ ಪಾತ್ರೆಯಿದ್ದುದೂ ಒಂದೇ. ಅದಕ್ಕೆ ನೀರು ತುಂಬಿ ಒಲೆಯ ಮೇಲಿಟ್ಟು ನೀರು ಕಾಸಿ ಅವರನ್ನೆಬ್ಬಿಸಿ ಸ್ನಾನ ಮಾಡಲು ಹೇಳಿದೆ. ಅವರು ಸ್ನಾನ ತೀರಿಸು ವುದರೊಳಗಾಗಿ ಇನ್ನೊಂದು ಕೊಡ ನೀರು ತಂದೆ, ನಾನೂ ಸ್ನಾನ ಮುಗಿಸಿದೆ. ನನಗೆ ಇನ್ನೊಂದು ಸೀರೆಯೂ ಇರದಿದ್ದ ವಿಚಾರ ಆಗ ಜ್ಞಾಪಕಕ್ಕೆ ಬಂತು. ಬೆಲೆ ಬಾಳುವ ರೇಶಿಮೆ ಸೀರೆಯನ್ನು ಆಗ ನಾನು ಉಟ್ಟುಕೊಳ್ಳುವಂತಿರಲಿಲ್ಲ. ಅವರು ತಮ್ಮದೊಂದು ಧೋತರ ತಂದು ಕೊಟ್ಟರು. ಅದನ್ನುಟ್ಟುಕೊಂಡು ಸೀರೆಯನ್ನು ಹಿಂಡಿ ಒಣಗಲು ಹಾಕಿದೆ. ಅವರು ಹೋಗಿ ಎರಡು ಕೊಡ ನೀರು ತಂದರು. ನಾನು ಅಡುಗೆಗೆ ಅಣಿಯಾಗುತ್ತಿದ್ದೆ.

ಮನೆಗೆ ಅವಶ್ಯವಿದ್ದ ಸಾಮಾನುಗಳ ಯಾದಿಯನ್ನು ಸಿದ್ಧಗೊಳಿಸಿ ಪೇಟಿಗೆ ಹೊರಡುತ್ತಿದ್ದ ಹಾಗೆ ಅವರೆಂದರು :

" ಈ ಬಿಳಿಯರಿವೆ ನಿನಗ ಬಹಾಳ ಚಂದ ಕಾಣುತದೆ ನೋಡು ಗಿರಿಜಾ. ಸೀರೆ ತರುವದಾದರೆ ಬಿಳೀದನ್ನೇ ತರೋಣ. ಆಂ, ಏನು ?"

" ಹಾಗೇ ಮಾಡಿರಿ," ಎಂದು ಹೇಳುತ್ತಾ ನಾನು ಮುಗುಳ್ನಕ್ಕೆ. ಆಗ ಏನೋ ಒಂದು ತರದ ಸಮಾಧಾನ ನನ್ನ ಎದೆಯಲ್ಲೆಲ್ಲ ತುಂಬಿಕೊಂಡಿತು. ಸ್ವಾತಂತ್ರ್ಯದ ಸುಖವೆಂದರೆ ಅದೇ ಎಂದು ತೋರುತ್ತದೆ. ಇನ್ನು ಈ ಮನೆಗೆ ನಾನೇ ಯಜಮಾನಿ. ನನ್ನ ಮನಸ್ಸಿಗೆ ಹೊಳೆದ ಹಾಗೆ ನಾನಿಲ್ಲಿ ವರ್ತಿಸಬಹುದು. ಬಿಳಿಯ ಸೀರೆ ನನಗೆ ಚೆಂದ ಕಾಣುವುದೆಂದು ಅವರು ಹೇಳಿದರು. ನಿಜ. ನನಗೂ ಗೊತ್ತು. ಬಿಳಿಯ ಸೀರೆಯಲ್ಲಿ ಎದ್ದು ಕಾಣುತ್ತದೆ ನನ್ನ ಸೌಂದರ್ಯ. ಮಲಕಾಜಿಯ ತಂಗಿ ಸುಂದರೂ ಬಿಳಿಯ ರೇಶಿಮೆ ಸೀರೆಯುಟ್ಟಾಗ ರಾಜ ಕುಮಾರಿಯ ಹಾಗೆ ಕಾಣುತ್ತಿರಲಿಲ್ಲವೆ ? ಅವಳಿಗಿಂತ ನಾನೇನು ಕಡಿಮೆ ಚೆಲುವಿಕೆಯಲ್ಲಿ ? ಅವರು ನನಗೂ ಒಂದು ಬಿಳಿಯ ಸೀರೆ ತಂದುಕೊಡಬಹುದು. ತರದಿದ್ದರೆ ನಾನೆಲ್ಲಿ ಬಿಡುತ್ತೇನೆ ? ಮುಂದಿನ ತಿಂಗಳ ಸಂಬಳ ಬರುತ್ತಲೂ

ನಾನೇ ಪೇಟೆಗೆ ಹೋಗಿ ನನ್ನ ಮನಸಿಗೆ ಸರಿಕಂಡ ಬಿಳಿಯ ಪತ್ತಲ ಕೊಂಡು ತರುತ್ತೇನೆ.

ಹಾಗೆ ವಿಚಾರಮಾಡುತ್ತಾ ಅಡುಗೆ ಮಾಡಿದೆ. ಅಡುಗೆಯೆಂದರೇನು ಅಂಥ ಭಾರಿ ಭಾರಿ ಸಾಮಾನು ಅಲ್ಲ. ಅನ್ನ ಮತ್ತು ಪಲ್ಯ ಅಷ್ಟೆ. ರೊಟ್ಟಿ ಮಾಡಲು ಅಂದು ಹಿಟ್ಟು ಇರಲಿಲ್ಲ. ಜೋಳ ಕೊಂಡು ತಂದ ಬಳಿಕ ರೊಟ್ಟಿ ಯಾಗಬೇಕು....

ಆ ದಿನದ ಮಟ್ಟಿಗೆ ರಜ ತೆಗೆದುಕೊಂಡು ಅವರು ಮನೆಗೆ ಬೇಕಾದ ಕಾಳು ಕಡ್ಡಿ ತಂದು ಹಾಕಿದರು. ಅವುಗಳನ್ನು ತುಂಬಿ ಇಡುವುದಕ್ಕೆ ಒಂದು ಡಬ್ಬಿ ಯಿರಲಿಲ್ಲ, ಬುಟ್ಟಿಯಿರಲಿಲ್ಲ. ಕಾಳು ಹಸನುಗೊಳಿಸಲು ಮೊರ ಕೂಡ ಇರಲಿಲ್ಲ. ಸಾಯಂಕಾಲ ನಾನೂ ಅವರ ಜೊತೆಗೆ ಪೇಟೆಗೆ ಹೋಗಿ ಬುಟ್ಟಿ, ಮೊರ, ಚಮಚ, ಮಣ್ಣಿನ ಪಾತ್ರೆಗಳು, ಮಡಕೆಗಳು ಮೊದಲಾದುವುಗಳನ್ನು ಖರೀದಿ ಮಾಡಿದೆ.

"ಇನ್ನೆಷ್ಟು ರೂಪಾಯಿ ಉಳಿದುವು ?"

"ಯಾಕೇ ?" ಎಂದರವರು.

"ಅದಿರಲಿ. ಮೊದಲು ಹೇಳ್ರಿ. ಎಷ್ಟಿದಾವು ನಿಮ್ಮ ಹತ್ತಿರ."

"ಆರು ರೂಪಾಯಿ ಇದಾವೆ."

"ಉಡುವದಕ್ಕೆ ಮತ್ತೊಂದು ಸೀರೆ ಬೇಕಲ್ಲ. ಈಗಲೇ ತಗೊಂಡು ಬಿಡೋಣು ಬರ್ರಿ."

ಅವರು ಬೇಡವೆನ್ನಲಿಲ್ಲ. ಬಟ್ಟೆಯಂಗಡಿಗೆ ಹೋಗಿ ಬಿಳಿಯ ಪತ್ತಲ ವೊಂದನ್ನು ಆರಿಸಿದುದಾಯಿತು. ಅದಕ್ಕೆ ಸರಿಹೋಗುವ ರವಕೆಯಬಟ್ಟೆಯನ್ನು ಕೊಂಡುಕೊಂಡು, ಎಲ್ಲ ಸಾಮಾನುಗಳ ಸಮೇತ ಮನೆಗೆ ಬಂದೆವು.

ಜೋಳದಲ್ಲಿನ ಕಲ್ಲು ಮಣ್ಣು ತೆಗೆದೊಗೆದು, ಪಕ್ಕದ ಮನೆಗೆ ಹೋಗಿ ಬೀಸಿಕೊಂಡು ಬರಲೆಂದು ನಾನು ಹೊರಟಿದ್ದ ಹಾಗೆ ಅವರು ನನ್ನನ್ನು ತಡೆದು,

"ಕತ್ತಲಾಗುತಾ ಬಂತು. ಇನ್ನೇನು ಬೀಸುತ್ತೀ, ಬಿಡು," ಎಂದರು.

"ಮುಂಜಾನೆಯೂ ರೊಟ್ಟಿಯಿಲ್ಲ. ಈಗಲೂ ಬ್ಯಾಡಾ ?"

“ತಾ ಇಲ್ಲಿ. ಗಿರಣಿಗೊಯ್ದು ಬೀಸಿಕೊಂಡು ಬರುತೀನಿ,” ಎಂದು ಹೇಳಿ ಅವರು ಜೋಳವನ್ನೊಯ್ದು ಹಿಟ್ಟು ಮಾಡಿಸಿಕೊಂಡು ಬಂದರು.

ಆ ರಾತ್ರಿಯಲ್ಲೂ ಅವರು ಮೌನವಾಗಿಯೇ ಇದ್ದರು. ಕೈಯಲ್ಲಿದ್ದ ಹಣವೆಲ್ಲ ತೀರಿಹೋಯಿತು. ಇನ್ನು ಸಂಬಳ ಬರಬೇಕಾದರೆ ಹದಿನೈದು ದಿನ ತಳ್ಳಬೇಕು. ಅಲ್ಲಿಯವರೆಗೆ ಹೇಗೆ ಮಾಡುವುದು? ಎಂದೆಲ್ಲ ಯೋಚಿಸುತ್ತಿದ್ದರೇನೋ. ತಂದೆತಾಯಿಗಳು, ಸೀಲಕ್ಕ, ಅವಳ ಮಕ್ಕಳ ನೆನಪು ಬಂದಿದ್ದಿತೇನೋ.

“ಯಾಕ್ರೀ, ನಿದ್ದೆ ಬರಲಿಲ್ಲೇನು?”

“ಏನು ನಿದ್ದೆ ಗಿರಿಜಾ, ನನಗೆ ಬಹಳ ದುಃಖ. ಎಲ್ಲರನ್ನೂ ಬಿಟ್ಟು ಬರಬೇಕಾಯ್ತಲ್ಲಾ ಅಂತಾ.”

“ನನಗಾದರೂ ಏನು ಸಮಾಧಾನ? ಆ ಮನೆ ಬಿಟ್ಟು ಬರಲು ನನಗೂ ಮನಸ್ಸಿರಲಿಲ್ಲ.” ಎಂದು ನಾನು ಹೇಳಿದೆ. ನಿಜವಾಗಿ ಆಗ ನನ್ನ ಮನಸ್ಸಿಗೆ ಬಲು ಸಮಾಧಾನವಾಗಿತ್ತು. ಆದರೆ ಅಂಥ ಸತ್ಯವನ್ನು ಆಡುವುದುಂಟೇ?

“ಅವರು ಕೊಡುವ ತ್ರಾಸ ಸಹಿಸಿಕೊಂಡು ಇರೂದಕ್ಕಾಗಲಿಲ್ಲ ನನಗೆ. ಏನು ಮಾಡೂದು ಹೇಳಿರಿ. ಅವರೂ ಸಿಕ್ಕ ಸಿಕ್ಕ ಹಾಂಗ ಮಾತಾಡಿದರು. ನಾನೂ ಏನೋ ಅಂದೆ ಸಿಟ್ಟಿನಲ್ಲಿ. ನಿಮಗೂ ಸಿಟ್ಟು ಬಂದಿತ್ತೇನು?”

“ಸಿಟ್ಟು ಬಂದರೆ ಮಾಡುವದಾದರೂ ಏನು? ಎಲ್ಲಾ ತಾಳಿಕೋಬೇಕಾಗುತದೆ ಗಿರಿಜಾ,” ಎಂದರವರು.

ಮಾರನೆಯ ದಿನ ಕೆಲಸಕ್ಕೆ ಹೊರಟು ನಿಂತಾಗ ತಮ್ಮ ಹತ್ತಿರ ಉಳಿದಿದ್ದ ಮೂರು ರೂಪಾಯಿಗಳನ್ನು ನನ್ನ ಕೈಗೆ ಹಾಕಿ ಅವರೆಂದರು:

“ನನ್ನ ಹತ್ತರ ಇರೂದು ಅಂದರಿಷ್ಟೇ ಗಿರಿಜಾ. ಸಂಬಳ ಬರುವವರೆಗೂ ಸಂಸಾರ ಸಾಗಿಸಿಕೊಂಡು ಹೋಗಬೇಕು.”

ನನ್ನ ಜೀವಮಾನದಲ್ಲಿಯೇ ಮೂರು ರೂಪಾಯಿಗಳನ್ನು ನಾನು ಏಕಕಾಲಕ್ಕೆ ಕೈಯಲ್ಲಿ ಹಿಡಿದಿರಲಿಲ್ಲ. ಆ ಮೂರೇ ಮೂರು ರೂಪಾಯಿ ಮೂರು

ಸಾವಿರ ರೂಪಾಯಿಗಳ ಹಾಗೆ ಕಾಣಿಸಿದುವು. ಚಿಕ್ಕ ಕುಡಿಕೆಯೊಂದರಲ್ಲಿ ಅವುಗಳನ್ನಿಟ್ಟು ಅದರ ಬಾಯಿ ಮುಚ್ಚಿದೆ.

ಅವರು ಕೆಲಸಕ್ಕೆ ಹೋದರು. ಮನೆಯಲ್ಲಿ ನಾನೊಬ್ಬಳೇ ಉಳಿದೆ.

ಹುಟ್ಟಿದಂದಿನಿಂದ ಅದುವರೆಗೆ ಎಂದೂ ಒಂಟಿಯಾಗಿರಲಿಲ್ಲ ನಾನು. ಆ ಕ್ಷಣದಲ್ಲಿ ನನಗೆ ನನ್ನ ತಂದೆ ತಾಯಿ ತಂಗಿಯರ ನೆನಪು ಬಂತು. ಮಾವನವರ ನೆನಪೂ ಬರದಿರಲಿಲ್ಲ. ಹೋಗಿ, ಅವರನ್ನು ನೋಡಿಕೊಂಡು ಬರಲೇ ಎಂದುಕೊಂಡೆ. ಅವರೇಕೆ ಇಲ್ಲಿಯೇ ಬಂದಿರಬಾರದು? ಎಂದುಕೊಂಡೆ. ಅವರು ಮನೆ ಬಿಟ್ಟು ಬರುವುದು ಸಾಧ್ಯವಾಗದೆಂಬುದೂ ನನಗೆ ತಿಳಿದ ಮಾತೇ ಆಗಿತ್ತು.

ಅತ್ತೆಯನ್ನೂ ನೀಲಕ್ಕನನ್ನೂ ಬಿಟ್ಟುಬಂದ ಬಗೆಗೆ ಮಾತ್ರ ನನಗೆ ಕೊಂಚವೂ ವ್ಯಸನವಾಗಲಿಲ್ಲ. ತಿರುಕನ ಮಗಳೆಂದು ನನ್ನನ್ನು ಹೀಯಾಳಿಸಿದರಲ್ಲವೇ ಅವರು! ಇಂದಿನ ತಿರುಕತನ ಹೋಗಿ ನನಗೂ ಸಿರಿತನ ಬರಬೇಕು, ಮನೆ ತುಂಬ ಸಾಮಾನು ಸಂಗ್ರಹವಾಗಬೇಕು, ಸಾಕಷ್ಟು ಅರಿವೆ ಅಂಚಡಿ ಆಗಬೇಕು, ಮೈತುಂಬ ಬೆಳ್ಳಿ ಬಂಗಾರ ಆಗಬೇಕು. ಅನಂತರ ಆ ಮನೆಗೆ ಹೋಗಿ ಅತ್ತೆಗೆ ಹೇಳಬೇಕು. "ಬಾ, ಬಂದು ನೋಡು ಬಾ, ತಿರುಕನ ಮಗಳ ಐಶ್ವರ್ಯವನ್ನ?" ಎಂದು.

....ಆದರೆ....ಇವರಿಗೆ ಬರುವ ಸಂಬಳದಲ್ಲಿ ಇದೆಲ್ಲವೂ ಆಗಲು ಸಾಧ್ಯವೆ? ತಿಂಗಳೊಂದಕ್ಕೆ ಬಹಳವಾದರೆ ಐದಾರು ರೂಪಾಯಿ ಉಳಿಸಲು ಆಗಬಹುದೋ ಏನೊ. ಈ ಐದು ರೂಪಾಯಿಗಳಿಂದೇನಾದೀತು?....

ಆ ಯೋಚನೆ ಬರುತ್ತಲೂ ಮತ್ತೆ ನನ್ನ ಮನಸ್ಸು ಉದಾಸವಾಯಿತು.

ಅತ್ತೆ ಮಾವಂದಿರು ನನ್ನ ತಂದೆತಾಯಿಗಳಿಗಿಂತ ಸ್ವಲ್ಪ ಸುಸ್ಥಿತಿಯಲ್ಲಿದ್ದರಲ್ಲವೆ? ಅವರಿಗೆ ಸ್ವಂತದ ಮನೆಯಿದೆ, ಮಗ್ಗವಿದೆ, ಮನೆಯಲ್ಲಿ ತಾಮ್ರ ಹಿತ್ತಾಳೆಯ ಪಾತ್ರೆಗಳಿವೆ. ಸ್ವಲ್ಪ ಹಣವೂ ಇರಬಹುದು. ನನ್ನ ತವರು ಮನೆಯಲ್ಲಿ ಮಾತ್ರ ಏನೂ ಇರಲಿಲ್ಲ. ನನ್ನ ತಂದೆ ತಿರುಕನ ಹಾಗೇ ಇದ್ದನೆಂದು ಯಾರಾದರೂ ಹೇಳಬಹುದು. ನಿಜವಿರುವ ಸಂಗತಿಯನ್ನೇ ನನ್ನ ಅತ್ತೆ ಆಡಿದಾಗ

ನನಗೆ ಕೋಪವೇಕೆ ಬರಬೇಕು? ಏನೋ, ಅದೆಲ್ಲ ನನಗೆ ತಿಳಿಯದು. ಕೋಪ ಬಂದದ್ದು ಮಾತ್ರ ನಿಜ.

ನಾನು ಬಡವರ ಮಗಳು. ನಿಜ. ತಿರುಕನ ಮಗಳು. ಅದೂ ನಿಜವೇ ಅನ್ನೋಣ. ಆದರೆ ಅದರಲ್ಲಿ ನನ್ನದೇನು ತಪ್ಪು? ಆ ವಿಷಯವನ್ನೆತ್ತಿ ನನ್ನನ್ನು ಅವಮಾನಗೊಳಿಸಲು ಅವರಿಗೇನು ಅಧಿಕಾರ?

ಮತ್ತೆ ನನ್ನ ಮನಸ್ಸು ಮಲಕಾಜಿಯ ಕಡೆಗೆ ಹರಿಯಿತು. ನಾನು ಅವನನ್ನು ಮದುವೆಯಾಗಿದ್ದಲ್ಲಿ ಸುಂದರೂ ಕೂಡ ನನ್ನನ್ನು ಹೀಗೇ ಅವಮಾನ ಗೊಳಿಸುತ್ತಿದ್ದಳೇನೊ. ಇನ್ನೊಂದು ಬಾರಿ ನನಗೆ ಇಂಥ ಮಾತನ್ನು ಯಾರೂ ಅನ್ನದಿರುವ ಹಾಗಾಗಬೇಕಾದರೆ ನಾನೂ ಸಿರಿವಂತಳಾಗಬೇಕು. ಅದೇ ಏಕ ಮಾತ್ರ ಉಪಾಯ.

ಸಿರಿವಂತಳಾಗಬೇಕು. ಸರಿ. ಆದರೆ ಹೇಗೆ?

ಆ ಪ್ರಶ್ನೆಗೆ ನನ್ನ ಬಳಿ ಉತ್ತರವಿರಲಿಲ್ಲ.

ಅದೇ ಯೋಚನೆಯಲ್ಲಿ ಊಟ ಮುಗಿಸಿ, ಪಾತ್ರೆಗಳನ್ನು ತೊಳೆದಿಟ್ಟು, ಚಾಪೆ ಬಿಡಿಸಿ ಮಲಗಿಕೊಂಡೆ. ಎರಡು ತಾಸು ನಿದ್ದೆ ಮಾಡಿರಬಹುದು. ಹೊತ್ತು ಮುಳುಗುವ ವೇಳೆಗೆ ಎಚ್ಚರವಾಯಿತು. ಎದ್ದು, ಮುಖ ತೊಳೆದುಕೊಂಡು ದೀಪ ಹಚ್ಚಿ ಅಡುಗೆಗೆ ಕುಳಿತುಕೊಂಡೆ.

ಎಂಟು ಗಂಟೆಯ ವೇಳೆಗೆ ಅವರು ಬಂದರು. ಎಂದಿನಂತೆ ಆ ದಿನ ಅವರ ಮುಖ ಗಂಟುಹಾಕಿಕೊಂಡಿರಲಿಲ್ಲ. ಕೋಟು ಅಂಗಿಗಳನ್ನು ತೆಗೆದಿಟ್ಟು ಅಡುಗೆ ಮನೆಗೆ ಬಂದರು. ಕೈಕಾಲು ತೊಳೆಯಲು ನೀರು ಕೊಟ್ಟೆ. ತಂಬಿಗೆ ಹಿಡಿದು ಕೊಂಡು ಬಚ್ಚಲಲ್ಲಿ ನಿಂತುಕೊಂಡಿದ್ದ ಹಾಗೆ ಮುಖ ತೊಳೆಯುವುದನ್ನೂ ಮರೆತು ಅವರು ನನ್ನ ಮುಖವನ್ನೇ ನೋಡುತ್ತಿದ್ದರು.

"ಏನು ನೋಡ್ತೀರಿ ಹೀಗೆ? ಕಾಲು ತೊಳಕೊಳ್ಳಿರಿ ಮೊದಲು," ಎಂದೆ ನಾನು ಮುಗುಳ್ನಗುತ್ತಾ.

ನನ್ನ ಹೃದಯಾಂತರಾಳದಿಂದ ಬಂದಿದ್ದಿತೇನೋ ಆ ಮಾತು?

ಅವರು ಬೆಚ್ಚಿ ಮುಖದ ಮೇಲೆ ನೀರು ಸಿಂಪಡಿಸುತ್ತಾ ಮಾತನಾಡಿದರು.

" ಈ ಬಿಳೀಸೀರೆಯೊಳಗ ನೀನು ಗೌರಿ ಕಂಡಾಂಗ ಕಾಣುತೀ ಗಿರಿಜಾ!"

" ಇಶ್ಶ್ಯಾ, ಬಿಡಿರಿ. ಏನಾದರೊಂದು ಆಡಬೇಡಿರಿ."

" ಸುಳ್ಳಲ್ಲ ಗಿರಿಜಾ. ನಿನ್ನ ಮಾರೀ ನೋಡುತಾ ಇದ್ದರೆ ಎಲ್ಲಾ ಮರೆತು ಹೋಗುತದೆ. ಹಸಿವೂ ಹಿಂಗಿ ಹೋಗುತದೆ. ಇಂಥಾ ಚೆಲುವಿ ನೀನು ನಮ್ಮವ್ವ ಅಕ್ಕಗೆ ಬೇಡವಾದಿ. ನಮ್ಮ ದುರ್ದೈವ"

ಅವರು ಉಂಡು ಎದ್ದರು. ನಾನು ಊಟಕ್ಕೆ ಕುಳಿತುಕೊಂಡೆ. ಮತ್ತೆ ವಿಚಾರಚಕ್ರ ಓಡತೊಡಗಿತು. ನಾನು ಚೆಲುವೆ. ಅದಕ್ಕಾಗಿಯೇ ಅತ್ತೆಗೆ ನನ್ನ ಬಗೆಗೆ ಅಸೂಯೆಯುಂಟಾಯಿತೋ ಏನೊ. ನೀಲಕ್ಕ ನನ್ನ ಬಗೆಗೆ ಹೊಟ್ಟೆ ಯುರಿದುಕೊಳ್ಳುವುದಕ್ಕೂ ನನ್ನ ಚೆಲುವಿಕೆಯೇ ಕಾರಣವೊ ಏನೊ. ಅವಳಿ ಗಿಲ್ಲದ ಸೌಂದರ್ಯ ನನಗಿದೆ. ಅವಳಿಗಿಲ್ಲದ ಪತಿಸುಖವೂ ನನಗಿದೆ. (ಇದೆಯೇ?) ನೀಲಕ್ಕ ಹಾಗೇಕೆ ವರ್ತಿಸುತ್ತಿದ್ದಳೆನ್ನುವುದು ನನಗಾಗ ಸ್ಪಷ್ಟ ವಾಯಿತು.

" ನೀನು ಚೆಲುವೆ," ಎಂದು ಮಲಕಾಜಿಯೂ ಹೇಳಿದ್ದ ಎಷ್ಟೋ ಬಾರಿ. ನಾನು ಚೆಲುವೆಯೆಂತಲೇ ಅವನ ತಂದೆ ನನ್ನನ್ನು ತಮ್ಮ ಮನೆಗೆ ತಂದು ಕೊಳ್ಳಲಿಲ್ಲವೋ ಏನೊ. ನನ್ನಂಥ ಚೆಲುವೆಯನ್ನು ಮದುವೆಯಾಗಲು ಮಲಕಾಜಿಗೂ ಧೈರ್ಯವಾಗಲಿಲ್ಲವೋ ಏನೊ....

ಹಾ? ಹಾಗೇನಾದರೂ ಇರಬಹುದೇ?

ಅದುವರೆಗೆ ಕತ್ತಲೆಯಲ್ಲಿ ಮರೆಯಾಗಿದ್ದ ಹಾಗಿದ್ದ ನನ್ನ ಮನಸ್ಸಿನ ಮೂಲೆಯೊಂದರಲ್ಲಿ ಫಕ್ಕನೆ ಬೆಳಕು ಬಿದ್ದಂತಾಯಿತು.

ಹಾ? ಹಾಗೇನಾದರೂ ಇರಬಹುದೇ?

ಚೆಲುವೆಯರನ್ನು ಎಲ್ಲರೂ ಪ್ರೀತಿಸುತ್ತಾರೆ. ಮದುವೆಯಾಗಲು ಮಾತ್ರ ಎಲ್ಲರೂ ಸಿದ್ಧರಾಗುವುದಿಲ್ಲವೋ ಏನೊ. ಚೆಲುವಿಕೆಯ ಅಹಂಕಾರದಿಂದ ನಾವು ಪಾತರಗಿತ್ತಿಗಳಂತೆ ಆಚರಿಸಿ ಕೆಟ್ಟು ಹೋಗಬಹುದೆಂಬ ಸಂಶಯವಿರಬಹುದು ಗಂಡಸರಿಗೆ.

....ಊಟ ಮುಗಿಸಿ ಎದ್ದು ಕೋಣೆಗೆ ಬರುತ್ತಲೂ, ಅವರು ತಮ್ಮ ಕೋಟಿನ ಕಿಸೆಯಲ್ಲಿ ಕೈಹಾಕಿ ನಾಲ್ಕು ಆಣೆಗಳನ್ನು ತೆಗೆದು ಕೊಟ್ಟು ಹೇಳಿದರು :

"ನಿನ್ನೆ ಕೊಟ್ಟದ್ದಿನಲ್ಲ, ಆ ರೂಪಾಯಿಗಳ ಸಂಗಡ ಇಡು ಇವನ್ನೂ."

ಆ ನಾಲ್ಕಾಣೆಗಳೆಲ್ಲಿಯವು ಎಂದು ನಾನು ಕೇಳಲಿಲ್ಲ. ಅವರೂ ಹೇಳಲಿಲ್ಲ.

ಮನೆಗೆ ಆ ಸಾಮಾನು ಬೇಕು, ಈ ಸಾಮಾನು ಬೇಕು ಎಂದೆಲ್ಲ ಮಾತ ನಾಡಿದೆವು. "ತರೋಣ, ತರೋಣ. ಎಲ್ಲಾ ತರೋಣ," ಎಂದೂ ಅವರು ಹೇಳಿದರು. ನನ್ನ ಲಕ್ಷ್ಯ ಮಾತ್ರ ಆ ಮಾತುಕತೆಗಳಲ್ಲಿದ್ದ ಹಾಗಿರಲಿಲ್ಲ. ಅದು ಎಲ್ಲೆಲ್ಲೋ ಹಾರಾಡುತ್ತಿತ್ತು. ಎಲ್ಲಿ ? ನನಗೆ ತಿಳಿಯದು.

ದಿನಗಳು ಉರುಳತೊಡಗಿದುವು. ಎರಡು ಮೂರು ದಿನಗಳಿಗೊಮ್ಮೆ ಅವರು ನಾಲ್ಕಾಣೆ ಎಂಟಾಣೆ ತಂದು ಕೊಡುತ್ತಿದ್ದರು. ನನ್ನ ಖಜಾನೆಯಲ್ಲಿ ಚಿಲ್ಲರೆ ಹಣ ಹೆಚ್ಚುತ್ತ ಬಂತು. ಅದರೊಂದಿಗೆ ಖರ್ಚೂ ಕೂಡ. ಸಂಬಳ ಬರುವ ವೇಳೆಗೆ ನನ್ನ ಹತ್ತಿರ ಇದ್ದುದೆಲ್ಲ ತೀರಿಹೋಗಿತ್ತು. ಸಂಬಳದ ಎಲ್ಲ ಹಣವನ್ನು ತಂದು ಅವರು ನನ್ನ ಹತ್ತಿರ ಕೊಟ್ಟರು. ಒಂದು ತಿಂಗಳಿಗಾಗಿ ನಮಗೆ ಅವಶ್ಯವಿದ್ದ ಸಾಮುಗ್ರಿಗಳದೊಂದು ಯಾದಿಯನ್ನು ತಯಾರಿಸಿದರು. ಹಾಲು ಮೊಸರು, ಕಟ್ಟಿಗೆ, ಅಕ್ಕಿ, ಜೋಳ, ಮೆಣಸಿನಕಾಯಿ, ಎಣ್ಣೆ, ಬೆಣ್ಣೆ – ಮೇಲೆ ಮನೆ ಬಾಡಿಗೆ. ಸಂಬಳದ ಹಣದಲ್ಲಿ ಏನೂ ಉಳಿಯದೆನ್ನುವುದು ಸ್ಪಷ್ಟವಾಯಿತು. ಆಗ ಮತ್ತೆ ನನಗೆ ವ್ಯಸನ.

"ತಿರುಕನ ಮಗಳು....ತಿರುಕನ ಹೆಂಡತಿ...."

ಛೆ. ನಾನೆಂದೂ ಸಹಿಸಲಾರೆ ಇಂಥ ನೀಚ ಸ್ಥಿತಿಯನ್ನು....

ಮಾರನೆಯ ದಿನ ಸಂತೆಯಿತ್ತು. ಇಬ್ಬರೂ ಕೂಡಿ ಪೇಟೆಗೆ ಹೋಗಿ ಸಂತೆ ಮಾಡಿದೆವು. ಒಂದೆರಡು ತಗಡಿನ ಡಬ್ಬಿಗಳನ್ನು, ಒಂದು ಚಾಪೆಯನ್ನೂ, ಒಂದು ಚದ್ದರನ್ನೂ ಕೊಂಡು ಕೊಂಡೆವು. ಚದ್ದರು ಅತ್ಯಂತ ಅವಶ್ಯವಾಗಿತ್ತು. ಅದು ವರೆಗೆ ನಮ್ಮಲ್ಲಿದ್ದುದು ಒಂದೇ ಒಂದು ಚದ್ದರು. ಒಂದೇ ಒಂದು ಜಮಖಾನ.

ಅವರಿಗೆ ಹಾಸುವುದಕ್ಕೆ ಆ ಜಮಖಾನ; ಹೊದೆಯುವುದಕ್ಕೆ ಹೊಸ

ಚದ್ದರು. ನನಗೆ ಚಾಪೆ, ಹಳೆಯ ಚದ್ದರು. ಕೊನೆಗೂ ನನಗೆ ತಪ್ಪಲಿಲ್ಲ ಚಾಪೆಯ ಸಹವಾಸ. ಮಂಚ – ಮೆತ್ತೆಗಳ ಮಾತಿರಲಿ, ಒಂದು ಜಮುಖಾನವೂ ಸಿಕ್ಕುವಂತಿಲ್ಲವಲ್ಲ ನನಗೆ! ಅಯ್ಯೋ! ಎಂದು ನರಳಿದೆ. ಮಂಚ – ಗಾದಿ – ಸೊಳ್ಳೆಯ ಪರದೆ – ರಗ್ಗು ಎಲ್ಲವನ್ನು ಕೊಂಡುಕೊಂಡೇ ತೀರುವುದೆಂದು ಮನಸ್ಸಿನಲ್ಲೇ ನಿರ್ಧರಿಸಿದೆ.

" ಆದರೆ, ಹೇಗೆ?" ಎಂದು ಕೇಳುತ್ತಿತ್ತು ಒಂದು ದನಿ.

" ಹೇಗಾದರೂ," ಎನ್ನುತ್ತಿತ್ತು ಇನ್ನೊಂದು ದನಿ.

" ಏನು, ನಿನಗೆ ಎಲ್ಲಾದರೂ ನೆಲದಲ್ಲಿ ಗಂಟು ಸಿಕ್ಕೀತೋ?"

" ಸಿಕ್ಕಿದರೂ ಸಿಕ್ಕಬಹುದಲ್ಲ? ಯಾಕೆ ಸಿಕ್ಕಬಾರದು?"

" ಹಿ ಹಿ ಹಿ ಹಿ!" ಎಂದು ನಗುತ್ತಿತ್ತು ದನಿ.

ನನಗೂ ನಗುವುಕ್ಕಿ ಬರುತ್ತಿತ್ತು.

" ಯಾಕೆ ಗಿರಿಜಾ, ಬಹಳ ನಗುತ್ತೀ?" ಎನ್ನುತ್ತಿದ್ದರವರು.

" ಏನಿಲ್ಲ. ಹಿಂದಿನದೊಂದು ಸಂಗತಿ ನೆನಪಾಗಿ ನಗುಬಂತು," ಎಂದು ಹೇಳಿ ಅವರನ್ನು ಸುಮ್ಮನಾಗಿಸುತ್ತಿದ್ದೆ.

# ೧೪

ಅದೇ ಸಮಯಕ್ಕೆ ಸುಶೀಲೆಯ ಪರಿಚಯವಾಯಿತು ನನಗೆ.

ಪ್ರಿಯಸಖಿ, ಸುಶೀಲೆಯನ್ನು ಬಲ್ಲೆಯಲ್ಲವೆ ನೀನು ?

ಅನೇಕ ಬಾರಿ ಅವಳು ಇಲ್ಲಿಗೆ ಬಂದಿದ್ದಾಳೆ. ನಾನು ಅವಳಲ್ಲಿಗೆ ಹೋಗಿ ಬಂದಿದ್ದೇನೆ. ಹಲವು ವರ್ಷಗಳ ಕಾಲ ನನ್ನ ಅಂತರಂಗದ ಗೆಳತಿಯಾಗಿದ್ದಳು ಸುಶೀಲಾ. ನನಗೆ ಓದು ಬರೆಹವನ್ನೂ ಪಟ್ಟಣದ ಶಿಷ್ಟ ಸಂಸ್ಕೃತಿಯನ್ನೂ ಕಲಿಸಿಕೊಟ್ಟ ಗುರು ಆಕೆ.

ನಿನಗೆ ಗೊತ್ತಿರಬೇಕಲ್ಲ? ಇಲ್ಲಿಯೇ ಸಮೀಪದಲ್ಲಿಯೇ ಅವರ ಮನೆ. ನಾವು ಈ ಮನೆಗೆ ಬಂದ ಹೊಸದರಲ್ಲಿಯೇ ಸುಶೀಲೆಯ ಪರಿಚಯವಾಯಿತು. ಅವಳ ತಾಯಿ ಕಮಲಾಬಾಯಿಯ ಗುರುತೂ ಆಯಿತು. ಆಗ ಅವಳಿಗೆ ಹದಿನಾರು ವರ್ಷವಿರಬಹುದು. ನನ್ನ ಹಾಗೆ ಅವಳೇನು ಸುಂದರಿಯಲ್ಲ– ಆದರೂ ನನ್ನಲ್ಲಿಲ್ಲದ ಯಾವುದೋ ಒಂದು ವಸ್ತು ಅವಳಲ್ಲಿದ್ದಂತೆ ತೋರುತ್ತಿತ್ತು. ಅಂತೆಯೇ ಅವಳು ನನ್ನನ್ನು ಆಕರ್ಷಿಸಿಕೊಂಡಿರಬೇಕು. ಅವಳು ಸೀರೆಯುಟ್ಟುಕೊಳ್ಳುವ ರೀತಿ, ಕೂದಲು ಬಾಚಿಕೊಳ್ಳುವ ರೀತಿ ಎಲ್ಲವೂ ಹೊಸದಾಗಿತ್ತು, ಮನಸೆಳೆಯುವ ಹಾಗಿತ್ತು.

ಅವರ ಮನೆಯಲ್ಲೂ ನಳವಿರಲಿಲ್ಲವಾದುದರಿಂದ ನೀರಿಗಾಗಿ ಅವಳೂ ಸಾರ್ವಜನಿಕ ನಲ್ಲಿಗೇ ಬರಬೇಕಾಗುತ್ತಿತ್ತು. ಈ ಓಣಿಯಲ್ಲಿ ಬ್ರಾಹ್ಮಣ ಸಂಸಾರಗಳು ಕಡಮೆ. ಒಕ್ಕಲಿಗರೇ ವಿಶೇಷವಾಗಿರುವ ಓಣಿಯಿದು. ಮೈಲಿಗೆಯಾಗದಂತೆ ನೀರು ತುಂಬಿಕೊಂಡು ಹೋಗಬೇಕಾದರೆ ಸುಶೀಲೆಗೆ ಬಹಳ

ತೊಂದರೆಯಾಗುತ್ತಿತ್ತು. ಅವಳಿಗೆ ಬೇಕೆಂದೇ ತೊಂದರೆ ಕೊಡುವ ಹೆಂಗಸರಿಗೂ ಕೊರತೆಯಿರಲಿಲ್ಲ.

"ಸಾಲೆಗೆ ಹೊತ್ತಾಗ್ತದೆ. ನನಗೊಂದು ಕೊಡ ಬಿಡಿರಿ," ಎಂದು ಬೇಡುವಳು ಸುಶೀಲಾ.

"ಐ! ನಿನಗ ಹೊತ್ತಾದರ ನಾವೇನು ಮಾಡೂಣು? ನಮಗೂ ಮನಿಯಾಗ ಕೆಲಸ ತುಂಬಿದಾವ!" ಎನ್ನುವರು ಹೆಂಗಸರು.

ಸುಶೀಲೆಯ ಬಗೆಗೆ ನನಗೆ ಕನಿಕರವುತ್ಪನ್ನವಾಗಿ, ಒಂದು ದಿನ ನಾನು ಅವಳ ಪಕ್ಷ ವಹಿಸಿ ಅವಳೇ ಮೊದಲು ಕೊಡ ತುಂಬಿಕೊಳ್ಳಲು ಸಹಾಯ ಮಾಡಿದೆ. ಆಗಲೇ ನಮ್ಮ ಪರಿಚಯಕ್ಕಾರಂಭವಾದದ್ದು. ಅಂದು ಸಂಜೆ ಅವಳು ಶಾಲೆಯಿಂದ ಬರುತ್ತಲೂ ಕಟ್ಟೆಯ ಮೇಲೆ ಅಕ್ಕಿಯಲ್ಲಿನ ಹರಳು ಆರಿಸುತ್ತ ಕುಳಿತಿದ್ದ ನನ್ನನ್ನು ನೋಡಿ ಸ್ನೇಹದ ನಗು ಬೀರಿ,

"ಈಗಲೇ ಸುರುವಾಯ್ತೇನ್ರೀ ಅಡಿಗೆಯ ತಯಾರಿ?" ಎಂದಳು.

"ಹೂಂ. ಹೊತ್ತಾಗುತಾ ಬಂತಲ್ಲ? ಅವರು ಬರುವದರೊಳಗಾಗಿ ಅಡಿಗೆಯಾಗಬೇಕು."

"ಅಡಿಗೆ ಮಾಡೂದು ಬಿಟ್ಟರೆ ಬ್ಯಾರೆ ಕೆಲಸ ಏನೂ ಇದ್ದ ಹಾಗೆ ಕಾಣೂದಿಲ್ಲ ನಿಮಗೆ?" ಎಂದು ನಗುತ್ತಾ ಹೇಳಿದಳು ಸುಶೀಲಾ.

"ನಾನೇನು ನಿಮ್ಮ ಹಾಗೆ ಸಾಲಿಗೆ ಹೋಗೂದಿಲ್ಲಲ್ಲ. ಬ್ಯಾರೆ ಕೆಲಸ ಆದರೂ ಏನು ನನಗೆ?"

"ನೀವೂ ಯಾಕೆ ಸಾಲಿಗೆ ಹೋಗಬಾರದು?"

"ಆಯ್ತು, ಈ ವಯಸ್ಸಿನಾಗ ನಾ ಸಾಲಿಗೆ ಹೋಗೂದಂದರ ಯಾರಾದರೂ ನಕ್ಕಾರು."

"ಸಾಲಿಗೆ ಅಂದರೆ ಸಾಲಿಗೇ ಅಲ್ಲ. ಮನೆಯೊಳಗೆ ಕೂತು ಓದಲಿಕ್ಕೆ ಬರೀಲಿಕ್ಕೆ ಕಲಿಯಬಹುದಲ್ಲ?"

"ಕಲಿತೇನು ಅನ್ನಿರಿ. ಕಲಿಸುವವರು ಯಾರು?"

"ಯಾಕೆ? ನಿಮ್ಮವರಿಗೆ ಓದಲಿಕ್ಕೆ ಬರೂದಿಲ್ಲೇನು?"

" ಅವರಿಗೆಲ್ಲಿ ವೇಳೆ ಸಿಗುತದರೀ ?"

" ಹಾಗಾದರೆ ನಾ ಕಲಿಸುತೀನಿ, ನೀವು ತಯಾರಿದ್ದರೆ," ಎಂದು ಹೇಳಿ ಅವಳು ಮಾತನ್ನು ಅಲ್ಲಿಗೇ ಬಿಟ್ಟು ಮನೆಗೆ ಹೋದಳು.

ಮಾರನೆಯ ದಿನ ಅವರು ಕೆಲಸಕ್ಕೆ ಹೋದ ಬಳಿಕ ಸುಶೀಲಾ ನಮ್ಮ ಮನೆಗೆ ಬಂದಳು.

" ಏನ್ರೀ, ಏನು ಮಾಡುತ್ತಿದೀರಿ ? ಅಡಿಗೆ ಆಯ್ತೇ ?"

" ಬರ್ರಿ. ಬರ್ರಿ. ಅಡಿಗೆ ಆಗಿ ಅವರು ಉಂಡು ಹೋದರಲ್ಲ."

" ಹೌದು. ನಾನೂ ನೋಡಿದೆ."

" ಬರ್ರಿ, ಕೂಡ್ರಿ," ಎನ್ನುತ್ತಾ ಚಾಪೆಯನ್ನು ಹಾಸಿದೆ.

ಸುಶೀಲೆ ಮುಖ ಕಿವುಚುತ್ತಾ ಅದರ ಮೇಲೆ ಕುಳಿತುಕೊಂಡಳು.

" ಜಮುಖಾನ ಹಾಸಲೇನ್ರೀ ?"

" ಏನೂ ಬೇಡ ಬಿಡಿರಿ."

ಒಂದು ಕ್ಷಣ ಸುಮ್ಮನಿದ್ದು ಸುಶೀಲಾ ಕೇಳಿದಳು :

" ನಿಮ್ಮ ಮನೆಯಲ್ಲಿ ಕುರ್ಚಿ ಗಿರ್ಚಿ ಏನೂ ಇಲ್ಲೇನ್ರೀ ?"

" ಇಲ್ಲ. ನಮಗ್ಯಾತಕ್ಕೆ ಬೇಕು ಹೇಳ್ರಿ ಕುರ್ಚಿ ಮೇಜು ? ನಾನೇನು ಕಲಿತವಳೇ ನಿಮ್ಮ ಹಾಗೆ ?"

" ಛೆ. ಹಾಗಂದರೆ ಹ್ಯಾಗಾದೀತು. ಯಾರಾದರೂ ಮನೆಗೆ ಬಂದರೆ ಅವರು ಕೂಡಲಿಕ್ಕೆ ಒಂದೆರಡು ಕುರ್ಚಿಯಿರಲಿಕ್ಕೇ ಬೇಕು."

" ಒಂದು ಕುರ್ಚಿಗೆ ಎಷ್ಟು ಕಿಮ್ಮತ್ತಾಗ್ತದೆ ಸುಶೀಲಾ ?"

" ಅದಕ್ಕೇನ್ರೀ, ಬಹಳ ಅಗ್ಗ. ಎರಡು ರೂಪಾಯಿ ಕೊಟ್ಟರಾಯ್ತು."

" ತರೋಣೇಳ್ರಿ ಹಾಗಾದರೆ,"

ಆ ಮಾತು ಈ ಮಾತು ಆಡುತ್ತಾ ಅವಳು ನನ್ನ ವಿಷಯವನ್ನೆಲ್ಲ ಕೇಳಿ ತಿಳಿದುಕೊಂಡಳು.

" ನೀವು ಸ್ವತಂತ್ರ ಸಂಸಾರ ಹೂಡಿದ್ದೇ ಚಲೋದಾಯ್ತು. ಇನ್ನು

ನೀವು ಗಂಡ ಹೆಂಡಿರು ಸುಖವಾಗಿರಬಹುದು. ನಿಮ್ಮವರು ನಿಮ್ಮ ವ್ಯಾಲ ಬಹಳ ಪ್ರೀತಿ ಮಾಡುತಾರೇನ್ರೀ?"

ಅಂಥ ಪ್ರಶ್ನೆಗೆ ಉತ್ತರವೀಯುವುದಾದರೂ ಹೇಗೆ? ನಾನು ಕೆನ್ನೆಗಳಲ್ಲಿಯೆ ನಕ್ಕು ಸುಮ್ಮನಾದೆ.

ಸುಶೀಲಾ ಚದುರೆ. ಅವಳೂ ಮುಸಿಮುಸಿ ನಕ್ಕು ಹೇಳಿದಳು :

"ಆಯ್ತಲ್ಲ. ಅವರೂ ನಿಮ್ಮನ್ನ ಪ್ರೀತಿಸ್ತಾರೆ. ನೀವೂ ಅವರನ್ನ ಪ್ರೀತಿಸ್ತೀರಿ. ಚೆನ್ನಾಗಿದೆ ಜೋಡಿ!"

"ನೀವು ಯಾವ ಸಾಲಿಯೊಳಗಿದ್ದೀರಿ?" ಎಂದು ನಾನು ಕೇಳಿದೆ.

"ಗರ್ಲ್ಸ್ ಹೈಸ್ಕೂಲಲ್ಲಿದ್ದೀನಿ, ಈ ವರ್ಷ ಮ್ಯಾಟ್ರಿಕ್ ಪರೀಕ್ಷೆಗೆ ಕೂಡುತ್ತೀನಿ."

"ಮ್ಯಾಟ್ರಿಕ್ ಪರೀಕ್ಷೆ ಎಂಬ ಶಬ್ದ ಕಿವಿಗೆ ಬೀಳುತ್ತಲೂ ನನಗೆ ಹೇಗೆ ಹೇಗೋ ಆಯಿತು. ಮಲಕಾಜಿಯೂ ಮ್ಯಾಟ್ರಿಕ್ ಮಾಡಿದ್ದನಲ್ಲವೆ?

"ನಿಮ್ಮ ತಂದೆ ಏನು ಮಾಡುತಾರೆ ಸುಶೀಲಾ?"

"ಕನ್ನಡ ಸಾಲೆಯಲ್ಲಿ ಮಾಸ್ತರಾಗಿದ್ದಾರೆ."

"ನೀವು ಮ್ಯಾಟ್ರಿಕ್ ಆದ ವ್ಯಾಲ ಏನು ಮಾಡುವವರು? ಮದುವೆ ಯಾವಾಗ?"

"ಈಗಲೇ ಏನವಸರ ಮದುವೆಗೆ? ನಾನೇನು ಮುದುಕಿಯಾದೆನೇ?"

"ಮುದುಕಿಯಾದ ವ್ಯಾಲ ಮದುವೆಯಾಗುತ್ತಾರೇನು ಯಾರಾದರೂ?"

ಸುಶೀಲೆ ನಕ್ಕಳು. ನಾನೂ ನಕ್ಕೆ.

ಮತ್ತೊಂದು ದಿನ ಅವಳು ಹೇಳಿದಳು :

"ನೀವು ಸರಿಯಾಗಿ ಸೀರೆಯುಡಲಿಕ್ಕೆ ಕಲೀಬೇಕ್ರೀ."

"ಸರಿಯಾಗಿ ಅಂದರೆ?"

"ಹಳ್ಳಿಯ ದಪ್ಪ ಸೀರೆ ಉಟ್ಟ ಹಾಗಲ್ಲ ಪತ್ತಲ ಉಟ್ಟುಕೊಳ್ಳುವದು. ಇದರ ರೀತಿಯೇ ಬೇರೆ," ಎಂದು ಹೇಳಿ ತಾನು ಸೀರೆಯುಡುವ ಬಗೆಯನ್ನು ವಿವರಿಸಿ ಹೇಳಿದಳು.

" ಸೀರೆಗೆ ಒಪ್ಪುವಂಥಾ ಕುಬುಸವೂ ಇರಬೇಕಾಗುತದೆ. ಇತ್ತೀತ್ತಲಾಗಿ ಹೊಸ ಹೊಸ ನಮೂನೆಯ ಬ್ಲೌಜ್ ಹೊಲಿಯುತ್ತಿದಾರೆ ಸಿಂಪಿಗರು. ನೀವೂ ಹೊಲಿಸಿಕೊಳ್ಳಬೇಕು."

" ಓದು ಬರೆಯಲಿಕ್ಕೆ ಬರುವದಿಲ್ಲ ಏನಿಲ್ಲ. ನಾನೂ ನಿಮ್ಮಂತೆ ಡೌಲು ಮಾಡಿದರೆ ಜನ ನಗಲಿಕ್ಕಿಲ್ಲವೇನ್ರೀ ?"

" ಜನರ ಮಾತು ತಗೊಂಡೇನು ಮಾಡ್ತೀರೀ ಗಿರಿಜವ್ವ? ನಗದಿದ್ದರೆ ಸಮಾಧಾನವೇ ಇರೂದಿಲ್ಲ ಕೆಲವರಿಗೆ. ಈಗ ನೋಡಿರಿ. ನಾನು ಹೈಸ್ಕೂಲಿಗೆ ಹೋಗೂದನ್ನ ನೋಡಿ ನಗುವವರೂ ಇದ್ದಾರೆ. ನಾವು ಕಲಿತರೂ ಇವರಿಗೆ ಹೊಟ್ಟೇಕಿಚ್ಚು. ಸ್ವಲ್ಪ ಚಂದಾಗಿ ಕಾಣುವ ಸೀರೆ ಕುಬುಸ ತೊಟ್ಟರೂ ಹೊಟ್ಟೇಕಿಚ್ಚು. ಅವರ ಹೊಟ್ಟೇಕಿಚ್ಚಿಗೆ ನಾನ್ಯಾಕೆ ಲಕ್ಷ್ಯ ಕೊಡಬೇಕು? ಆಂ, ಏನಂತೀರಿ ?

" ನೀವನ್ನೂದೂ ಬರಾಬ್ಬರಿ."

ಒಂದು ಸಾಯಂಕಾಲ ನನ್ನನ್ನು ತಮ್ಮ ಮನೆಗೆ ಕರೆದೊಯ್ದಳು ಸುಶೀಲಾ. ಅದೇನು ದೊಡ್ಡ ಮನೆಯಲ್ಲ. ಒಂದು ನಡುಮನೆ, ಎರಡು ಕೋಣೆಗಳು, ಅಡುಗೆಯ ಮನೆ ಇಷ್ಟೆ. ಆದರೂ ನಮ್ಮ ಮನೆಯಲ್ಲಿಲ್ಲದ ಅಚ್ಚುಕಟ್ಟುತನವೂ ಅಂದವೂ ಅಲ್ಲಿ ಎದ್ದು ಕಾಣುತ್ತಿತ್ತು. ನಡುಮನೆಯಲ್ಲಿ ಎರಡು ಕುರ್ಚಿಗಳು, ಒಂದು ಮೇಜು. ಅದರ ಮೇಲೆ ಹೆಣಿಗೆಯ ವಸ್ತ್ರ ಹಾಸಿತ್ತು. ಮಗ್ಗುಲಲ್ಲಿ ಒಂದು ಮಂಚ. ಅದರ ಮೇಲೆ ಗಾದಿ – ಲೋಡು – ಸೊಳ್ಳೆಪರದೆ. ಪಕ್ಕ ದಲ್ಲೊಂದು ಚಿಕ್ಕ ಕವಾಟು. ಗೋಡೆಗೆ ನಾಲ್ಕಾರು ಚಿತ್ರಗಳು. ನಗುತ್ತಲಿದ್ದ ಸುಶೀಲೆಯದೂ ಒಂದು ಫೋಟೋ. ನೆಲದ ಮೇಲೆ ಜಮುಖಾನ ಹಾಸಿತ್ತು. ಎಡ ಬಲಗಳಲ್ಲಿದ್ದ ಕೋಣೆಗಳ ಬಾಗಿಲುಗಳಿಗೆ ಹೆಣಿಗೆಯ ಪರದೆಗಳನ್ನಿಳಿಬಿಡ ಲಾಗಿತ್ತು. ಎಡಗಡೆಯ ಕೋಣೆಯಲ್ಲಿ ದೊಡ್ಡ ಮಂಚ. ಅದರ ಮೇಲೂ ಗಾದಿ – ದಿಂಬು – ರಗ್ಗು. ಹತ್ತಿರವೇ ಒಂದು ಆರಾಮು ಕುರ್ಚಿ. ನೆಲದ ಮೇಲೆ ಕಂಬಳಿ ಹಾಸಿತ್ತು. ಅಡುಗೆಯ ಮನೆಯಲ್ಲಿ ನಾನು ಪ್ರವೇಶಿಸು ವಂತಿರಲಿಲ್ಲ. ಬಾಗಿಲಲ್ಲಿಯೇ ನಿಂತು ಆ ಕೋಣೆಯ ಓರಣವನ್ನು ಕಂಡು

ಬೆರಗುಗೊಂಡೆ – ಗೋಡೆಗೆ ಮರದ ಹಲಗೆ ಜೋಡಿಸಿ ಅದರ ಮೇಲೆ ಪಾತ್ರೆಗಳನ್ನು ಸಾಲಾಗಿ ಇರಿಸಲಾಗಿತ್ತು. ಎಷ್ಟು ಪಾತ್ರೆಗಳವು! ಅಬ್ಬಾ! ಎನಿಸದಿರಲಿಲ್ಲ ನನಗೆ. ನನ್ನ ಅಡುಗೆ ಮನೆಯ ನೆನಪು ಬಂದು ಮನಸ್ಸು ಜಡವಾಯಿತು.

"ಕೂತುಕೋ ತಾಯಿ," ಎಂದರು ಸುಶೀಲೆಯ ತಾಯಿ ಕಮಲಾಬಾಯಿ.

ನಡುಮನೆಯಲ್ಲಿನ ಜಮುಖಾನದ ಮೇಲೆ ನಾನು ಕೂತುಕೊಳ್ಳುತ್ತಿದ್ದ ಹಾಗೆ ಸುಶೀಲೆ ನನ್ನನ್ನೆಳೆದು ಬಲವಂತದಿಂದ ಕುರ್ಚಿಯ ಮೇಲೆ ಕೂಡಿಸಿದಳು. ಸಿಂಹಾಸನದ ಮೇಲೆಯೆ ಕುಳಿತುಕೊಂಡ ಹಾಗಾಯಿತು ನನಗೆ. ಅದುವರೆಗೆ ಎಂದೂ ಕುರ್ಚಿಯ ಮೇಲೆ ಕುಳಿತವಳಲ್ಲ ನಾನು. ಅದೂ ಒಂದು ಹೊಸ ಅನುಭವವೇ ಸರಿ.

ಕಮಲಾಬಾಯಿ ಹಲವು ಪ್ರಶ್ನೆ ಕೇಳಿದರು. ಅಕ್ಕರತೆಯಿಂದ ಮಾತನಾಡಿಸಿದರು.

"ಏನಾದರೂ ಅಡಚಣಿ ಬಿದ್ದರೆ ಕೇಳಿ ತೆಗೆದುಕೊಳ್ಳವ್ವಾ. ನಮ್ಮ ಸುಶೀ ಯಾವಾಗಲೂ ನಿನ್ನ ವರ್ಣನಾ ಮಾಡುತಾಳೆ."

ಅನಂತರ ದಿನವೂ ನಮ್ಮ ಮನೆಗೆ ಬರತೊಡಗಿದಳು ಸುಶೀಲಾ. ಅವಳ ಸಹವಾಸ ನನಗೂ ಪ್ರಿಯವೆನಿಸತೊಡಗಿತು. ಹರಟೆ ಕೊಚ್ಚುತ್ತಿದ್ದ ಹಾಗೇ ಅವಳು ನನಗೆ ಅಕ್ಷರಗಳನ್ನು ಕಲಿಸತೊಡಗಿದಳು. ಅವಳ ಹತ್ತಿರ ದುಡ್ಡು ಕೊಟ್ಟು ಒಂದು ಪಾಟಿಯನ್ನೂ ತರಿಸಿಕೊಂಡೆ. ಹೇಳಿ ಕೇಳಿ ಮಾಸ್ತರರ ಮಗಳು ಆಕೆ. ಕಲಿಸುವಿಕೆ ಅವಳ ರಕ್ತದಲ್ಲೇ ಬಂದ ಹಾಗಿತ್ತು. ತುಂಬಾ ಉತ್ಸಾಹದಿಂದ ಕಲಿಸತೊಡಗಿದಳು. ಒಂದು ತಿಂಗಳಿನೊಳಗಾಗಿ ಅಕ್ಷರಗಳನ್ನೆಲ್ಲ ನಾನು ಕಲಿತುಕೊಂಡೆ. ನನ್ನ ಹೆಸರನ್ನೂ ಅವರ ಹೆಸರನ್ನೂ ಬರೆಯುವ ಮಟ್ಟಿಗೆ ತಯಾರಾದೆ. ಒಂದು ದಿನ, ಅವರನ್ನು ವಿಸ್ಮಿತರನ್ನಾಗಿಸುವ ಅಪೇಕ್ಷೆಯಿಂದ ನಮ್ಮಿಬ್ಬರ, ಹೆಸರು ಬರೆದು ತೋರಿಸಿದೆ. ನಾನು ನಿರೀಕ್ಷಿಸಿದ್ದ ಹಾಗೇ ಅವರಿಗೆ ತುಂಬ ಆಶ್ಚರ್ಯವಾಯಿತು.

" ಇದೇನು ಗಿರಿಜಾ, ಇದನ್ನೆಲ್ಲ ಕಲಿತೆ ? ನಾನು ಕೆಲಸಕ್ಕೆ ಹೋದಾಗ ನೀನು ಸಾಲಿಗೆ ಹೋಗುತ್ತಿದ್ದಿಯೋ ಏನು ?"

ನಾನು ನನ್ನ ಗುರುವಿನ ವಿಚಾರವಾಗಿ ಹೇಳಿದೆ. ಅವರು ಸಂತುಷ್ಟ ರಾದರು.

" ಬಹಳ ಚಲೋ ಆಯಿತೇಳು, ನಿನಗೆ ಸ್ವಲ್ಪಾದರೂ ಓದುವುದಕ್ಕೆ ಬರಬೇಕಂತ ನನಗೂ ಆಸೆಯಿತ್ತು. ಕಲಿಸಬೇಕಂದರೆ ನನಗೆ ವೇಳೆಯಿಲ್ಲ. ಆವರು ದೊಡ್ಡ ಮನಸು ಮಾಡಿ ಕಲಿಸುತಿದಾರೆ. ಹೀಗೇ ಕಲಿತುಕೋ," ಎಂದರು.

ಆ ತಿಂಗಳಿನ ಸಂಬಳ ಬರುತ್ತಲೂ ಸುಶೀಲೆಗೆ, ಕೂಡುವುದಕ್ಕಾಗಿ ಒಂದು ಕುರ್ಚಿಯನ್ನು ತರುವುದೆಂದು ನಾನು ಯೋಚಿಸಿಕೊಂಡಿದ್ದೆ. ಆದರೆ, ಆ ತಿಂಗಳು ಅವರು ಹನ್ನೆರಡು ರೂಪಾಯಿಗಳನ್ನು ಮಾತ್ರ ತಂದುಕೊಟ್ಟರು.

" ಅದ್ಯಾಕ್ರೀ ? ಹನ್ನೆರಡೇ ರೂಪಾಯಿ ?"

" ಹೊಸಾ ಮನೆ ಮಾಡುವಾಗ ಹತ್ತು ರೂಪಾಯಿ ಸಾಲ ಮಾಡಿದ್ದೆ ಗಿರಿಜಾ. ಅದರೊಳಗೆ ಈ ತಿಂಗಳು ಮೂರು ರೂಪಾಯಿ ಮುಟ್ಟಿಸಿದ್ದೀನಿ."

ಸರಿ. ಇನ್ನೂ ಮೂರು ತಿಂಗಳುಗಳವರೆಗೆ, ಆ ಹತ್ತು ರೂಪಾಯಿಗಳ ಸಾಲವೆಲ್ಲ ತೀರುವ ತನಕ ನಾನು ಏನನ್ನೂ ಕೊಳ್ಳುವಂತಿರಲಿಲ್ಲ. ಮತ್ತೆ ನನ್ನ ಮನಸ್ಸನ್ನು ವ್ಯಸನ ಆವರಿಸಿಕೊಂಡಿತು.

ತಮ್ಮ ಮನೆಗೆ ಬೇಕಾದ ಸಾಮಾನುಗಳನ್ನೆಲ್ಲ ಸುಶೀಲೆಯೇ ಸಂತೆಗೆ ಹೋಗಿ ತರುತ್ತಿದ್ದಳು. ಅವಳ ತಮ್ಮಂದಿರಿನ್ನೂ ಎಳೆಯರು. ಅವಳ ತಂದೆಗೆ ಬಿಡುವಾಗುವಂತಿರಲಿಲ್ಲ – ಅಂತೆಯೆ, ಸುಶೀಲೆಯೇ ಪೇಟೆಗೆ ಹೋಗಬೇಕಾಗಿ ಬರುತ್ತಿತ್ತು. ಪೇಟೆ ಬೀದಿ ಸುತ್ತುವುದೆಂದರೆ ಅವಳಿಗೂ ಬಹಳ ಹುರುಪು. ಅವಳ ಜೊತೆಗೆ ನಾನೂ ಸಂತೆ ಮಾಡಿಕೊಂಡು ಬರಬಹುದೆಂದು ಇವರು ಹೇಳಿದರು. ನನಗೆ ಬೇಕಿದ್ದುದೂ ಅದೇ ಆಗಿತ್ತು. ಸಂತೆಯಲ್ಲಿ, ಪೇಟೆಯಲ್ಲಿ ಗಂಡಸರೆಲ್ಲರೂ ನಮ್ಮನ್ನೇ ಬಯಕೆಗಣ್ಣುಗಳಿಂದ ದಿಟ್ಟಿಸುತ್ತಿದ್ದ ಹಾಗೆ ಆ ವಸ್ತು ಈ ವಸ್ತು ಕೊಳ್ಳುತ್ತ ಒಯ್ಯಾರದಿಂದ ವ್ಯಾಪಾರ ಮಾಡುವುದರಲ್ಲೂ

ಒಂದು ಸೊಗಸಿತ್ತು. ಸಂತೆಯ ಗದ್ದಲದಲ್ಲಿ ಎಷ್ಟೋ ಜನರು ಬೇಕೆಂತಲೇ ನಮಗೆ ಡಿಕ್ಕಿ ಹೊಡೆದುಕೊಂಡು ಹೋಗುತ್ತಿದ್ದರು. ಅದೂ ಪ್ರಿಯವಾದ ವಿಷಯವೇ ಆಗಿತ್ತು ಸುಶೀಲೆಗೆ. ನನಗೂ ಸಹ ಅದೇನು ಬೇಡವೆನ್ನಿಸಲಿಲ್ಲ.

"ಹೆಂಗಸರನ್ನ ನೋಡಿದ ಕೂಡಲೆ ಹ್ಯಾಗೆ ಮಂಗಗಳಂತೆ ಮಾಡುತ್ತಾರೆ ಈ ಗಂಡಸರು, ನೋಡಿದಿರಾ?" ಎಂದು ನಗುತ್ತ ಕೇಳಿದಳು ಸುಶೀಲಾ ಒಂದು ಬಾರಿ.

"ಆ ಜಾತಿಯ ಹುಟ್ಟುಗುಣಾನೇ ಹಾಗೆ ಅಲ್ಲೇನ್ರಿ?"

"ಮೊನ್ನೆ ಒಂದಿನಾ ಏನಾಯ್ತು ಅಂದಿರಿ....ಬೆಲ್ಲ ಗಸಗಸೆ ತರಲಿಕ್ಕೆ ಕಿರಾಣಿ ಅಂಗಡಿಗೆ ಹೋಗಿದ್ದೆ. ಅಂಗಡಿಕಾರ ಒಬ್ಬ ಧಡಿಯ. ಅವನ್ನ ನೋಡಿದರೆ ಕೋಣನ್ನ ನೋಡಿದಂತೇ ಆಗುತದೆ. ನನಗೆ ಬೆಲ್ಲ ಕಟ್ಟಿಕೊಟ್ಟು, ನಾನು ಕೊಟ್ಟ ರೊಕ್ಕ ಸರಿಯಾಗಿ ಎಣಿಸಿಕೊಳ್ಳುವದನ್ನೂ ಮರೆತು ನನ್ನ ಮುಖವನ್ನೇ ಮಿಕಿಮಿಕಿ ನೋಡುತ್ತಾ ಕೂಡಬೇಕೇ ಬೆಪ್ಪುಮುಂಡೇಮಗ.... ನಾನು ನಾಲ್ಕಾಣೆ ಕೊಟ್ಟಿದ್ದರೆ ರೂಪಾಯಿ ಕೊಟ್ಟಿರಬೇಕೆಂದು ಅವ ತಿಳಿದು ಕೊಂಡು ಹದಿಮೂರು ಆಣೆ ವಾಪಸು ಕೊಟ್ಟ. ಪುಕ್ಕಟೆ ಲಾಭ ಆದರೆ ನಾನಾದರೂ ಯಾಕೆ ಬಿಡಲಿ ಹೇಳಿರಿ. ತೆಗೆದುಕೊಂಡು ಬಂದುಬಿಟ್ಟೆ."

ಅವಳ ಅನುಭವವನ್ನು ಕೇಳಿ ನನಗೆ ನಗು ಬಂದಿತಾದರೂ ಒಳಗೊಳಗೇ ಸ್ವಲ್ಪ ಅಸೂಯೆಯೂ ಉಂಟಾಯಿತು. ಇವಳೇನು ಮಹಾ ರಂಭೆಯೆಂದು ಅಂಗಡಿಯವನು ಇವಳನ್ನು ಕಂಡು ಮರುಳಾದನೋ! ಎನ್ನಿಸಿತು. ಅವನೇ ನನ್ನನ್ನು ನೋಡಿದರೆ? ತನ್ನ ಪೆಟ್ಟಿಗೆಯಲ್ಲಿನ ಹಣವನ್ನೇ ನನಗೆ ಕೊಟ್ಟು ಬಿಡಬಹುದು....

"ಏನಂತೀರಿ ಗಿರಿಜವ್ವಾ?" ಎಂದಳು ಸುಶೀಲಾ.

"ಅಂಥವರೂ ಇರ್ತಾರೇಳ್ರಿ."

"ಇನ್ನೊಮ್ಮೆ ಏನಾಯ್ತು ಅಂದಿರಿ...." ಎಂದು ಮತ್ತೆ ಆರಂಭಿಸಿ ಒಂದು ಕ್ಷಣ ತಡೆದು ಅವಳೆಂದಳು: "ನಾ ಹೇಳುವದನ್ನ ಯಾರ ಮುಂದೂ ಹೇಳ ಬಾರದು ಹಂ!"

"ಇಲ್ಲ. ಇಲ್ಲ."

"ಒಂದು ಸಲ ನಾನು ಸಿನಿಮಾಗೆ ಹೋದಾಗ ಹೀಗಾಯಿತು: ನಾನು ಟಿಕೀಟು ತೆಗೆಸುತ್ತಿದ್ದಾಗ ಒಬ್ಬ ಹುಡುಗ ನನ್ನ ಹಿಂದೆ ಹಿಂದೇ ಸುಳಿದಾಡುತ್ತಿದ್ದ. ಹಾಗೆ ನನ್ನನ್ನ ನೋಡಿ ಹುಚ್ಚರಂತೆ ಮಾಡುವವರೆಷ್ಟೋ ಮಂದಿ. ನಾನೇನೂ ಲಕ್ಷ್ಯ ಕೊಡುವದಿಲ್ಲ. ಅವತ್ತೂ ಅವನ್ನ ನೋಡಿಯೂ ನೋಡದಂತೆ ಟಿಕೀಟು ತೆಗೆಸಿ ಹೆಂಗಸರ ಜಾಗಕ್ಕೆ ಹೋಗಿ ಕೂತಿದ್ದೆ. ಅವತ್ತು ಥೇಟರಿನೊಳಗೆ ಭಯಂಕರ ಗದ್ದಲ. ನಾನು ಹೋಗುವದರೊಳಗಾಗಿ ಜಾಗ ಭರ್ತಿಯಾಗಿತ್ತು. ಮಗ್ಗುಲಲ್ಲೇ ಇದ್ದ ಗಂಡಸರ ಜಾಗದ ಹತ್ತರವೇ ಕುರ್ಚಿ ಹಾಕಿ ನನಗೆ ಜಾಗ ಮಾಡಿಕೊಟ್ಟ ಮ್ಯಾನೇಜರ್. ಗಂಡಸರ ಜಾಗಕ್ಕೂ ಹೆಂಗಸರ ಜಾಗಕ್ಕೂ ನಡುವೆ ಸಣ್ಣದೊಂದು ಫಳಿಯಿದ್ದುದಷ್ಟೆ. ಟಿಕೀಟಿನ ಕಿಟಕಿಯ ಹತ್ತರ ನನ್ನ ನೋಡಿದ್ದ ಹುಡುಗ ಒಳ ಬಂದವನೇ ನನ್ನ ಮಗ್ಗುಲಲ್ಲೇ ಕೂತುಬಿಟ್ಟ...."

ಮುಂದೆ ಹೇಳಲು ಸಂಕೋಚವೆನ್ನಿಸಿತೇನೋ ಸುಶೀಲಾಗೆ. ಅವಳು ತಡೆದು ನಿಂತಳು, ನನ್ನನ್ನು ಓರೆ ನೋಟದಿಂದ ದಿಟ್ಟಿಸಿದಳು. ಆ ವೃತ್ತಾಂತದಲ್ಲಿ ನನಗೂ ಕುತೂಹಲವುತ್ಪನ್ನವಾಗಿತ್ತು.

"ಮುಂದೇನಾಯಿತು?"

"ನೋಡಿರಿ ಗಿರಿಜಕ್ಕ. ಚೇಷ್ಟೆಗಾಗಿ ಕೂಡಾ ನೀವು ಯಾರ ಮುಂದೂ ಈ ಸಂಗತಿ ಎತ್ತಬಾರದು. ಹಾಗಿದ್ದರೆ ಮಾತ್ರ ಹೇಳುತೀನಿ."

"ಇಲ್ಲ. ಹೇಳಿರಿ."

"ನನ್ನಾಣೆಗೂ?"

"ನಿಮ್ಮಾಣೆಗೂ."

"ಹೂಂ. ಈಗ ಸಮಾಧಾನವಾಯ್ತು ನನಗೆ. ಮುಂದೆ ಏನಾಯಿತೆಂದಿರಿ....ದೀಪ ಆರಿ ಥೇಟರಿನಲ್ಲಿ ಕತ್ತಲಾಗುತ್ತಲೂ ಆ ಹುಡುಗ ಮೆಲ್ಲಗೆ ನನ್ನತ್ತ ಕೈ ಹಾಕಿದ. ಫಳಿಯ ಮೇಲಿಂದ ಹಾದು ಅವನ ಕೈ ನನ್ನ ಹೆಗಲಿಗೆ ಹತ್ತಿತು. ನಾನು ಸ್ವಲ್ಪ ದೂರ ಸರಿದು ಕೂತುಕೊಂಡೆ. ಅವನೇನು ತನ್ನ ಕೈ ತೆಗೆದುಕೊಳ್ಳಲಿಲ್ಲ. ಚಿತ್ರಕ್ಕಾರಂಭವಾಯಿತು. ನಾನು ಸಿನಿಮಾ ನೋಡು

ವದರಲ್ಲಿ ತೊಡಗಿದ್ದ ಹಾಗೇ ಅವ ಮತ್ತೆ ಕೈ ಸರಿಸಿದ. ನನಗೆ ಏನು ಮಾಡುವ ದಕ್ಕೂ ತಿಳಿಯಲಿಲ್ಲ. ಕೂಗಿ ಗದ್ದಲ ಮಾಡಿದರೆ ನನಗೇ ಅವಮಾನ ಅಲ್ಲೇನು? ನಾನು ಹೆಚ್ಚುದೂರ ಸರಿಯುವಂತಿರಲಿಲ್ಲ. ಸರಿಯಲು ಜಾಗವೂ ಇರಲಿಲ್ಲ. ಅವನೋ ಕೈ ಚಾಚುತ್ತಲೇ ಇದ್ದ, ಹಾಗೇ. ಆ ವೇಳೆಯಲ್ಲಿ ನೀವೇ ನನ್ನ ಬದಲು ಅಲ್ಲಿದ್ದರೆ ಏನು ಮಾಡುತ್ತಿದ್ದಿರಿ?"

"ಏನು ಮಾಡುತಿದ್ದೆನೋ! ನೀವೇನು ಮಾಡಿದಿರಿ ಅನ್ನುವದನ್ನ ಮೊದಲು ಹೇಳಿರಿ."

"ನಿಮ್ಮ ಕೈ ಸರಿಸಿಕೊಳ್ತೀರೊ ಇಲ್ಲಾ ಕೂಗಲೋ ಅಂತ, ಅವನಿಗಷ್ಟೇ ಕೇಳಿಸುವಂತೆ ದಬಾಯಿಸಿದೆ."

"ಅಂಜಿರಬೇಕಲ್ಲ ಅವ?"

"ಅಂಜಬಹುದೆಂತ ನನಗೂ ಅನಿಸಿತ್ತು. ಆದರೆ ಅವನೂ ಬಹಳ ಧೈರ್ಯಸ್ಥನಿದ್ದಂತಿತ್ತು – ಕೈಯನ್ನು ತೆಗೆಯಲಿಲ್ಲ – ನನಗೆ ಎಂಥಾ ಉತ್ತರ ಕೊಟ್ಟ ಅಂತೀರಿ...." ಎಂದು ಹೇಳಿ ಮತ್ತೆ ನಗತೊಡಗಿದಳು ಸುಶೀಲಾ.

"ಏನು? ಏನೆಂದ ಅವ?"

"ಅಂದ: 'ನಾನೇನು ಮಾಡಲಿ? ನಿಮ್ಮನ್ನು ನೋಡುತ್ತಲೂ ನಾನು ಹುಚ್ಚನಂತಾಗಿದ್ದೀನಿ.' ಅಲ್ಲರೀ, ಅದೆಷ್ಟು ದಿಟ್ಟತನ ಅಂತೀರಿ ಅವನದು. ಗುರುತಿಲ್ಲ, ಪರಿಚಯ ಇಲ್ಲ. ಹೀಗೆಲ್ಲಾ ಆಡಿಬಿಟ್ಟ...."

"ನೀವೇನು ಹೇಳಿದಿರಿ? ನಿಮಗೂ ಸಂತೋಷವಾಗಿರಬೇಕಲ್ಲ ಆ ಮಾತು ಕೇಳಿ?"

"ಎಲ್ಲಿಯ ಸಂತೋಷರಿ! ಎದ್ದು, ಅವನ ಕಪಾಳಿಗೆ ಹೊಡೆಯುವಷ್ಟು ಸಿಟ್ಟು ಬಂದಿತ್ತು. ಆದರೆ, ನಾವು ಹೆಂಗಸರು, ಅವಮಾನವಾಗುವದು ನಮಗೇ ಅಂತ ವಿಚಾರ ಬಂದು ಸಿಟ್ಟು ತಡಕೊಳ್ಳ ಬೇಕಾಯಿತು."

ಆ ಮಾತನ್ನು ನಂಬಲಾಗಲಿಲ್ಲ. ಸುಶೀಲೆ ಸುಳ್ಳು ಹೇಳುತ್ತಿದ್ದುದು ಸ್ಪಷ್ಟವಾಗಿತ್ತು. ಆ ಹುಡುಗನ ಕೈ ಅವಳ ಭುಜವನ್ನು ಮುಟ್ಟಿದಾಗ ಅವಳಿಗೂ ರೋಮಾಂಚವಾಗಿರಬೇಕು. ಅವನ ಕೈಗೆ ಅವಳು ತನ್ನ ಕೈಯನ್ನು ಕೊಟ್ಟಿರ

ಬೇಕು. ಅವನು ಅದನ್ನು ಹಿಡಿದು ಅದುಮಿರಬೇಕು. ಕತ್ತಲಲ್ಲಿ ಯಾರಿಗೂ ಏನೂ ತಿಳಿಯುವಂತಿರಲಿಲ್ಲವಲ್ಲ. ಅವಳ ಮುಖವನ್ನು ಹತ್ತಿರಕ್ಕೆಳೆದುಕೊಂಡು ಅವನು ಅವಳನ್ನು ಚುಂಬಿಸಿದ್ದರೂ ಇರಬಹುದು. ನನಗೆ ತಿಳಿಯದೇ ಇಂಥ ವಿಷಯವೆಲ್ಲ? ಕಳ್ಳಿ! ನನ್ನನ್ನು ಮೋಸಗೊಳಿಸಲು ಯತ್ನಿಸುತ್ತಿದಾಳೆ! ನಾನೇನು ಚಿಕ್ಕ ಕೂಸೆಂದು ಭಾವಿಸಿರುವಳೇನೊ....ಇಂಥ ಸಂದರ್ಭದಲ್ಲಿ ಏನಾಗುವುದೆಂಬುದು ನನಗೇನು ಗೊತ್ತಿಲ್ಲವೆ?

ಸುಶೀಲೆ ಮುಂದುವರಿಸಿದ್ದಳು :

" ಹಾಗೆ ಹೇಳಿದವನೇ ಅವ ಒಂದು ನೋಟು ನನ್ನ ಕೈಗೆ ಹಾಕಿದ. ಐದು ರೂಪಾಯಿ ನೋಟಿನ ಹಾಗೆ ಕಾಣುತ್ತಿತ್ತು. ಏನು ಮಾಡಬೇಕೆಂದು ತಿಳಿಯದೆ ಸುಮ್ಮನೇ ಕೂತುಕೊಂಡಿದ್ದೆ. ಅವನು ಮಾತ್ರ ಸುಮ್ಮನಾಗಲಿಲ್ಲ. 'ನಿಮ್ಮ ಹೆಸರೇನ್ರೀ?' ಎಂದು ಕೇಳಿಯೇಬಿಟ್ಟ...."

" ಹೇಳಿದಿರಾ?" ಅವಳು ಹೇಳಿರಬೇಕೆಂದೇ ನನಗೆನ್ನಿಸುತ್ತಿತ್ತು.

" ಹ್ಯಾಗಾದರೂ ಹೇಳುವದು? 'ನಿಮಗ್ಯಾಕೆ ಬೇಕು ಅದೆಲ್ಲಾ? ಬಾಯಿ ಮುಚ್ಕೊತೀರೋ ಇಲ್ಲೋ' ಅಂತ ಗದರಿಸಿದೆ. ಅವ ನಿರ್ಲಜ್ಜ, ಪಿಸಿ ಪಿಸೀ ಅಂತ ನಕ್ಕ. 'ನೀವು ಹೆಸರು ಹೇಳದಿದ್ದರೆ ನಾನೇನು ಬಿಡುವದಿಲ್ಲ' ಅಂದವನೇ ಮತ್ತೆ ನನ್ನ ಕೈ ಹಿಡಿದ. ನಾನು ಕೊಸರಿಕೊಳ್ಳುತ್ತಿದ್ದ ಹಾಗೇ ಫಿಲಂ ಕತ್ತರಿಸಿ ಹೋಗಿ ಥೇಟರಿನಲ್ಲಿ ಲೈಟು ಹತ್ತಿಕೊಂಡಿತು. ನಾನು ಪಾರಾದೆ. ಅವ ಥಟ್ಟನೆ ತನ್ನ ಕೈ ಅತ್ತ ತೆಗೆದುಕೊಂಡ."

" ಮತ್ತೆ ಲೈಟು ಆರಿದ ಬಳಿಕ?"

" ನಾನಲ್ಲಿ ಕೂತಿದ್ದರಲ್ಲವೇನು? ಆಗಲೇ ಎದ್ದು ಬೇರೆ ಕಡೆ ಹೋಗಿ ಕೂತುಬಿಟ್ಟೆ."

ಅದೂ ಸುಳ್ಳೆಂಬುದು ಸ್ಪಷ್ಟವಾಗಿತ್ತು.

" ಆ ನೋಟು ಏನ್ಮಾಡಿದಿರಿ?"

" ಬೆಳಕಿನಲ್ಲಿ ಅದನ್ನವನಿಗೆ ತಿರುಗಿ ಕೊಡುವದಾದರೂ ಹ್ಯಾಗೆ? ಇಟ್ಕೊಂಡು ಬಿಟ್ಟೆ, ಆಯ್ತು."

"ಸಿನಿಮಾ ಬಿಟ್ಟ ಬಳಿಕ ಅವ ನಿಮ್ಮನ್ನು ಮತ್ತೆ ಮಾತಾಡಿಸಿದನೇನು?"

"ಹೂಂ. ಮನೆಯತನಕ ಹಿಂಬಾಲಿಸಿಕೊಂಡು ಬಂದಿದ್ದ. ನಾನು ಕಡೆಗೂ ಅವನ ಸಂಗಡ ಮಾತಾಡಲಿಲ್ಲ. ಫಜೀತಿಯಾಗಿ ಹೊರಟುಹೋದ."

"ಆಗ್ವಾಗ ವೇಳೆ ಎಷ್ಟಾಗಿತ್ತು ಸುಶೀಲಾ?"

"ವೇಳೆ? ಒಂಭತ್ತಾಗಿತ್ತು. ಯಾಕೆ?"

"ಯಾಕೂ ಇಲ್ಲ. ಸುಮ್ಮನೆ ಕೇಳಿದೆ," ಎಂದಿಷ್ಟೆ ನುಡಿದು ನಾನು ಮಾರ್ಮಿಕವಾದ ನಗು ಬೀರಿದೆ.

"ಅರೆ! ಏನೋ ಇರಬೇಕು ನಿಮ್ಮ ಮನಸಿನೊಳಗೆ. ಬಚ್ಚಿಟ್ಟು ಕೊಳ್ಳುತ್ತಿದೀರಿ!" ಎಂದಳಾಕೆ.

"ಏನಿಲ್ಲ ಸುಶೀಲಾ, ಏನಿಲ್ಲ."

"ಊಹೂಂ. ಏನೋ ಅದೆ. ಏನೋ ಅದೆ. ನೀವು ಹೇಳಲಿಕ್ಕೇ ಬೇಕು," ಎಂದು ಅವಳು ಹಟ ಹಿಡಿದಳು.

"ಹೇಳಲೇ? ನೀವು ಸಿಟ್ಟಾಗುವದಿಲ್ಲ?"

"ಸಿಟ್ಟ್ಯಾಕೆ? ಹೇಳಿರಿ."

"ನೀವು ಅವನ ಸಂಗಡ ಮಾತೇ ಆಡಲಿಲ್ಲ ಅನ್ನುವದನ್ನ ನಾನೇನು ನಂಬುವದಿಲ್ಲ...."

"ಅಂದರೆ? ನಾನು ಅವನಿಗೆ ಹುರುಪು ಕೊಟ್ಟೆನಂತ ಅನ್ನುತ್ತೀರಾ?"

"ಹಾಗೇನೂ ಇಲ್ಲ. ಆದರೂ ಅವತ್ತು, ನೀವು ಆ ಜಾಗ ಬಿಟ್ಟು ಬೇರೆ ಕಡೆ ಹೋಗಿ ಕೂತದ್ದು ಮಾತ್ರ ನಂಬಲಾಗುವದಿಲ್ಲವ್ವ. ಸಿನಿಮಾ ಬಿಡುವ ವರೆಗೂ ಅಲ್ಲೇ ಕೂತಿರಬೇಕು ನೀವು. ನನಗಂತೂ ಏನೂ ಸಂಶಯವಿಲ್ಲ."

"ಬಿಡಿ ಬಿಡಿರೀ. ನೀವು ನನ್ನ ಚ್ಯಾಷ್ಟಿ ಮಾಡುತೀರಿ," ಎಂದು ನುಡಿದವಳೇ ಸುಶೀಲಾ ಎದ್ದು ಮನೆಗೋಡಿದಳು.

ಸಿನಿಮಾ ಥಿಯೇಟರಿನಲ್ಲಿ ಅಂಥ ಘಟನೆಗಳು ನಡೆಯುವ ಸಂಗತಿ ತಿಳಿಯುತ್ತಲೂ ನನ್ನ ಮನಸ್ಸು ಅತ್ತ ಓಡತೊಡಗಿತು. ಕೊಂಚವೂ ಶ್ರಮವಿಲ್ಲದೆ ಒಂದೇ ದಿನ ಐದು ರೂಪಾಯಿ ಸಿಗುವಂತಿದ್ದರೆ ಯಾಕೆ ಬಿಡಬೇಕು? ತಿಂಗಳೆಲ್ಲ

ದುಡಿದರೂ ಅವರಿಗೆ ಸಿಕ್ಕುವುದು ಹದಿನೈದು ರೂಪಾಯಿ ಅಷ್ಟೆ. ಈ ಹದಿನೈದು ರೂಪಾಯಿಗಳನ್ನು ನಾನು ಮೂರೇ ಮೂರು ದಿನಗಳಲ್ಲಿ ಅತ್ಯಂತ ಸುಲಭವಾಗಿ ಗಳಿಸಬಹುದಲ್ಲ? ನಾನೂ ಸಿರಿವಂತಳಾಗಬೇಕೆಂಬ ಆಸೆಯಂತೂ ಬಲವತ್ತರ ವಾಗಿತ್ತು. ಅವರ ಸಂಬಳದಲ್ಲಿ ಹಣ ಉಳಿಸಿ ಸಿರಿವಂತಳಾಗುವುದು ಈ ಜನ್ಮ ದಲ್ಲಂತೂ ಸಾಧ್ಯವಿಲ್ಲ. ಮುಂದಿನ ಜನ್ಮದ ವಿಚಾರ ನನಗೆ ಬೇಕಿಲ್ಲ. ಈ ಜನ್ಮ ಕಳೆಯುವವರೆಗೆ ಸುಖಪಟ್ಟರೆ ಸಾಕು ನನಗೆ. ಸತ್ತ ಮೇಲೆ ಏನೋ ಹೇಗೋ ಯಾರು ಕಂಡವರು?

"ನನ್ನ ಬಿಟ್ಟು ಒಬ್ಬರೇ ಹೋಗಬೇಕೇನ್ರೀ ನೀವು ಸುಶೀಲಾ, ಸಿನಿಮಾಕ್ಕೆ?" ಎಂದು ಒಂದು ದಿನ ಅವಳ ಬಳಿ ಮಾತು ತೆಗೆದೆ.

"ಅದಕ್ಕೇನ್ರೀ? ನೀವೂ ಬರ್ರಿ ಹೋಗೋಣ," ಎಂದಳಾಕೆ. "ನಿಮ್ಮ ಯಜಮಾನ್ರು ಸಿಟ್ಟಾಗುತಾರೋ ಏನೊ."

"ಇಲ್ಲ. ಅವರು ಹಾಗೆಲ್ಲಾ ಸಿಟ್ಟು ಮಾಡಿಕೊಳ್ಳುವವರಲ್ಲ. ಅದಲ್ಲದೆ ನಾನು ಅವರನ್ನ ಕೇಳಿಯೇ ಬಂದಿರುತೀನಲ್ಲ?"

"ಹಾಗಿದ್ದರೇನು ಚಿಂತೆ? ಇಂದೇ ನಡೀರಿ, ಹೋಗೋಣ."

"ನೀವೆಷ್ಟು ಸಲ ಸಿನಿಮಾಕ್ಕೆ ಹೋದರೂ ನಿಮ್ಮ ತಂದೆಯವರು ಏನೂ ಅನ್ನುವದಿಲ್ಲವೇನ್ರೀ?"

"ಇಲ್ಲರೀ. ಅವರು ಬಹಳ ಸಮಾಧಾನದ ಸ್ವಭಾವದವರು. ಇದುವರೆಗೂ ಒಂದಿನ ಕೂಡಾ ನನ್ನನ್ನು ಗದರಿಸಿಲ್ಲ ಅವರು. ನಾನು ಸಣ್ಣಾಕೆಯಿದ್ದಂದಿನಿಂದ ನನ್ನ ಮ್ಯಾಲ ಬಹಳ ಪ್ರೀತಿ ಅವರಿಗೆ. ನಾನು ಕೇಳಿದ ಸಾಮಾನು ತಂದು ಕೊಡ್ತಾರೆ. ಯಾತಕ್ಕೂ ಬೇಡ ಅನ್ನುವದಿಲ್ಲ...."

ನನಗೂ ನನ್ನ ತಂದೆಯ ನೆನಪಾಗಿ ಎದೆ ತುಂಬಿ ಬಂತು.

"ನಮ್ಮಪ್ಪ ಕೂಡಾ ಹೀಗೇ ಇದಾನೆ. ಅವಗೂ ನಾನೆಂದರೆ ಬಹಳ ಪ್ರೀತಿ."

"ಹೀಗೇನು? ಅವರ್‍ಯಾಕೆ ಬರುವದಿಲ್ಲ ಇಲ್ಲಿಗೆ?"

"ಬರಬಹುದು ಹಬ್ಬಕ್ಕೆ."

ಆ ರಾತ್ರಿ ಅವರು ಪ್ರಸನ್ನರಾಗಿದ್ದ ಸಮಯ ಸಾಧಿಸಿ ಸಿನಿಮಾದ ಪ್ರಸ್ತಾಪ ವೆತ್ತಿದೆ ಅವರು ನನ್ನ ಕೆನ್ನೆ ಚಿವುಟಿ ಕೇಳಿದರು :

"ಪಟ್ಟಣಕ್ಕೆ ಬಂದು ಪಟ್ಟಣದ ಹುಡುಗಿ ಆಗಬೇಕಂತ ಮಾಡೀ ಯೇನೇ ?"

"ಮತ್ತೆ ! ಇಲ್ಲಿ ಬಂದು ಇಷ್ಟು ದಿನಾ ಆದರೂ ಒಮ್ಮೆ ಕೂಡಾ ನನ್ನ ಸಿನಿಮಾಕ್ಕೆ ಕರಕೊಂಡು ಹೋಗಲಿಲ್ಲವಲ್ಲ ನೀವು !"

"ನನಗೆ ವೇಳೆ ಎಲ್ಲಿರುತದೆ ಗಿರಿಜಾ ? ನೀನು ಹೋಗಿ ಬಾ. ನಾನೇನು ಬೇಡನ್ನುವದಿಲ್ಲ."

"ಸುಶೀಲಾ ಹೋಗುತ್ತಿರುತಾಳ ಆಗಾಗ."

"ಆಯಿತಲ್ಲ. ಅವಳ ಸಂಗಡ ಹೋಗಿ ಬಾ. ನಿನಗೂ ಮನೆಯಲ್ಲಿ ಒಬ್ಬಳೇ ಆಗಿ ಬೇಸರು ಬರ್‍ತಿರಬೇಕು, ಪಾಪ !"

ನನ್ನ ಬಗೆಗಿದ್ದ ಪ್ರೀತಿಯಿಂದಲೇ ಅವರು ಆ ಮಾತು ಆಡಿದ್ದರು. ಇವರೆಷ್ಟು ಒಳ್ಳೆಯವರು ! ಎಂದು ಒಂದು ಕ್ಷಣ ನನಗೆನ್ನಿಸದಿರಲಿಲ್ಲ. ಅವರು ನನ್ನನ್ನು ಪ್ರೀತಿಸುವ ಹಾಗೆ ನಾನೂ ಅವರನ್ನು ಪ್ರೀತಿಸುವುದು ಅವಶ್ಯವೆಂದೂ ನನಗೆನ್ನಿಸದಿರಲಿಲ್ಲ. ಆದರೆ, ಮರುಕ್ಷಣವೆ ಆ ವಿಚಾರ ಮಾಯವಾಯಿತು. ಎತ್ತ ಮಾಯವಾಯಿತು ? ತಿಳಿಯದು. ಅಂತೂ, ಅವರನ್ನು ಹೃತ್ಪೂರ್ವಕವಾಗಿ ಪ್ರೀತಿಸುವುದು ಅಸಾಧ್ಯವೆಂದೇ ನನಗೆ ಮನವರಿಕೆಯಾಯಿತು. ಮದುವೆಯಾದ ಹೆಂಡತಿಯಾದುದರಿಂದ ಪ್ರೀತಿಯ ನಟನೆ ಮಾಡಬೇಕಿದ್ದಿತಷ್ಟೆ. "ಇವರು ನಿನಗೆ ತಕ್ಕವರಲ್ಲ, ತಕ್ಕವರಲ್ಲ. ನಿನ್ನ ಯೋಗ್ಯತೆಗೆ ಅನುರೂಪನಾದ ಪ್ರಿಯಕರ ಎಲ್ಲೋ ಒಂದು ಕಡೆ ಇದ್ದಾನೆ. ಅವನನ್ನು ಹುಡುಕು," ಎಂದು ಯಾರೋ ಕಿವಿಗಳಲ್ಲಿ ಪಿಸುಗುಟ್ಟಿದಂತಾಯಿತು.

ಎಲ್ಲಿ ಹುಡುಕುವುದು ನನ್ನ ಆ ಪ್ರಿಯಕರನನ್ನು ?
ಸಿನಿಮಾ ಥಿಯೇಟರಿನಲ್ಲೇ ?
ಅಕ್ಕಪಕ್ಕದ ಮನೆಗಳಲ್ಲೇ ?
ಪೇಟೆಯಲ್ಲೇ ? ಅಂಗಡಿಗಳಲ್ಲೇ ?
ಎಲ್ಲಿ ? ಎಲ್ಲಿ ?

## ೧೫

ನಾನು ಬಹಳ ದಿನ ಕಾಯಬೇಕಾಗಲಿಲ್ಲ ನನ್ನ ಪ್ರಿಯಕರನಿಗಾಗಿ.

ನಾನು ಅವನಿಗಾಗಿ ಕಾದುಕೊಂಡಿದ್ದಂತೆ ಅವನೂ ನನಗಾಗಿ ಕಾದುಕೊಂಡಿದ್ದ ಹಾಗಿತ್ತು.

ಅವನಾರು ಎಂಬುದನ್ನು ನೀನೂ ಬಲ್ಲೆಯಲ್ಲವೆ? ಎಷ್ಟೋ ಸಲ ಅವನು ನಾನು ಇಬ್ಬರೂ ಸೇರಿಕೊಂಡೇ ನಿನ್ನನ್ನು ಮಾತನಾಡಿಸಿದ್ದುಂಟು. ನಿನ್ನ ಮುಖದಲ್ಲಿ ಮುಖವಿಟ್ಟು ನಕ್ಕು ನಲಿದುದುಂಟು.

ಅವನನ್ನಾದರೂ ನಾನು ಮನಃಪೂರ್ವಕವಾಗಿ ಮೆಚ್ಚಿಕೊಂಡೆನೇ? ಪ್ರಿಯಕರನನ್ನು ಪ್ರೀತಿಸುವ ಹಾಗೆ ನಾನು ಅವನನ್ನು ಪ್ರೀತಿಸಿದೆನೇ? ಅವನು ನನ್ನ 'ಪ್ರಿಯಕರ' ಎಂದಾದರೂ ನಾನು ಹೇಳಬಲ್ಲೆನೇ?

ಅವನಲ್ಲಿ ನಾನು ಮೆಚ್ಚಿದುದು ಏನನ್ನು? ಅವನ ರೂಪವನ್ನೇ? ಬಣ್ಣವನ್ನೇ? ಮೈಕಟ್ಟನ್ನೇ? ಮಾತುಗಾರಿಕೆಯನ್ನೇ? ನನ್ನವರಲ್ಲಿ ಇಲ್ಲದ ಯಾವ ಗುಣವಿಶೇಷಗಳು ಅವನಲ್ಲಿದ್ದುವೆಂದು ನಾನು ಮೆಚ್ಚಿದ್ದು ಅವನನ್ನು?

ಅವನ ಹಣಕ್ಕಾಗಿ, ಔದಾರ್ಯಕ್ಕಾಗಿ ನಾನು ಅವನನ್ನು ಪ್ರೀತಿಸಿದೆನೇ?

ನಾನು ಪ್ರೀತಿಸಿದುದು ಅವನ ಹಣವನ್ನೋ? ಅವನನ್ನೊ?

ಅವನ ಹಣದ ಮೇಲೆ ನಾನು ಕಣ್ಣಿರಿಸಿದ್ದೆ. ನಿಜ. ನಾನೂ ಸಿರಿವಂತಳಾಗುವ ಬಯಕೆಯಿಂದಲೇ ಅವನ ಸ್ನೇಹ ಕಟ್ಟಿಕೊಂಡೆ. ಅದಕ್ಕಿಂತ ಹೆಚ್ಚಿನ ಯಾವ ಸಂಬಂಧವೂ ಅವನೊಡನೆ ಇರಲಿಲ್ಲವೋ? ಅವನ ಸಹವಾಸದಲ್ಲಿ ನನಗೆ ಯಾವ ತೃಪ್ತಿಯೂ ಇರಲಿಲ್ಲವೋ?

ನನ್ನ ಮನಸ್ಸನ್ನೇ ನಾನು ತಿಳಿದುಕೊಳ್ಳಲಾರದವಳಾಗಿದ್ದೇನೆ. ಏನಾಗಿದೆ ನನ್ನ ಮನಸ್ಸಿಗೆ? ಏನಾಗಿದೆ ನನ್ನ ಬುದ್ಧಿಗೆ? ಇದೆಲ್ಲಿಯ ಮಂಕು ಬಡಿದು ಕೊಂಡಿತಪ್ಪಾ ನನಗೆ!

ಕಾಶಪ್ಪನೊಡನೆ ನನಗಿದ್ದ ಸಂಬಂಧ ಯಾವ ಬಗೆಯದು?

ಕಾಶಪ್ಪ....

ಎಂಥ ವಿಚಿತ್ರ ಹೆಸರು....

ಆ ಹೆಸರು ಕೇಳಿದಾಗಲೆಲ್ಲ ನನಗೆ ನಗು ಬರದಿರುತ್ತಿರಲಿಲ್ಲ. ಇಂಥ ನೀರಸ ಹೆಸರಿನವನೊಡನೆ ನಾನು ಸಂಬಂಧ ಬೆಳೆಸಿದುದಾದರೂ ಹೇಗೆ? ನಾನು ಸುಂದರಿ. ನಾನು ಸೌಂದರ್ಯ ಪ್ರೇಮಿ. ಸುಂದರ ವಸ್ತುಗಳನ್ನು ಮಾತ್ರವಲ್ಲ, ಸುಂದರ ಹೆಸರುಗಳನ್ನೂ ಪ್ರೀತಿಸುವಾಕೆ ನಾನು. ಸುಶೀಲೆಯೊಡನೆ ನಾನು ಅಷ್ಟು ಸ್ನೇಹ ಬೆಳಸಲು ಅವಳ ಹೆಸರು ಸುಂದರವಾಗಿದ್ದುದೂ ಒಂದು ಕಾರಣ ವಿದ್ದಿರಬೇಕೆಂದು ಈಗ ಅನ್ನಿಸುತ್ತಿದೆ ನನಗೆ.

ನನ್ನಂಥವಳು ಕಾಶಪ್ಪನನ್ನು ಕಟ್ಟಿಕೊಂಡದ್ದು ಒಂದು ಅದ್ಭುತ ಸಂಗತಿಯೇ ಅಲ್ಲವೆ?

ಆದರೆ, ಇಂಥ 'ಅದ್ಭುತ'ಗಳೆಷ್ಟೋ ನಡೆಯುತ್ತವೆ ಈ ಪ್ರಪಂಚದಲ್ಲಿ – ನಿತ್ಯವೂ.

ನಿಜವಾಗಿ ಅಂಥ 'ಅದ್ಭುತ ಘಟನೆ'ಗಳೂ ಅಲ್ಲ ಇವು. ಎಲ್ಲ ಕಡೆಗಳಲ್ಲೂ ನಡೆಯುವ ಇಂಥ ಘಟನೆಗಳನ್ನು 'ಸಾಮಾನ್ಯ ಘಟನೆ'ಗಳೆಂದೇ ಕರೆಯ ಬೇಕಾಗುವುದು.

ಆದರೆ, ಇಂದಿನ ಜನ ಬಲು ಡಾಂಭಿಕ ಜನ. ಕಣ್ಣೆದುರಿಗೇ ಇಂಥ ಅನೇಕ ಘಟನೆಗಳು ನಡೆಯುತ್ತಿದ್ದಾಗಲೂ ಅವರು ಅವುಗಳನ್ನು ಕಡೆಗಣಿಸು ತ್ತಾರೆ. ತಮ್ಮ ಮನೆಯಲ್ಲೇ ಇಂಥ ಘಟನೆಗಳು ನಡೆದರೂ ಅವುಗಳನ್ನು ಬಚ್ಚಿಟ್ಟು ಸಂಭಾವಿತತನದ ಸೋಗು ಹಾಕುತ್ತಾರೆ.

ಆದರೆ, ನಾನೆಲ್ಲ ಬಲ್ಲೆ ಇವರ ಸಂಭಾವಿತತನವನ್ನು! ನನ್ನೆದುರಿಗೆ ನಡೆಯ ಲಾರದು ಇವರ ಸೋಗು. -

ಇಷ್ಟು ವರ್ಷಗಳವರೆಗೆ ನಾನೂ ಸೋಗು ಹಾಕಿರಲಿಲ್ಲವೆ? ನಾನೊಬ್ಬಳು ಮಹಾ ಪತಿವ್ರತೆಯೆಂದೇ ನನ್ನ ಗಂಡ ನಂಬಿಕೊಂಡಿರಲಿಲ್ಲವೆ?'

ಸುಳ್ಳು ಒಂದಿಲ್ಲೊಂದು ದಿನ ಬಯಲಿಗೆ ಬಂದೇ ಬರುವುದೆಂದು ಹಿರಿಯರು ಹೇಳಿದ ಮಾತು ಸರಿಯಾದುದು. ಮೊನ್ನೆ ಹೊರಬಿದ್ದಿತಲ್ಲ ನನ್ನ ಸುಳ್ಳು!

"ಯಾರಿಗೂ ಗೊತ್ತಾಗುವದಿಲ್ಲ. ನೀನೇನು ಅಂಜಬೇಡ," ಎಂದು ಎಷ್ಟು ಬಾರಿ ನನಗೆ ಭರವಸೆಯಿತ್ತಿರಲಿಲ್ಲ ಕಾಶಪ್ಪ....

ನಮ್ಮವರು ಬಲು ಮರುಳರು; ಅವರನ್ನು ಸುಲಭವಾಗಿ ಮೋಸಗೊಳಿಸ ಬಹುದು ಎಂದು ನನಗೂ ಅನ್ನಿಸಿತ್ತು.

ನಾನು ಭಾವಿಸಿದ್ದ ಹಾಗೆ ಅವರು ಪೂರಾ ಮರುಳರೇನೂ ಆಗಿರಲಿಲ್ಲ. ನನ್ನ ಶೀಲವನ್ನು ಮಾತ್ರ ಅವರು ಶಂಕಿಸಿರಲಿಲ್ಲ, ಅಷ್ಟೆ.

ಶೀಲ....ಪಾವಿತ್ರ್ಯ....ಪಾತಿವೃತ್ಯ....

ಹ ಹ ಹ ಹಾ ಹಾ....

ಯಾವ ಬೃಹಸ್ಪತಿ ಹುಟ್ಟಿಹಾಕಿದನೋ ಈ ಶಬ್ದಗಳನ್ನು!

ಹೆಣ್ಣನ್ನು ಸೃಷ್ಟಿಸಿದಾಗಲೇ ಬ್ರಹ್ಮ ಈ ಶಬ್ದಗಳನ್ನು ಸೃಷ್ಟಿಸಿದನೋ ಏನೊ....

ಶೀಲ....ಕಾಶಪ್ಪ....

## ೧೬

ನಮ್ಮ ಮನೆಯ ಪಕ್ಕದ ಮನೆಯೇ ಕಾಶಪ್ಪನದು. ನಮ್ಮ ಮನೆಗಿಂತ ಅದು ದೊಡ್ಡದು. ಮೇಲೆ ಅಟ್ಟವೂ ಇತ್ತು. ವಿದ್ಯುದ್ದೀಪಗಳೂ ಇದ್ದುವು. ಅವರು ಬಹಳ ಸಾಹುಕಾರರೆಂದು ನಾನು ಕೇಳಿದ್ದೆ. ಪೇಟೆಯಲ್ಲಿ ಅವರದೊಂದು ಬಟ್ಟೆಯಂಗಡಿಯಿದ್ದ ಸಂಗತಿಯನ್ನು ಸುಶೀಲಾ ಒಮ್ಮೆ ಹೇಳಿದ್ದಳು. ಕಾಶಪ್ಪನ ಹೆಂಡತಿ ಈರವ್ವ ಸ್ವಲ್ಪ 'ದಿಮಾಕಿ'ನವಳು. ನಮ್ಮಂಥ ಬಡವರೊಡನೆ ಅವಳು ಬೆರೆಯುತ್ತಿರಲಿಲ್ಲ. ಓಣಿಯ ಹೆಂಗಸರೆಲ್ಲ ಸೇರುವುದು ಸಾಮಾನ್ಯವಾಗಿ ಸಾರ್ವಜನಿಕ ನಳದ ಹತ್ತಿರ. ಈರವ್ವ ಅಲ್ಲಿಗೆ ಬರಬೇಕಾದ ಪ್ರಮೇಯವೇ ಇರಲಿಲ್ಲ. ಅವರ ಮನೆಯಲ್ಲೇ ನಳವಿತ್ತು.

"ಈರವ್ವನ ಗುರುತಿಲ್ಲವೇನು ನಿಮಗೆ?" ಎಂದು ನಾನೊಮ್ಮೆ ಸುಶೀಲೆಯನ್ನು ಕೇಳಿದಾಗ ಅವಳು ಮೂಗು ಸೊಟ್ಟಗೆ ಮಾಡಿ ಹೇಳಿದ್ದಳು:

"ಅವಳ ಗುರುತು ತಗೊಂಡೇನು ಮಾಡೂದು ಬಿಡಿರಿ. ಏನೋ ಒಂದು ಅಂಗಡಿಯಿದ್ದಷ್ಟಕ್ಕೆ ತಾನೊಬ್ಬ ರಾಣಿ ಅಂತ ಜಂಬ ಮಾಡ್ತಾಳೆ."

"ಅವರ ಮನೆಯಲ್ಲಿ ಬೇರೆ ಯಾರೂ ಇದ್ದಹಾಗಿಲ್ಲವಲ್ಲ ಸುಶೀಲಾ. ಅವರಿಗಿನ್ನೂ ಮಕ್ಕಳೇ ಆಗಿಲ್ಲವೋ ಏನು?"

"ಇಂಥಾ ಸೊಕ್ಕಿನವರಿಗೆ ದೇವರು ಮಕ್ಕಳನ್ನು ಕೊಟ್ಯಾನೇನ್ರೀ!"

ಈರವ್ವನ ಮನೆಯ ಹಿತ್ತಿಲೂ ನಮ್ಮ ಹಿತ್ತಿಲೂ ಹೊಂದಿಕೊಂಡಿದ್ದುದರಿಂದ ಅನೇಕ ಬಾರಿ ನಾವು ಪರಸ್ಪರರನ್ನು ಸಂಧಿಸುವ ಸಂದರ್ಭ ಬರುತ್ತಿದ್ದುವು.

ಅವಳನ್ನು ಮಾತನಾಡಿಸಬೇಕೆಂದು ನನಗೆ ಎಷ್ಟೋ ಬಾರಿ ಅನ್ನಿಸಿದ್ದಿತಾದರೂ ಅವಳು ಬಿಗಿದ ಮುಖ ಕಂಡು ಸುಮ್ಮನಿದ್ದುಬಿಡುತ್ತಿದ್ದೆ.

ಒಂದು ಸಂಜೆ ನಾನು ಅಡುಗೆ ಮಾಡುತ್ತಾ ಕುಳಿತಿದ್ದಾಗ ಪಕ್ಕದ ಮನೆಯಲ್ಲಿ ಈರವ್ವ ಚಿಟ್ಟನೆ ಚೀರಿದುದು ಕೇಳಿಸಿತು. ಹಾವು ಗೀವು ಕಚ್ಚಿರಲಿಕ್ಕಿಲ್ಲವಷ್ಟೆ, ಎಂದುಕೊಳ್ಳುತ್ತಾ ನಾನು ಎದ್ದು ಹಿತ್ತಿಲ ಬಾಗಿಲಿನಿಂದ ಅವಳ ಮನೆ ಸೇರಿದೆ.

"ಏನಾಯಿತು ಈರವ್ವಕ್ಕ, ಏನಾಯಿತು ?"

ಅಡುಗೆಮನೆಯ ಬಾಗಿಲಲ್ಲಿ ನಿಂತು ಭಯವಿಹ್ವಲ ದೃಷ್ಟಿಯಿಂದ ನನ್ನನ್ನು ನಿಟ್ಟಿಸುತ್ತ ಈರವ್ವ ಹೇಳಿದಳು.

"ಚೇಳು ಕಡೀತವ್ವಾ. ಭಯಂಕರ ನೋವು,"

"ಎಲ್ಲಿ ಕಡೀತು ?"

ಈರವ್ವ ತನ್ನ ಬಲಗೈ ಮುಂದೆ ಮಾಡಿದಳು. ತೋರು ಬೆರಳಿನ ಮೇಲ್ಭಾಗದಲ್ಲಿ ಚೇಳು ಕಚ್ಚಿದ ಗುರುತು ಕಾಣುತ್ತಿತ್ತು.

"ಅಂಜಬ್ಯಾಡ್ರಿ ಈರವ್ವಕ್ಕ. ಇದರಿಂದೇನೂ ಆಗುವದಿಲ್ಲ. ಮನೆಯೊಳಗ ಅರಿಸಿಣ ಐತೇನು ?"

"ಅಲ್ಲಿ ಅದೆ ನೋಡವ್ವಾ ಗಡಿಗೆಯೊಳಗೆ. ಹುಷಾರಿ. ಚೇಳು ಅಲ್ಲೇ ಎಲ್ಲೋ ಇರಬೇಕು. ನಿನ್ನೂ ಕಡಿದೀತು."

ನಾನು ಮನಸ್ಸಿನಲ್ಲೇ ನಗುತ್ತಾ ಅರಿಸಿಣ ತಂದು ಅವಳ ಬೆರಳಿಗೆ ಹಚ್ಚಿ ಅದಕ್ಕೊಂದು ಬಟ್ಟೆ ಬಿಗಿದೆ. ಅನಂತರ ಗಡಿಗೆ ಮಡಕೆಗಳನ್ನು ಶೋಧಿಸಿ, ಆ ಚೇಳನ್ನು ಕಂಡು ಹಿಡಿದು ಒಂದೇಟಿಗೇ ಅದನ್ನು ಯಮಸದನಕ್ಕೆ ಕಳಿಸಿದೆ.

"ನೋವು ಸ್ವಲ್ಪ ಕಮ್ಮಿ ಆತೇನ್ರೀ ಈರವ್ವಕ್ಕಾ ?"

"ಹೂಂ. ಮೊದಲಿನಷ್ಟಿಲ್ಲ ಈಗ. ವೇಳೆಗೆ ಸರಿಯಾಗಿ ನೀನು ಬಂದೆ ಅಂತ ನಾ ಉಳಿದುಕೊಂಡೆ. ಇಲ್ಲದಿದ್ದರೆ...."

"ಇದೇನು ಮಾಡುತದೆ ಬಿಡಿರೀ ಈರವ್ವಕ್ಕಾ. ಚೇಳಿನ ವಿಷ ಏನು ಭಯಂಕರ ಅಲ್ಲ."

“ ಅಯ್ಯೋ. ಯಾರಿಗೆ ಗೊತ್ತವ್ವ....ನಮ್ಮೂರೊಳಗೆ ಚೇಳು ಕಡಿದೇ ಒಬ್ಬರು ಸತ್ತುಹೋಗಿದ್ದರು.”

“ ಹೂಂ. ಆ ಚೇಳು ಬ್ಯಾರೆ. ಅವು ಹಾವಿನ ಮ್ಯಾಲ ಕೂಡುವ ಚೇಳು. ಇದೇನು ಚಿಲ್ಲರೆ ಚೇಳು. ವಿಷ ಆದರೂ ಎಷ್ಟು ಇದರದು....”

“ ನೀನು ಬಂದು ಬಹಳ ಉಪಕಾರ ಮಾಡಿದಿಯವ್ವ. ಇಲ್ಲದಿದ್ದರೆ ನಾನು ಅಂಜಿಕೊಂಡೇ ಸಾಯುತಿದ್ದಿನೋ ಏನೊ.”

“ ಉಪಕಾರ ಏ ನ ದೆ ಬಿಡಿರಿ ಇದರಾಗ. ನೆರೆಹೊರೆ ಮನೆಯವರು ಅಂದವ್ಯಾಲ ಒಬ್ಬರಿಗೊಬ್ಬರು ಆಗಬೇಕಲ್ಲ.”

“ ಹೌದವ್ವಾ. ನೀನು ಹೇಳುವದೂ ಬರಾಬ್ಬರಿ.”

ಅರ್ಧ ಗಂಟೆಯ ಕಾಲ ಅಲ್ಲಿ ಕುಳಿತಿದ್ದು, ಅವಳ ನೋವು ಇಳಿಯುತ್ತಲೂ ಮನೆಗೆ ಹೊರಟೆ.

“ ನಿನಗೇನಾದರೂ ಬೇಕಾದರೆ ಬರುತಾ ಇರವ್ವಾ,” ಎಂದಳು ಈರವ್ವ.

ಸಾರ್ವಜನಿಕ ನಳದ ಹಾಳು ಸಹವಾಸ ತಪ್ಪಿದರೆ ಸಾಕಾಗಿತ್ತು ನನಗೆ. ಆ ನಳದಿಂದ ಒಂದು ಕೊಡ ನೀರು ತರುವುದೆಂದರೆ ಒಂದು ಯುದ್ಧವನ್ನೇ ಗೆದ್ದು ಬಂದಂತಾಗುತ್ತಿತ್ತು. ನಿಮಿಷಕ್ಕೊಂದು ಹನಿಯಂತೆ ನೀರು ಸುರಿಸುವ ಆ ನಳದಿಂದ ನಲವತ್ತು ಐವತ್ತು ಮಂದಿ ಹೆಂಗಸರು ನೀರು ತುಂಬಿಕೊಂಡು ಹೋಗುವುದೆಂದರೇನು ಸಾಮಾನ್ಯ ವಿಷಯವೇ! ದಿನವೂ ತಿಕ್ಕಾಟ, ಹೊಡೆದಾಟಗಳು ತಪ್ಪುತ್ತಿರಲಿಲ್ಲ. ಓಣಿಯ ಹೆಂಗಸರಿಗೆ ಅದೆಲ್ಲವೂ ಅಭ್ಯಾಸವಾದ ಹಾಗಿತ್ತು. ನನಗೆ ಮಾತ್ರ ಆ ಸಂಕಟವೆಂದು ತಪ್ಪುವುದೋ ಎನ್ನಿಸಿತ್ತು. ಅವರ ಹಾಗೆ ಬಯ್ದಾಡುವುದು, ಹೊಡೆದಾಡುವುದು ಎಂದರೆ ನನ್ನ ಮೈ ಮೇಲೆ ಮುಳ್ಳು ಏಳುತ್ತಿತ್ತು. ನಗರಸಭೆಯವರಿಗೆ ತೆರಿಗೆ ತೆತ್ತು ನಾವು ನಮ್ಮ ಮನೆಯಲ್ಲಿ ನಳವಿಟ್ಟುಕೊಳ್ಳುವುದಂತೂ ನಮ್ಮ ಅಳತೆಗೆ ಮೀರಿದ ಮಾತಾಗಿತ್ತು. ಎಂತಲೇ ಈರವ್ವ ನನ್ನ ಮೇಲೆ ಪ್ರಸನ್ನಳಾದುದೊಂದು ಸುದೈವದ ವಿಷಯವೆಂದೇ ನಾನು ಭಾವಿಸಿದೆ. ಅವಳು ಒಪ್ಪಿಕೊಂಡರೆ ದಿನವೂ ಅವಳ ಮನೆಗೇ ಹೋಗಿ ನೀರು

ತುಂಬಿಕೊಂಡು ಬರಬಹುದು. ಮಗ್ಗುಲಿನ ಮನೆಯಾದುದರಿಂದ ಹೆಚ್ಚು ಶ್ರಮವೂ ಆಗುವುದಿಲ್ಲ....

ನಾನು ಆ ವಿಚಾರ ಪ್ರಸ್ತಾಪಿಸುತ್ತಲೂ ಈರವ್ವನೂ ಒಡನೆಯೇ ಒಪ್ಪಿಗೆಯಿತ್ತಳು.

"ಅದರಲ್ಲೇನಂತೆ. ದಿನಾಲೂ ಬಂದು ನಿನಗೆ ಬೇಕಾದಷ್ಟು ನೀರು ತುಂಬಿಕೊಂಡು ಹೋಗವ್ವ."

ಅವಳ ಸ್ನೇಹವನ್ನೊದಗಿಸಿಕೊಟ್ಟುದಕ್ಕಾಗಿ ಆ ಮೃತ ಚೇಳನ್ನು ಮನಸ್ಸಿನಲ್ಲೇ ವಂದಿಸುತ್ತ ಮನೆಗೆ ಬಂದೆ. ಅವಳ ಗಂಡನ ಸ್ನೇಹ ಲಭಿಸುವುದಕ್ಕೂ ಬಹಳ ದಿನ ಬೇಕಾಗಲಿಲ್ಲ.

ನಾನು ನೀರು ತರಲು ಅವರ ಮನೆಗೆ ಹೋದಾಗಲೆಲ್ಲ ಅವನು ನನ್ನನ್ನು ಬಯಕೆಯ ದೃಷ್ಟಿಯಿಂದ ನೋಡುತ್ತಿದ್ದ. ಮೊದಲು ಮೊದಲು ನನಗೆ ತುಂಬಾ ಸಂಕೋಚವೆನ್ನಿಸುತ್ತಿತ್ತು. ಅವನ ದೃಷ್ಟಿಗೆ ದೃಷ್ಟಿ ಕೂಡಿಸುವುದಕ್ಕಾಗುತ್ತಿರಲಿಲ್ಲ. ಆದರೆ, ಅವನ ಮನೆಯಲ್ಲಿನ ವೈಭವವನ್ನು, ದೊಡ್ಡ ದೊಡ್ಡ ಜಮಖಾನಗಳು, ಹಾಸುಗಂಬಳಿಗಳು, ಭಾರೀ ಮಂಚ ಕುರ್ಚಿ ಮೇಜು, ವಿದ್ಯುತ್ತಿನ ಬೀಸಣಿಗೆ, ಗ್ರಾಮಫೋನ್ ಮೊದಲಾದುವುಗಳನ್ನು ನೋಡಿದ ಹಾಗೆಲ್ಲ ನನ್ನ ಮನಸ್ಸು ಅವನೆಡೆಗೆ ಹೊರಳುತ್ತಿದ್ದಿತು. ಈರವ್ವನ ಬದಲು ನಾನೇ ಇವನ ಕೈ ಹಿಡಿದಿದ್ದರೆ ಎಷ್ಟು ಸುಖಿಯಾಗುತ್ತಿದ್ದೆನಲ್ಲ! ಎಂದು ಯೋಚಿಸಿದುದೆಷ್ಟು ಸಲವೊ! ಕಾಶಪ್ಪನ ಕೈ ಬೆರಳುಗಳಲ್ಲಿ ಹೊಳೆಯುವ ಉಂಗುರಗಳನ್ನು, ಈರವ್ವನ ಮೈ ಮೇಲಿನ ಆಭರಣಗಳನ್ನು ನೋಡಿ ನನ್ನ ಕರುಳಿನಲ್ಲಿ ಕಲಮಲವಾಗುತ್ತಿತ್ತು. "ನನಗೂ ಬೇಕು, ಇದೆಲ್ಲವೂ ನನಗೂ ಬೇಕು," ಎಂದು ನನ್ನ ಆತ್ಮ ಬಿಟ್ಟು ಬಿಡದೆ ಕೂಗುತ್ತಿತ್ತು.

ಆ ಮನೆಯಲ್ಲಿ ನನ್ನ ಬಳಕೆ ಹೆಚ್ಚಿದ ಹಾಗೆ ಈರವ್ವ ನಮ್ಮ ಮನೆಗೆ ಬರುವುದೂ ಆರಂಭವಾಯಿತು. ಸುಶೀಲೆಯನ್ನು ಮಾತ್ರ ಅವಳು ಎಂದೂ ಸಲುಗೆಯಿಂದ ಮಾತನಾಡಿಸಲಿಲ್ಲ. ಸುಶೀಲೆಯೂ ಕೂಡ ಈರವ್ವನ ಸ್ನೇಹದ ಬಗೆಗೆ ಅಂಥ ಆಸಕ್ತಿಯನ್ನೆಂದೂ ತೋರಿಸಲಿಲ್ಲ.

ಈ ಮಧ್ಯೆ ನಾನು ಸುಶೀಲಾ ಸೇರಿ ಸಿನೀಮಾಕ್ಕೆ ಹೋಗಿ ಬರುವ ಕ್ರಮ ಕ್ಕಾರಂಭವಾಗಿತ್ತು. ನಾಲ್ಕೈದು ಚಿತ್ರಗಳನ್ನು ನೋಡುತ್ತಲೂ ನನಗೆ ಅವುಗಳ ದೊಂದು ಗೀಳು ಅಂಟಿಕೊಂಡಂತೆಯೇ ಆಯಿತು. ವಾರದಲ್ಲಿ ಎರಡು ದಿನ ವಾದರೂ ಸಿನೀಮಾ ನೋಡದಿದ್ದರೆ ಮನಸ್ಸಿಗೆ ಸೊಗಸೇ ಇರುತ್ತಿರಲಿಲ್ಲ. ಸುಶೀಲೆಗಂತೂ ಸಿನೀಮಾದ ಹುಚ್ಚೇ ಹಿಡಿದುಕೊಂಡಿತ್ತು.

"ಅಪ್ಪ ಒಪ್ಪಿದರೆ ನಾನೂ ಒಬ್ಬ ಸಿನಿಮಾ ನಟಿಯಾದೇನು ಗಿರಿಜವ್ವಾ," ಎನ್ನುವಳು ಆಕೆ.

"ಐ ಬಿಡವ್ವಾ. ಅವರೆಲ್ಲಾದರೂ ಒಪ್ಪಿಯಾರೇ?"

"ಒಪ್ಪುವದಿಲ್ಲ. ಅದರದೇ ಬಂದಿರೂದು ಸಂಕಟ. ಅವ್ವನನ್ನೇನೋ ನಾನು ಒಪ್ಪಿಸಬಹುದು. ಸಿನಿಮಾ ನಟಿ ಅಂದರೆ ಸಂಬಳ ಎಷ್ಟು ಅಂತ ತಿಳಿ ದೀಯಾ ಗಿರಿಜವ್ವ?"

"ನೂರಿನ್ನೂರು ಇರಬಹುದೇನೊ."

"ನೂರಿನ್ನೂರು? ಒಂದು ದಿನಕ್ಕೇ ನೂರಿನ್ನೂರು ಗಳಿಸುತಾರೆ ಅವರು, ಗೊತ್ತಾಯಿತೇ!"

"ದಿವಸಕ್ಕೆ ನೂರಿನ್ನೂರು ಅಂದರೆ ತಿಂಗಳಿಗೆ ಮೂರು ನಾಲ್ಕು ಸಾವಿರ ಆಯ್ತಲ್ಲ ಸುಶೀಲಾ!"

"ಹೌದು. ಅಷ್ಟು, ಅದಕ್ಕಿಂತಾ ಹೆಚ್ಚು ಸಂಬಳ ಹೊಡೀತಾರೆ ಸಿನೀಮಾ ನಟಿಯರು. ನನಗೂ ಅವರಂತೇ ಆಗಬೇಕೆಂತ ಬಹಳ ಆಸೆ. ಆದರೇನು, ಅಪ್ಪ ಅದಕ್ಕೆಲ್ಲ ಒಪ್ಪುವದಿಲ್ಲ."

ಅವಳು ಹಾಗೆ ಹೇಳುತ್ತಿದ್ದಾಗಲೆಲ್ಲ, ನಾನೂ ಏಕೆ ಸಿನಿಮಾ ನಟಿಯಾಗ ಬಾರದೆಂದು ನನಗೂ ಅನ್ನಿಸದಿರುತ್ತಿರಲಿಲ್ಲ. ಸಿನಿಮಾಗಳಲ್ಲಿನ ನಟಿಯರಿಗಿಂತ ನಾನು ಹೆಚ್ಚು ಸುಂದರಿಯಲ್ಲವೆ?

ಸುಶೀಲೆಯ ಹಾಗೆ ನಾನು ಆ ಯೋಚನೆಯನ್ನು ಆಡಿ ತೋರಿಸಲಿಲ್ಲ, ಅಷ್ಟೆ.

ಈಚೀಚೆಗೆ ನಮ್ಮವರಿಗೆ ದಿನವೂ ಎಂಟು ಹತ್ತು ಆಣೆಗಳಷ್ಟು ಲಂಚದ

ಹಣ ಸಿಕ್ಕುತ್ತಿತ್ತು. ಅದರಲ್ಲಿ ಒಂದು ಆಣೆಯನ್ನೂ ತಮಗಾಗಿ ಖರ್ಚು ಮಾಡದೆ ಎಲ್ಲವನ್ನೂ ನನ್ನ ಕೈಗೆ ಕೊಡುತ್ತಿದ್ದರವರು. ನಾನು ಒಂದೆರಡು, ಹೊಸ ನಮೂನೆಯ ಬ್ಲೌಜು ಹೊಲಿಸಿಕೊಂಡೆ. ಒಂದೆರಡು ಹಿತ್ತಾಳೆಯ ಪಾತ್ರೆ ಕೊಂಡು ತಂದೆ. ಒಂದು ರೂಪಾಯಿ ತೆತ್ತು ಹಳೆಯ ಕುರ್ಚಿಯೊಂದನ್ನೂ ತಂದುದಾಯಿತು. ಗಾದಿಯೊಂದನ್ನು ಸಾಧ್ಯವಾದಷ್ಟು ಬೇಗ ಕೊಂಡು ತರ ಬೇಕೆಂದು ನಾನು ಇಚ್ಛಿಸುತ್ತಿದ್ದೆ. ಆದರೆ, ಅದಕ್ಕೆ ಅವಶ್ಯವಿದ್ದಷ್ಟು ಹಣ ನನ್ನ ಹತ್ತಿರ ಇರಲಿಲ್ಲ. ಅದರಲ್ಲಿಯೆ, ಈ ಸಿನೀಮಾದ ಚಟ ಬೇರೆ ಅಂಟಿಕೊಂಡು ನನ್ನ ಕೈಯಲ್ಲಿ ರೊಕ್ಕ ಉಳಿಯದಂತಾಗಿತ್ತು.

ತಂದು ಕೊಟ್ಟ ಹಣದ ವಿಚಾರವಾಗಿ ಅವರು ಒಂದು ಸಲವೂ ನನ್ನನ್ನು ಕೇಳಿರಲಿಲ್ಲ. ಅಷ್ಟು ನಂಬಿಕೆ ಅವರಿಗೆ ನನ್ನ ಬಗೆಗೆ. ಸಂಸಾರವನ್ನು ಸಾಗಿಸಿ ಕೊಂಡು ಹೋಗುವುದರಲ್ಲಿ ನಾನು ಜಾಣೆಯೆಂದೇ ಅವರು ನಂಬಿಕೊಂಡಿದ್ದರು.

" ನಿನ್ನ ಕೈ ಹಿಡಿದದ್ದು ನನ್ನ ಪುಣ್ಯ ನೋಡೇ ಗಿರಿಜಾ. ನನಗೆ ಯಾವ ತ್ರಾಸವೂ ಇಲ್ಲದಂತೆ ಮನೆ ನಡಿಸಿಕೊಂಡು ಹೋಗುತ್ತಿದ್ದೀ," ಎಂದು ಅವರು ಆಗಾಗ ನನ್ನನ್ನು ಕೊಂಡಾಡುತ್ತಿದ್ದುದಿತ್ತು.

ಅಂಥ ಸಂದರ್ಭಗಳಲ್ಲೆಲ್ಲ ನನಗೆ ಒಳಗೊಳಗೇ ಚೇಳು ಕುಟುಕಿದ ಹಾಗಾಗುತ್ತಿತ್ತು. ಅವರ ನಂಬಿಕೆಗೆ ತಕ್ಕ ಹಾಗೆ ನಾನು ಯೋಗ್ಯಳಾಗಿಯೇ ಇದ್ದರೊಳ್ಳೆಯದೇನೋ ಎಂದು ಯೋಚಿಸಿ ಬಹಳ ಸಂಕಟಪಡುತ್ತಿದ್ದೆ. ಆದರೆ, ಆ ಸಂಕಟ ಬಹಳ ಹೊತ್ತು ಉಳಿಯುತ್ತಿರಲಿಲ್ಲ. ಸಿರಿವಂತಿಕೆಯ ಸುಖವನ್ನು ಬಯಸಿ ನನ್ನ ಚಿತ್ತ ಹುಚ್ಚೆದ್ದು ಹಾರುತ್ತಿತ್ತು.

" ಇವರು ತಂದುಕೊಡುವ ಎಂಟಾಣೆಯಲ್ಲಿ ಎಂಥಾ ಸುಖ ಸಿಕ್ಕೀತು! ಪಿಶ್ಯ!" ಎಂದು ತಿರಸ್ಕರಿಸುತ್ತಿತ್ತು ನನ್ನ ಮನಸ್ಸು.

## ೧೭

ಕೆಲ ದಿನಗಳಿಂದೀಚೆಗೆ ಅವರಿಗೆ ರಾತ್ರಿ ಪಾಳಿಯ ಕೆಲಸ ಬಿದ್ದಿತ್ತು. ಊಟ ಮಾಡಿಕೊಂಡು, ಏಳು ಗಂಟೆಗೆ ಹೋದವರು ಮನೆಗೆ ಬರುತ್ತಿದ್ದುದು ಮರುದಿನ ಮುಂಜಾನೆ ಏಳು ಗಂಟೆಗೆ.

"ಮನೆಯಲ್ಲಿ ಒಬ್ಬಳೇ ಇರಲಿಕ್ಕೆ ಅಂಜಿಕೆಯಾಗುತ್ತದೇನೇ ಗಿರಿಜಾ ?" ಎಂದು ಅವರೊಮ್ಮೆ ನನ್ನನ್ನು ಕೇಳಿದರು.

"ಅಂಜಿಕೆಯಿಲ್ಲ, ಏನಿಲ್ಲ. ಒಬ್ಬಳೇ ಅಂತ ಬೇಸರು."

"ನಿನ್ನ ಗೆಳತಿ ಸುಶೀಲೆಗೆ ಬೇಕಾದರೆ ಇಲ್ಲೇ ಬಂದು ಮಲಗಿಕೋ ಅಂತ ಕೇಳು."

ನಾನು ಸುಶೀಲೆಯನ್ನು ಕೇಳಿದುದೂ ಆಯಿತು. ಏಕೋ ಏನೋ, ಅಂತು ಆವಳು ನಮ್ಮ ಮನೆಯಲ್ಲಿ ಮಲಗಿಕೊಳ್ಳಲು ಒಪ್ಪಲಿಲ್ಲ.

ಒಂದು ದಿನ ರಾತ್ರಿ ಒಂಭತ್ತು ಗಂಟೆಯ ಸಮಯ. ನಿದ್ದೆ ಬರದೆ ಬಹಳ ಬೇಸರಕ್ಕಿಟ್ಟುಕೊಂಡಿತ್ತು. ಒಂಭತ್ತೂವರೆಯ ಆಟಕ್ಕೆ ಹೋಗಿ ಸಿನಿಮಾ ನೋಡಿಕೊಂಡು ಬರೋಣವೆನ್ನಿಸಿತು. ಸರಿ. ನನ್ನನ್ನು ತಡೆಯುವವರಾರು? ಹೊರಗೆ ಹೋಗಿ ಸುಶೀಲೆಯನ್ನು ಕೂಗಿ ಸಿನಿಮಾಕ್ಕೆ ಹೋಗುವ ವಿಚಾರ ತಿಳಿಸಿದೆ.

"ನಮ್ಮಲ್ಲಿ ಈ ದಿವಸ ಆಪ್ತರು ಬಂದಾರೆ. ನನಗೆ ಬರಲಿಕ್ಕಾಗುವ ದಿಲ್ಲವ್ವ," ಎಂದಳಾಕೆ.

ನನಗೆ ಬಹಳ ವ್ಯಸನವಾಯಿತು. ಸಿನಿಮಾ ನೋಡುವ ಉತ್ಸಾಹವನ್ನೂ

ಹತ್ತಿಕ್ಕಿಕೊಳ್ಳುವ ಹಾಗಿರಲಿಲ್ಲ. ಸುಶೀಲೆ ಬರದಿದ್ದರೂ ಚಿಂತೆಯಿಲ್ಲ, ನಾನೊಬ್ಬಳೇ ಹೋಗಿ ನೋಡಿಕೊಂಡು ಬರುವುದೆಂದು ನಿರ್ಧರಿಸಿ ಬಾಗಿಲಿಗೆ ಬೀಗ ಜಡಿದು ಹೊರಬಿದ್ದೆ.

ಸಿನಿಮಾ ಮುಗಿದು ನಾನು ಮನೆಗೆ ಬರಲು ಹನ್ನೆರಡೂವರೆ ಗಂಟೆಯ ಸಮಯವಾಗಿತ್ತು. ಬೀದಿಯಲ್ಲಿ ಹೆಚ್ಚು ಜನರಿರಲಿಲ್ಲ. ನಾನು ನಮ್ಮ ಮನೆಗೆ ಬಂದು ಬೀಗ ತೆಗೆಯುತ್ತಿದ್ದ ಹಾಗೇ ಕಾಶಪ್ಪನ ಹೊರಬಾಗಿಲು ಕಿರ್ರೆಂದಿತು. ನಾನು ಸಿನಿಮಾಕ್ಕೆ ಹೋಗಿದ್ದುದನ್ನು ಆತ ನೋಡಿಕೊಂಡಿದ್ದು ನಾನು ಹಿಂದಿರುಗಿ ಬರುವುದನ್ನೇ ಕಾದು ಕುಳಿತಿದ್ದ ಹಾಗಿತ್ತು. ಬಾಗಿಲು ತೆಗೆದು ನಾನು ಒಳ ಸೇರುತ್ತಲೂ ಅವನೂ ನನ್ನನ್ನು ಹಿಂಬಾಲಿಸಿ ಬಂದು ಬಾಗಿಲು ಮುಚ್ಚಿ ಚಿಲಕ ಹಾಕಿದ.

ಭೀತಿಯಿಂದಾಗಿ ನನ್ನ ದೇಹವೆಲ್ಲವೂ ನಡುಗತೊಡಗಿತ್ತು. ಎಂಥ ವಿಲಕ್ಷಣ ಭೀತಿ ಅದು ಗೆಳತಿ! ಅದರ ಅರ್ಧ ಆನಂದ, ಇನ್ನರ್ಧ ಅಂಜಿಕೆ. ಓಣಿಯಲ್ಲಿ ಯಾರಾದರೂ ಎಚ್ಚರವಾಗಿರಬಹುದು, ಕಾಶಪ್ಪ ನಮ್ಮ ಮನೆಯಲ್ಲಿ ಸೇರಿದುದನ್ನು ನೋಡಿರಬಹುದು, ಈರವ್ವನೇ ಎಚ್ಚರವಾಗಿದ್ದರೂ ಇರಬಹುದು, ಗಂಡನಿಗೆ ಗೊತ್ತಾಗದಂತೆ ಅವಳು ನಮ್ಮ ಮನೆಯ ಮುಂದೆ ಬಂದು ನಿಂತು ಶಂಖವಾದ್ಯ ಬಾರಿಸಿ ಓಣಿಯವರನ್ನೆಲ್ಲ ಎಬ್ಬಿಸಿ ಗದ್ದಲಮಾಡಿ ನನ್ನ ಮರ್ಯಾದೆ ತೆಗೆಯಬಹುದು.

ಹಾಗೆ ವಿಚಾರ ಮಾಡುತ್ತಾ ನಡುಗುತ್ತಿದ್ದೆ ನಾನು.

ಕಾಶಪ್ಪನಿಗೆ ಮಾತ್ರ ಕೊಂಚವೂ ಅಂಜಿಕೆಯಿದ್ದ ಹಾಗಿರಲಿಲ್ಲ. ಅವನೇ ನನ್ನ ಕೈ ಹಿಡಿದು ಒಳಗಡೆ ಕರೆದುಕೊಂಡು ಬಂದ.

"ಅಂಜಬ್ಯಾಡ ಗಿರಿಜಾ, ಅಂಜಬ್ಯಾಡ. ಏನೂ ಆಗುವದಿಲ್ಲ," ಎಂದು ನನ್ನ ಕಿವಿಯಲ್ಲುಸುರಿದ.

ಆ ಸಮಯದ ನನ್ನ ಭಾವನೆಗಳನ್ನು ಏನೆಂದು ವರ್ಣಿಸಲಿ? ಹೇಗೆ ವರ್ಣಿಸಲಿ? ಅವನ ದಿಟ್ಟತನದ ಬಗೆಗೆ ಒಂದೆಡೆಗೆ ಮೆಚ್ಚುಗೆ, ಅವನ ಧಾರ್ಷ್ಟ್ಯದ ಬಗೆಗೆ ಇನ್ನೊಂದೆಡೆಗೆ ಕೋಪ, ಸ್ತ್ರೀ ಸಹಜವಾದ ಲಜ್ಜೆ

ಇನ್ನೊಂದೆಡೆಗೆ, ನನ್ನ ಬಯಕೆ ಕೈಗೂಡುವ ಸಂದರ್ಭ ಬಂದಿತೆಂಬ ಸಂತೋಷ ಮಗುದೊಂದೆಡೆಗೆ. "ಇದು ಸರಿಯಲ್ಲ, ಇದು ಸರಿಯಲ್ಲ. ಇದು ತಪ್ಪು. ಇದು ಪಾಪ. ಇದು ವಂಚನೆ," ಎಂದು ಒಂದು ಸಣ್ಣ ದನಿಯೂ ಪ್ರಲಾಪಿಸುತ್ತಿತ್ತು.

ಕಾಶಪ್ಪ ನನ್ನನ್ನು ನೇರವಾಗಿ ಹಾಸಿಗೆಗೆ ಕರೆದುಕೊಂಡು ಬಂದ. ಉರಿಯುತ್ತಿದ್ದ ದೀಪದ ಬತ್ತಿಯನ್ನಿಳಿಸಿ ಬೆಳಕು ಕಡಮೆ ಮಾಡಿದ. ಮಾತ ನಾಡಲು ನಾನು ಬಾಯಿ ತೆರೆಯುವುದರೊಳಗಾಗಿ ಪಟಪಟನೆ ಮುದ್ದು ಕೊಟ್ಟು ನನ್ನ ಬಾಯಿಯನ್ನೂ ಮುಚ್ಚಿದ. ನಾನು ಪ್ರತಿಭಟಿಸಬೇಕೆಂದುಕೊಂಡೆ, ಕೂಗಿ ಕೊಳ್ಳಬೇಕೆಂದುಕೊಂಡೆ, ಅವನ ಹಿಡಿತದಿಂದ ತಪ್ಪಿಸಿಕೊಳ್ಳಬೇಕೆಂದುಕೊಂಡೆ. ಯಾವುದಕ್ಕೂ ಅವಕಾಶವಾಗದಂತೆ ನನ್ನನ್ನು ಗಟ್ಟಿಯಾಗಿ ತಬ್ಬಿ ಹಿಡಿದಿದ್ದ ಕಾಶಪ್ಪ. ಮತ್ತೆ ಮತ್ತೆ ನನ್ನನ್ನು ಚುಂಬಿಸುತ್ತಾ,

"ನಿನ್ನ ನೋಡಿದಂದಿನಿಂದ ನಾ ಹುಚ್ಚನಂತಾಗಿದ್ದೆ ಗಿರಿಜಾ. ನನಗಾಗೇ ಹುಟ್ಟಿ ಬಂದ ಹೆಣ್ಣು ನೀನು...." ಎಂದು ಹುಚ್ಚು ಹುಚ್ಚಾಗಿ ಹೇಳುತ್ತಿದ್ದ.

"ನನ್ನ ಬಿಡಿರಿ. ಬಿಟ್ಟು ಬಿಡಿರಿ. ಇಲ್ಲಾಂದರೆ ಒದರಿಬಿಡ್ತೀನಿ."

"ನನ್ನ ಮ್ಯಾಲ ದಯಾಮಾಡಿ ಒದರಬ್ಯಾಡ ಗಿರಿಜಾ. ನೀ ಏನು ಕೇಳಿ ದರೂ ಕೊಡ್ತೀನಿ. ಒದರಬ್ಯಾಡ."

"ನನ್ನ ಗಂಡ ಇಲ್ಲದಾಗ ಹೀಂಗ ಬಂದು ಹಿಡಿದುಕೊಳ್ಳೂದಕ್ಕ ನಾನೇನು ಸೂಳೆ ಅಂತ ತಿಳಿದೀರೇನು? ಬಿಟ್ಟುಬಿಡಿರಿ ನನ್ನ," ಎಂದು ನಾನು ಬೇಕೆಂತಲೇ ಅವನನ್ನು ಗದರಿಸಿದೆ.

"ಗಂಡ ಇಲ್ಲದಾಗ ಬರದೆ ಏನು ಗಂಡ ಇದ್ದಾಗ ಬರಲಿಕ್ಕಾಗುತದೇನೇ ಗಿರಿಜಾ? ಎಷ್ಟು ದಿವಸದಿಂದ ಕಾಯುತಿದ್ದೆ ಅಂತೀಯಾ ಈ ಸಂಧಿಗಾಗಿ.... ನಿನ್ನ ಗಂಡನಿಗೇನೂ ಗೊತ್ತಾಗದಿದ್ದರಾಯಿತಲ್ಲ? ನಿನ್ನದೇನು ಗಂಟು ಹೋಗು ತದೆ? ಯಾರಿಗೂ ಗೊತ್ತಾಗದಂತೆ ಎಚ್ಚರಿಕೆಯಿಂದಿದ್ದರೆ ಮುಗೀತು. ದೇವರು ನನಗೆ ಯಾವುದಕ್ಕೂ ಏನೂ ಕಡಿಮೆ ಮಾಡಿಲ್ಲ. ನನ್ನ ಐಶ್ವರ್ಯ ಎಲ್ಲಾ ನಿನ್ನದೇ ಅಂತ ತಿಳಿದುಕೋ."

"ನನ್ನ ಐಶ್ವರ್ಯವೆಲ್ಲಾ ನಿನ್ನದೇ...." ಅವನ ಆ ಮಾತು ಮತ್ತೆ ಮತ್ತೆ

ನನ್ನ ಕಿವಿಗಳಲ್ಲಿ ಮೊರೆಯತೊಡಗಿತು. ನಾನು ಬಾಯಿ ಮುಚ್ಚಿಕೊಂಡೆ, ಹೃದಯ ಮುಚ್ಚಿಕೊಂಡೆ. ನನ್ನ ಮಿದುಳಿನ ಬಾಗಿಲೊಂದೇ ಆಗ ತೆರೆದಿದ್ದುದು. "ಕಾಶಪ್ಪನನ್ನು ಪೂರ್ತಿಯಾಗಿ ಕೈಯಲ್ಲಿ ಹಿಡಿದುಕೊಂಡು ಅವನ ಸಂಪತ್ತೆಲ್ಲ ವನ್ನೂ ಸೂರೆಗೊಳ್ಳಬೇಕು, ನಾನು ಬಡವಿಯೆಂದು ನನ್ನನ್ನು ಕಡೆಗಣಿಸುತ್ತಿದ್ದ ಈರವ್ವನ ಕೊಂಬು ಮುರಿಯಬೇಕು, ನಾನು ತಿರುಕನ ಮಗಳೆಂದು ಬೀಳು ಗಳೆದ ಅತ್ತೆಯ ಹೊಟ್ಟೆಯುರಿಸಬೇಕು."

ಬೆಳಗಿನ ಜಾವದವರೆಗೂ ನನ್ನೊಡನಿದ್ದು, ನನ್ನ ಕೈಗೆ ನೋಟುಗಳ ಕಂತೆಯೊಂದನ್ನಿಟ್ಟು ಹೊರಟುಹೋದ ಕಾಶಪ್ಪ. "ಇದಿಷ್ಟೇ ಅಂತ ತಿಳಿಯ ಬ್ಯಾಡ ಗಿರಿಜಾ. ಮತ್ತೆ ಕೊಡುತೀನಿ," ಎಂದು ಹೇಳಲು ಮರೆಯಲಿಲ್ಲ.

ದೀಪ ದೊಡ್ಡದು ಮಾಡಿ ಆತುರತೆಯಿಂದ ನೋಟುಗಳನ್ನೆಣಿಸಿ ನೋಡಿದೆ. ಐವತ್ತು ರೂಪಾಯಿಗಳಿದ್ದುವು ಆ ಕಟ್ಟಿನಲ್ಲಿ. ಅಷ್ಟು ರೂಪಾಯಿಗಳನ್ನು ಏಕ ಕಾಲಕ್ಕೆ ನಾನೆಂದೂ ಕೈಯಲ್ಲಿ ಹಿಡಿದಿರಲಿಲ್ಲ ಅದುವರೆಗೆ. ಅವುಗಳಷ್ಟೆ ಅಲ್ಲ, ಇನ್ನೂ ಸಿಗುತ್ತವೆ. ಕಾಶಪ್ಪನ ಹಣದ ಪೆಟ್ಟಿಗೆಯೇ ನನ್ನದಾಗುತ್ತದೆ, ಎಂದು ಯೋಚಿಸುತ್ತಾ ಹಾಸಿಗೆಯಿಂದೆದ್ದು ಆ ನೋಟುಗಳನ್ನು ಗಡಿಗೆಗೆ ಸೇರಿಸಿದೆ. ಒಲೆಗೆ ಉರಿ ಹೊತ್ತಿಸಿ ನೀರು ಕಾಯಿಸಿ ಸ್ನಾನ ಮಾಡಿದೆ. ನಾನು ಸೀರೆ ಯುಟ್ಟುಕೊಳ್ಳುತ್ತಿದ್ದ ಹಾಗೇ ಅವರು ಮನೆಗೆ ಬಂದರು.

"ಏನು ಗಿರಿಜಾ, ಇಷ್ಟು ಲಗೂ ಜಳಕ ಇವತ್ತು ?"

ನನಗೆ ಏನು ಹೇಳುವುದಕ್ಕೂ ತೋಚಲಿಲ್ಲ. ಅವರಿಗೇನಾದರೂ ಸಂದೇಹ ಬಂದಿರಬಹುದೇ ಎಂದು ಕೊಂಚ ದಿಗಿಲೂ ಆಯಿತು. ಆದರೆ ಅದನ್ನು ಮುಖದಲ್ಲಿ ವ್ಯಕ್ತಗೊಳಿಸದೆ ಸಹಜವಾಗಿ ಮುಗುಳ್ನಕ್ಕು ಸುಮ್ಮನಾದೆ.

ರಾತ್ರೆಯಿಡೀ ನಿದ್ದೆಗೆಟ್ಟು ಆಯಾಸಗೊಂಡು ಬಂದ ಅವರ ಮುಖ ನೋಡುತ್ತಲೂ ನನಗೆ ಕಳವಳವಾಗದಿರಲಿಲ್ಲ. ಬೇಗ ಬೇಗ ಚಹ ತಯಾರಿಸಿ ಕಪ್ಪಿನಲ್ಲಿ ಹಾಕಿ ಕೊಟ್ಟೆ. ಅವರೂ ಹೆಚ್ಚು ಮಾತನಾಡದೆ, ಚಹ ಕುಡಿದು ಮಲಗಿಕೊಂಡುಬಿಟ್ಟರು.

ಅಂದು ಇಡೀ ದಿವಸ ನನ್ನ ದೇಹದಲ್ಲಿ ಚೈತನ್ಯವಿರಲಿಲ್ಲ. ಮಧ್ಯಾಹ್ನ ಊಟಕ್ಕೆ ಕುಳಿತಾಗ ಅವರು ಕೇಳಿದರು :

" ಯಾಕೆ ಗಿರಿಜಾ, ಏನಾಗಿದೆ ನಿನಗೆ? ಮೈಯಲ್ಲಿ ನೆಟ್ಟಗಿಲ್ಲೇನು ?"

ಮತ್ತೆ ನನ್ನ ದೇಹ ಸೂಕ್ಷ್ಮವಾಗಿ ಕಂಪಿಸತೊಡಗಿತು. ಅವರಿಗೆ ಖಂಡಿತ ವಾಗಿಯೂ ಸಂದೇಹ ಬಂದಿರಬೇಕು. ನನ್ನ ಮುಖದಲ್ಲಿ ಅಪರಾಧದ ಭಾವವೂ ಮೂಡಿದೆಯೋ ಏನೊ. ಮುಂದೇನು ಗತಿ? ಅಯ್ಯೋ ದೇವರೇ....

" ರಾತ್ರಿ ನಿದ್ದೆ ಬರಲಿಲ್ಲವೇನೇ ?"

ಇಲ್ಲ. ನಿದ್ದೆ ಬಂದಿರಲಿಲ್ಲ. ಆ ಹಾಳು ಕಾಶಪ್ಪ....

" ಒಬ್ಬಳೇ ಆಗಿ ನಿದ್ದೆ ಬರಲಿಲ್ಲವೇನೋ....ಪಾಪ...." ಎಂದು ಚೇಷ್ಟೆ ಮಾಡಿ ನಕ್ಕರು ಅವರು.

ನನಗೂ ನಗುವನ್ನು ತಡೆಯಲಾಗಲಿಲ್ಲ. ನನಗೇಕೆ ನಿದ್ದೆ ಬರಲಿಲ್ಲ ವೆನ್ನುವುದು ಇವರಿಗಂತು ಗೊತ್ತಾಗಬೇಕು ! ಇವರು ಮಗ್ಗುಲಲ್ಲಿಲ್ಲದುದರಿಂದಲೇ ನನಗೆ ನಿದ್ದೆ ಬಂದಿರಲಿಕ್ಕಿಲ್ಲವೆಂದು ಇವರ ಭಾವನೆ! ಎಷ್ಟು ಮರುಳರು ಈ ಗಂಡಸರು....ಹೆಂಗಸರ ನೆಲೆ ಇವರಿಗೇನು ಗೊತ್ತು !

" ಏನು ಮಾಡೂದು ಗಿರಿಜಾ, ನೌಕರಿ ಅಂದರೆ ಹೀಗೇ! ನಿನ್ನಂಥ ಹರಯದ ಹೆಂಡತೀನ್ನ ಬಿಟ್ಟು ಅಲ್ಲಿ ಜಕಾತಿಕಟ್ಟೆಯೊಳಗೆ ಥಂಡಿಯೊಳಗೆ ನಡುಗುತ್ತಾ ಕೊಳೆಯಬೇಕು. ಅಲ್ಲಿ ಕೂಡಾ ನಿನ್ನದೇ ನೆನಪು ಯಾವಾಗಲೂ..."

" ಇನ್ನೂ ಎಷ್ಟು ದಿವಸ ಈ ರಾತ್ರಿ ಪಾಳಿ ?" ಬೇಸರವನ್ನು ನಟಿಸುತ್ತಾ ನಾನು ಕೇಳಿದೆ.

" ಇನ್ನೂ ಇಪ್ಪತ್ತು ದಿನ ಉಳೀತಲ್ಲ...."

" ಹ್ಯಾಗಾದರೂ ಕಳೆಯುವದೋ ಇಪ್ಪತ್ತು ದಿನಾ!" ಕಳವಳವನ್ನು ನಟಿಸುತ್ತಾ ನಾನು ಹೇಳಿದೆ. ನಟನೆಯೆಂಬುದು ಹೆಣ್ಣಿನ ಸಹಜಗುಣಗಳ ಲ್ಲೊಂದಾಗಿದೆಯೊ ಏನೋ.

ಆ ಒಂದು ಮಾತು ಅವರನ್ನು ಪೂರ್ಣವಾಗಿ ಮರುಳುಗೊಳಿಸಿತು.

"ಈ ತಿಂಗಳ ಸಂಬಳ ಬಂದ ವ್ಯಾಲ ನಿನಗೆ ಇನ್ನೊಂದು ಸೀರೆ ತರೂಣು ಹಂ ಗಿರಿಜಾ!" ಎಂದರವರು.

ನನಗೆ ಪುನಃ ನಗುವುಕ್ಕಿ ಬಂತು.

ಊಟ ಮುಗಿಸಿ ಅವರು ಮತ್ತೆ ನಿದ್ದೆಹೋದರು. ನಾನು ನೀರು ತರಲು ಕಾಶಪ್ಪನ ಮನೆಗೆ ಹೋದೆ. ಪಡಸಾಲೆಯಲ್ಲಿ ಕುಳಿತಿದ್ದ ಕಾಶಪ್ಪ ನನ್ನನ್ನು ನೋಡುತ್ತಲೂ ಹುಬ್ಬು ಹಾರಿಸಿ ನಕ್ಕ. ನಾನು ನಾಚಿಕೆಯಿಂದ ಸೆರಗು ಎಳೆದು ಕೊಂಡೆ. ಆ ವೇಳೆಗೆ ಈರವ್ವ ಒಳಗಿನಿಂದ ಬಂದು, ನನ್ನನ್ನು ಕಂಡು,

"ಏನು ಗಿರಿಜವ್ವಾ, ಈಗ ಊಟ ಮುಗೀತೇನು?" ಎಂದಳು. ಅವಳ ಧ್ವನಿಯಲ್ಲಿ ಯಾವ ಮಾರ್ಪಾಟೂ ಕಂಡುಬರುತ್ತಿರಲಿಲ್ಲ. ರಾತ್ರೆ ನಡೆದ ಘಟನೆಯ ಬಗೆಗೆ ಅವಳಿಗೇನೂ ತಿಳಿಯದೆಂಬುದು ಖಚಿತವಾಗುತ್ತಲೂ ನನಗೆ ಎಷ್ಟೋ ನೆಮ್ಮದಿಯಾಯಿತು.

ಇಡೀ ದಿನವೆಲ್ಲ ಯೋಚಿಸಿ ನಾನು ಒಂದು ನಿರ್ಧಾರಕ್ಕೆ ಬಂದೆ – ಹೆಸರು ಹೇಳಲು ಗಂಡ, ಹಣ ಕೊಡಲು ಕಾಶಪ್ಪ ಇಬ್ಬರೂ ಇರಲಿ, ಈ ವಿಷಯ ಗಂಡನಿಗೆ ಗೊತ್ತಾಗದಂತೆ ಎಚ್ಚರದಿಂದಿದ್ದರಾಯಿತು.

ಅವರು ಉಂಡು ಕೆಲಸಕ್ಕೆ ಹೋದರು. ನಾನೂ ಊಟ ಮುಗಿಸಿ, ಹಾಸಿಗೆಯ ಮೇಲೊರಗಿಕೊಂಡು ಸುಶೀಲೆ ತಂದುಕೊಟ್ಟಿದ್ದ ಕಥೆಯ ಪುಸ್ತಕ ಓದುತ್ತಲಿದ್ದೆ. ಆ ವೇಳೆಗಾಗಲೇ ನನಗೆ ಸಾಧಾರಣವಾಗಿ ಓದಲು ಬರುತ್ತಿತ್ತು.

ಕಾಶಪ್ಪ ಆ ರಾತ್ರಿಯೂ ಬಂದೇ ಬರುವನೆಂದು ನಾನು ಭಾವಿಸಿದ್ದೆ. ಅಂತೆಯೇ ಮುಂದಿನ ಬಾಗಿಲಿನ ಚಿಲಕವನ್ನು ಹಾಕಿರಲಿಲ್ಲ. ನಾನು ತಿಳಿದು ಕೊಂಡಿದ್ದಂತೆಯೇ ಅವನು ಬಂದುದೂ ಆಯಿತು. ಆಗ ಹತ್ತು ಹತ್ತೂವರೆ ಗಂಟೆಯಾಗಿರಬಹುದು. ಓದು ಬೇಸರವಾಗಿ ನನಗೆ ತೂಕಡಿಕೆ ಬರಲಾರಂಭ ವಾಗಿತ್ತು.

ಅವನು ಬಂದವನೇ ನನ್ನನ್ನು ತಬ್ಬಿಕೊಂಡು ಮುನ್ನಾದಿನದಂತೆಯೇ ಚುಂಬಿಸುತ್ತಾ ಮಾತನಾಡಿದ:

"ನಿನಗೆ ನಿದ್ದೆ ಬಂದಿತ್ತೋ ಏನೋ. ನನ್ನಿಂದಾಗಿ ಬಹಳ ತ್ರಾಸ ಆಯಿತೇ?"

"ನೀವು ಬರೂದೂ ಬ್ಯಾಡ. ನಿಮ್ಮ ರೂಪಾಯಿಗಳೂ ನನಗೆ ಬ್ಯಾಡ. ಇದೆಲ್ಲಾ ಚಲೋದಲ್ಲ. ನೀವು ಹೊರಟುಹೋಗಿರಿ."

ಕಾಶಪ್ಪ ತುಂಟತನದಿಂದ ನಗುತ್ತಾ ಹೇಳಿದ:

"ಬಿಡು ಬಿಡು. ಮನಸಿನೊಳಗೊಂದು ಇಟ್ಟುಕೊಂಡು ಹೊರಗೊಂದು ಮಾತಾಡಬ್ಯಾಡ. ನಾ ಬಲ್ಲೆ ನಿನ್ನ ಮನಸ್ಸನ್ನ...."

"ಏನು? ಅಂಥಾದ್ದು ಏನು ಬಲ್ಲಿರಿ?"

"ನಾನು ಬರೂದು ನಿನಗೆ ನಿಜವಾಗಿ ಬೇಕಾಗಿರದಿದ್ದರೆ ಬಾಗಿಲಿಗೆ ಚಿಲಕ ಕೂಡಾ ಹಾಕದೆ ಹಾಗೇ ಮಲಗಿರುತ್ತಿದ್ದಿಯೇನು?"

ಅವನು ಬಹಳ ಘಾಟಿ. ನನ್ನನ್ನು ಮಾತಿನಲ್ಲಿ ಹಿಡಿದಿದ್ದ. ಆದರೆ, ಹಾಗೆಲ್ಲ ಸೋತು ಹೋಗುವಂಥ ಹೆಣ್ಣೇ ನಾನು!

"ಇವತ್ತು ಮ್ಯಾಲಿನವರಿಗೆ ಕೇಳಿಕೊಂಡು ರಾತ್ರಿಯೇ ಬಂದು ಬಿಡ್ತೀನಿ ಅಂತ ಅವರು ಹೇಳಿದಾರೆ. ಅದಕ್ಕೆ ಚಿಲಕ ಹಾಕಿರಲಿಲ್ಲ."

"ಹೌದೇ? ನಿಜವಾಗಿ?" ಅವನು ಗಾಬರಿಯ ಧ್ವನಿಯಲ್ಲಿ ಕೇಳಿದ.

"ನಾನೇನು ಸುಳ್ಳು ಹೇಳ್ತೀನೇನು?"

"ಹಾಗಾದರೆ....ಹಾಗಾದರೆ....ನಾನು ಹೋಗಲೇ?" ಎನ್ನುತ್ತಾ ಅವನು ನನ್ನನ್ನು ಬಿಟ್ಟು ಎದ್ದು ನಿಂತ.

ಅವನ ಗಾಬರಿಯನ್ನೂ ಭೀತಿಯನ್ನು ಕಂಡು ನನಗೆ ನಗುವನ್ನು ತಡೆಯಲಾಗಲಿಲ್ಲ. ಗಂಡಾಂತರದ ಭಯವಿಲ್ಲದಾಗ ದಿಟ್ಟತನದಿಂದ ವರ್ತಿಸುವ ಗಂಡಸರೂ ಆ ಗಂಡಾಂತರ ಹಿಂಬಾಲಿಸಿಕೊಂಡು ಬಂದಿದೆಯೆಂದಾಗ ಎಷ್ಟು ಹೇಡಿಗಳಾಗುವರಲ್ಲ!

ನಾನು ನಗುವುದನ್ನು ಕಂಡು ಅವನಿಗೆ ಸಂದೇಹವುಂಟಾಗಿರಬೇಕು. ಎದ್ದು – ನಿಂತವನು ಮತ್ತೆ ಕುಳಿತುಕೊಳ್ಳುತ್ತಾ ಹೇಳಿದ:

"ನೀನು ಸುಳ್ಳು ಹೇಳುತ್ತಿದ್ದೀ ಅಲ್ಲವೇನು?"

"ಸುಳ್ಳೋ ನಿಜವೋ, ನೀವು ಹೊರಟುಹೋಗಿರಿ."

"ಯಾಕೆ? ನನ್ನಿಂದೇನು ತಪ್ಪಾಯ್ತು? ನಿನ್ನೆ ಕೊಟ್ಟ ರೂಪಾಯಿ

ಸಾಕಾಗಲಿಲ್ಲ ಅಂತೀಯಾ? ಮತ್ತೆ ಕೊಡುತೀನಿ ಅಂತ ಹೇಳಿರಲಿಲ್ಲೇನು? ತಗೋ ಈ ನೂರು ರೂಪಾಯಿ."

ನೂರು ರೂಪಾಯಿಗಳ ಆ ದೊಡ್ಡ ನೋಟು ನನ್ನ ಬಾಯಿ ಮುಚ್ಚಿಸಿತು. ಅದನ್ನು ನನ್ನ ಕೈಗೆ ತುರುಕಿ ಕಾಶಪ್ಪ ಮತ್ತೆ ನನ್ನನ್ನು ತಬ್ಬಿಕೊಂಡ.

ಆ ರಾತ್ರೆ ಇಬ್ಬರೂ ಬಹಳ ಮಾತನಾಡಿದೆವು. ಕಾಶಪ್ಪ ತನ್ನ ಸಂಸಾರದ ಕಥೆಯನ್ನು ಬಣ್ಣಿಸಿ ಹೇಳಿದ. ಈರವ್ವನಿಂದ ಅವನಿಗೇನೂ ಸುಖವಿರಲಿಲ್ಲವಂತೆ. ಅವಳನ್ನು ಮದುವೆಯಾಗುವ ಅಪೇಕ್ಷೆ ಅವನಿಗಿರದಿದ್ದರೂ ತಂದೆತಾಯಿಗಳ ಮನಸ್ಸು ನೋಯಿಸಲಾರದೆ ಆಗಿದ್ದನಂತೆ....

"ಅಲ್ಲದೆ, ಅವಳೇನು ದೂರದವಳಲ್ಲ ನನಗೆ. ನನ್ನ ಸ್ವಂತ ಅಕ್ಕನ ಮಗಳು. ಚಿಕ್ಕವಳಾಗಿದ್ದಾಗಿನಿಂದ ನನ್ನ ತಂದೆತಾಯಿಗಳೇ ಅವಳನ್ನು ಬೆಳಸಿದರು. ನನಗೇ ಅವಳನ್ನ ಮದುವೆ ಮಾಡುವುದೆಂತ ಮೊದಲೇ ಗೊತ್ತು ಮಾಡಿದ್ದರು. ಏನು ಮಾಡುವದು, ಹೇಳು. ಅವಳು ನನಗೆ ತಕ್ಕವಳಲ್ಲದಿದ್ದರೂ ಆಗಬೇಕಾಯ್ತು. ಮನಸ್ಸಿಲ್ಲದ ಮನಸ್ಸಿನಿಂದ ಆದ ಮದುವೆಯಿಂದ ಸುಖ ಸಿಗುವದಾದರೂ ಹ್ಯಾಗೆ? ಅಂ, ಏನಂತೀ ನೀನು?"

"ಹೌದು."

"ನಿನ್ನ ಮದುವೆಯದೂ ಹೀಗೇ ಆಯಿತೇನೊ."

ನಾನು ಜಾಣೆ. ನನ್ನ ಮನಸ್ಸಿನಲ್ಲಿನ ದುಗುಡವನ್ನು ಅವನೆದುರು ಬಿಚ್ಚಿ ತೋರಿಸಲಿಲ್ಲ. 'ಅವರು' ನನಗೆ ಯೋಗ್ಯನಾದ ಪತಿಯಲ್ಲವೆಂಬ ವಿಚಾರವನ್ನೂ ನಾನು ವ್ಯಕ್ತಗೊಳಿಸಲಿಲ್ಲ.

ಕಾಶಪ್ಪ ಮುಂದುವರಿಸಿದ್ದ:

"ಅವಳಿಗೇನು ರೋಗವೋ ಏನೋ. ಇಷ್ಟು ವರ್ಷ ಆದರೂ ಮಕ್ಕಳಾಗಲಿಲ್ಲ ಇನ್ನೂ. ಮನೆಯೊಳಗೆ ಯಾತಕ್ಕೂ ಏನೂ ಕೊರತೆ ಇಲ್ಲ. ಅದೊಂದೇ ಕೊರತೆ ನೋಡು ಮಕ್ಕಳಿಲ್ಲದ್ದು. ಅವಳಲ್ಲಿ ನನಗೆ ಪ್ರೀತಿಯಿಲ್ಲದಿರುವದೇ ಅದಕ್ಕೆ ಕಾರಣವೋ ಏನೊ."

"ಹೂಂ. ಹಾಗೂ ಇರಬಹದು."

"ಹಾಗೆ ನಾನೇನು ಲಫಂಗನಲ್ಲ. ಇದುವರೆಗೆ ಯಾವ ಹೆಣ್ಣಿನ ಗೋಜಿಗೂ ಹೋದವನಲ್ಲ. ನಿನ್ನ ನೋಡಿದ ಮ್ಯಾಲ ಮಾತ್ರ ಮನಸ್ಸು ತಡೀಲಿಲ್ಲ. ಜೀವ ಹೋದರೂ ಚಿಂತಿಲ್ಲ, ನಿನ್ನ ಹೊಂದಬೇಕೆಂತ ಅನಿಸಿತು. ನೀನು ಏನು ಮಾಟಾ ಮಾಡಿದಿಯೋ ನನಗೆ!"

"ನಾನೇನು ಮಾಡಿದ್ದೀನಿ? ನೀವೇ ನಿನ್ನೆ ರಾತ್ರಿ ಹುಂಬರ ಹಾಗೆ ಬಂದುಬಿಟ್ಟರಿ ಮನೆಯೊಳಗೆ!"

"ನೀನು ಸಿಗದಿದ್ದರೆ ನಿನ್ನೆ ನನ್ನ ಪ್ರಾಣಾನೇ ಉಳೀತಿರಲಿಲ್ಲ ಗಿರಿಜಾ!"

"ಐ! ಬಿಡಿ ಬಿಡಿರಿ! ಏನಾರೆ ಒಂದು ಹೇಳಬ್ಯಾಡಿರಿ."

"ಏನಾರೆ ಒಂದು ಅಲ್ಲ ಗಿರಿಜಾ. ಇದು ನಿಜವಾದ ಮಾತು. ನೀನೆಂದರೆ ನನ್ನ ಎರಡನೆಯ ಪ್ರಾಣ ಇದ್ದ ಹಾಗೆ!"

"ನನಗೇನು ಇದೆಲ್ಲಾ ಸರಿಬರುವದಿಲ್ಲ. ಜನರಿಗೆ ಗೊತ್ತಾದರೆ ಗತಿಯೇನು?"

"ಗೊತ್ತಾಗದ ಹಾಗಿರಬೇಕು. ಒಂದು ವೇಳೆ ಗೊತ್ತಾದರೂ ಏನಂತೆ! ಇಂಥಾದ್ದು ಎಷ್ಟೋ ಕಡೆ ನಡೀತದೆ. ಎಲ್ಲರೂ ಕಣ್ಣುಮುಚ್ಚಿಕೊಂಡು ಸುಮ್ಮ ನಿರುತಾರೆ."

"ನಮ್ಮವರಿಗೆ ಗೊತ್ತಾದರೂ ಅವರೂ ಸುಮ್ಮನಿರಬಹುದು ಅಂತೀರಾ?"

"ಮತ್ತೇನು ಮಾಡುತಾರೆ? ನನ್ನ ವಿರುದ್ಧ ಬಡಿದಾಡುವದಕ್ಕೂ ತಾಕತ್ತು ಬೇಕಲ್ಲ! ನನ್ನ ಹತ್ತರ ರೊಕ್ಕಕ್ಕೆ ಕೊರತೆಯಿಲ್ಲ. ಏನು ಬೇಕಾದ್ದು ಮಾಡಬಲ್ಲೆ ನಾ."

"ಇಷ್ಟು ಧೈರ್ಯ ಇದ್ದವರು ಇದೇ ಈಗ ಅಂಜಿಕೊಂಡು ಓಡಿ ಹೋಗಲು ನಿಂತಿದ್ದಿರಲ್ಲ!"

ಕಾಶಪ್ಪ ನಗುತ್ತಾ ನನ್ನ ಕೆನ್ನೆ ಚಿವುಟಿದ.

"ನಾನೇನು ನಿಜವಾಗಿ ಹೋಗುತ್ತಿರಲಿಲ್ಲ. ನಿನ್ನ ಪರೀಕ್ಷೆ ಮಾಡಲು ಹಾಗೆ ನಾಟಕಾ ಮಾಡಿದೆನಷ್ಟೆ."

# ೧೮

ಬೆಳಿಗ್ಗೆ ಅವರು ಮನೆಗೆ ಬಂದೊಡನೆ ಆ ಮಾತು ಈ ಮಾತು ಆಡುತ್ತಾ ಹೇಳಿದೆ :

" ನೀವು ಇಲ್ಲಿಯ ತನಕ ತಂದು ಕೊಟ್ಟ ದುಡ್ಡು ಎಲ್ಲಾ ಸೇರಿ ಮೂವತ್ತು ರೂಪಾಯಿ ಆಗಿದೆ. ಮನೆಯೊಳಗೆ ಒಂದೆರಡು ಹಿತ್ತಾಳೆ ಪಾತ್ರೆ ಇದ್ದರೆ ಚಲೋದು. ತೆಗೆದುಕೊಂಡು ಬಿಡಲಾ ?"

" ನಿನಗೆ ತಿಳಿದ ಹಾಗೆ ಮಾಡು," ಎಂದರವರು. ಅವರು ತಂದು ಕೊಡುತ್ತಿದ್ದ ನಾಲ್ಕಾಣೆ ಎಂಟಾಣೆಗಳಿಂದ ಇಷ್ಟು ಬೇಗ ಮೂವತ್ತು ರೂಪಾಯಿ ಕೂಡಿದುದು ಹೇಗೆ? ಎಂದು ಅವರು ವಿಚಾರಮಾಡಲಿಲ್ಲ. ನನ್ನ ಮೇಲೆ ಅಷ್ಟು ವಿಶ್ವಾಸವಲ್ಲವೇ ಅವರಿಗೆ?

" ಗಿರಿಜಾ, ನಿನ್ನದು ಬಹಳ ಹಿಡಿತ ನೋಡು, ರೊಕ್ಕದ ಸಂಬಂಧದೊಳಗೆ. ಹೀಗೇ ಮಾಡಬೇಕು ಸಂಸಾರ. ಗಂಡಸರು ನಾವು ದುಡಿದು ತಂದು ನಿಮ್ಮ ಕೈಗೆ ಕೊಡುತೀವಿ, ನೀವು ಅದನ್ನೆಲ್ಲಾ ಸಿಕ್ಕ ಸಿಕ್ಕ ಹಾಗೆ ಖರ್ಚು ಮಾಡದೆ ಉಳಿಸಿ ಬಾಳುವೆ ಮಾಡಿದರೇ ಸಂಸಾರ ನೆಟ್ಟಗೆ ನಡಿಯೂದು."

ಸಂಸಾರ....ನೆಟ್ಟಗೆ!

ಗಂಡಸು ಜಾತಿಯ ಬಗೆಗೇ ಕನಿಕರ ಬಂದಿತ್ತು ನನಗೆ. ಎಂಥ ಸಭ್ಯಪ್ರಾಣಿ ಈ ಗಂಡಸು! ಊಟ ಮಾಡಿ ಕೆಲಸಕ್ಕೆ ಹೋದರಾಯಿತು. ಇವರು ಮನೆಯಲ್ಲಿಲ್ಲದಾಗ ನಾವು ಏನನ್ನು ಮಾಡಿದರೂ ಇವರಿಗೆ ತಿಳಿಯುವಂತಿಲ್ಲ. ತಿಳಿದುಕೊಳ್ಳಬೇಕೆಂಬ ಬುದ್ಧಿಯೂ ಇವರಿಗಿರುವುದಿಲ್ಲ. ನಮ್ಮ ಮೇಲಿನ ಮೋಹದಿಂದ ಅಷ್ಟು ಅಂಧರಾಗಿರುತ್ತಾರೆ ಇವರು....

ಅದೇ ದಿನ ಸಾಯಂಕಾಲ ಸುಶೀಲೆಯನ್ನು ಜೊತೆಗೆ ಕರೆದೊಯ್ದು ಒಂದು ಕೊಡ, ಒಂದು ದೊಡ್ಡ ಕೊಳಗ, ಎರಡು ತಾಟು, ಎರಡು ತಂಬಿಗೆ ಕೊಂಡು ತಂದೆ.

"ಇಷ್ಟೊಂದು ದುಡ್ಡು ಎಲ್ಲಿಂದ ಬಂತು ಗಿರಿಜಾ?" ಎಂದು ಸಹಜ ಕುತೂಹಲದಿಂದ ಕೇಳಿದಳು ಸುಶೀಲಾ.

"ಮೊನ್ನೆ ಅವರಿಗೇನೋ ಭತ್ತೆ ಬಂತಂತೆ," ಎಂದು ಆ ಕ್ಷಣಕ್ಕೆ ಹೊಳೆದ ಒಂದು ಸುಳ್ಳು ಹಾರಿಸಿಬಿಟ್ಟೆ.

ಆದರೆ, ಸುಶೀಲೆಯ ಹತ್ತಿರ ಅಂಥ ಸುಳ್ಳು ನಾಟುವಂತಿರಲಿಲ್ಲ. ಮ್ಯಾಟ್ರಿಕ್ ತರಗತಿಯಲ್ಲಿ ಓದುತ್ತಿದ್ದ ಹೊಸ ಕಾಲದ ಹುಡುಗಿಯಲ್ಲವೇ ಆಕೆ!

"ಜಕಾತಿ ಕಟ್ಟೆಯ ಕಾರಕೂನರಿಗೆ ಭತ್ತೆ ಎಲ್ಲಿಂದ ಬರುತದೆ?" ಎಂದು ಅವಳು ಸವಾಲು ಹಾಕಿದಳು.

"ಭತ್ತೆಯೋ ಇನ್ನೇನೋ ಇದ್ದೀತು. ನನಗೇನು ಗೊತ್ತಾಗಬೇಕು ಅದೆಲ್ಲಾ!" ಎಂದೆ. ನನಗೆ ಒಳಗೊಳಗೇ ದಿಗಿಲು: ಕಾಶಪ್ಪ ನಮ್ಮ ಮನೆಗೆ ಬರುತ್ತಿದ್ದುದನ್ನು ಈ ತುಂಟಿ ಕದ್ದು ನೋಡಿಕೊಂಡಿರಲಿಕ್ಕಿಲ್ಲವಷ್ಟೆ? ಎಂದು.

"ಜಕಾತಿ ಕಟ್ಟೆಯವರಿಗೆ ಸಿಗುವದೆಂದರೆ ಒಂದೇ – ಜಕಾತಿ ತಪ್ಪಿಸಿ ಮಾಲು ಸಾಗಿಸುವವರಿಂದ ಸಿಗುವ ಲಂಚ," ಎಂದಳು ಸುಶೀಲಾ.

"ಹೂಂ. ಹಾಗೂ ಇದ್ದೀತು."

"ಇನ್ನೂ ಎಷ್ಟು ರೂಪಾಯಿ ಅವೆ ಹಾಗಾದರೆ? ಇನ್ನೊಂದು ಸೀರೇನಾದ್ರೂ ತಗೊಳ್ಳಬಹುದಲ್ಲ?" ಎಂದು ಅವಳು ಪುಸಲಾಯಿಸಿದಳು.

"ಬಾ, ತಗೊಳ್ಳೋಣ," ಎಂದು ಉತ್ಸಾಹದಿಂದ ಬಟ್ಟೆಯಂಗಡಿಯತ್ತ ಕಾಲುಹಾಕಿದೆ.

ಅಂಗಡಿಯವನು ಬಗೆಬಗೆಯ ಸೀರೆಗಳನ್ನು ಹರಡಿದ. ಹೊಸ ಫ್ಯಾಷನ್ನಿನ ಚಿತ್ರ ವಿಚಿತ್ರ ಸೀರೆಗಳು. ಯಾವುದನ್ನು ತೆಗೆದುಕೊಳ್ಳುದೆಂದು ತಿಳಿಯದೆ ನಾನು ಕಕ್ಕಾವಿಕ್ಕಿಯಾಗಿ ನಿಂತುಕೊಂಡಿದ್ದೆ. ನನ್ನ ಪೇಚಾಟವನ್ನು ಗುರುತಿಸಿದ ಸುಶೀಲೆಯೇ ನೀಲವರ್ಣದ ಸೀರೆಯೊಂದನ್ನು ಆರಿಸಿದಳು.

"ಎಷ್ಟ್ರೀ ಇದಕ್ಕೆ?"

"ಹತ್ತು ರೂಪಾಯಿ," ಎಂದ ಅಂಗಡಿಯವ.

ನಾನು ಬೆಚ್ಚಿದೆ. ಹತ್ತು ರೂಪಾಯಿ ಬೆಲೆಯ ಸೀರೆಯನ್ನು ಅದುವರೆಗೂ ಕೊಂಡಿರಲಿಲ್ಲ ನಾನು. ಸೀರೆಯೇನೋ ಬಹಳ ಮುದ್ದಾಗಿತ್ತು, ರೇಶಿಮೆಯಂತೆ ನುಣುಪಾಗಿತ್ತು. ಅದನ್ನುಟ್ಟುಕೊಂಡರೆ ನನ್ನ ಸೌಂದರ್ಯ ಅಧಿಕವಾಗಿ ಕಾಣುವುದೆಂಬುದೇನೋ ನನಗೆ ಗೊತ್ತಿತ್ತು. ಆದರೂ ಅದನ್ನು ಕೊಳ್ಳಲು ಧೈರ್ಯ ಬರಲಿಲ್ಲ. ಅಂಥ ಭಾರಿ ಸೀರೆಯನ್ನು ನೋಡಿ 'ಅವರಿಗೆ' ಸಂದೇಹ ಬರಬಹುದೋ ಏನೊ....

"ಇದು ಬ್ಯಾಡ ಬಿಡೇ ಸುಶೀಲಾ. ಇನ್ನೊಂದು ಸಾಧಾರಣದ್ದು ನೋಡು."

"ತಗೊಂಡರೆ ಇದನ್ನೇ ತಗೊಳ್ಳಬೇಕು. ಹ್ಯಾಗೂ ಕೈಯಲ್ಲಿ ದುಡ್ಡು ಅದೆ ಅಂತೀಯಲ್ಲ. ತಗೊಂಡು ಬಿಡು. ಮತ್ತೆ ಯಾವಾಗ ಇಂಥಾದ್ದು ತಗೊಳ್ಳಲಿಕ್ಕಾಗುತದೆ?" ಎಂದಳು ಸುಶೀಲಾ.

ಮನೆಗೆ ಬರುತ್ತಾ ಹಾದಿಯಲ್ಲಿ ಅವಳೆಂದಳು :

"ಈ ಸೀರೆಯೊಳಗೆ ನೀನು ಸಿನಿಮಾ ನಟಿಯರನ್ನು ಮೀರಿಸುವ ಹಾಗೆ ಕಾಣಬಹುದು ಗಿರಿಜಾ." ಅವಳ ಧ್ವನಿಯಲ್ಲಿ ಕೊಂಚ ಮತ್ಸರವೂ ಬೆರೆತ ಹಾಗಿತ್ತು.

"ಸಿನಿಮಾ ನಟಿಯಾಗಲು ಮನಸ್ಸಿರೂದು ನಿನಗೆ ನನಗಲ್ಲ. ಬೇಕಾದರೆ ಇದನ್ನ ನೀನೇ ತೆಗೆದುಕೋ."

"ಛೆ. ಛೆ. ನನಗ್ಯಾಕೆ?"

"ಚೇಷ್ಟೆಯ ಮಾತಲ್ಲ ಸುಶೀಲಾ. ನೀನೇ ತಗೊಂಡು ಬಿಡು ಇದನ್ನ. ನಾನು ಮತ್ತೊಂದು ತಗೊಳ್ಳುತೀನಿ."

"ನನಗೇನು ಬ್ಯಾಡ ತಾಯಿ. ನನ್ನ ಹತ್ತರ ಇಷ್ಟು ರೂಪಾಯಿ ಎಲ್ಲಿಂದ ಬರಬೇಕು?"

"ರೂಪಾಯಿ? ಅಂದರೆ....ನಾನೇನು ಇದನ್ನ ನಿನಗೆ ಮಾರುತೀನಿ ಅಂತ

ತಿಳಿದಿಯೋ ಏನು? ಹುಚ್ಚೀ! ನೀನು ನನ್ನ ತಂಗಿಯಿದ್ದ ಹಾಗಿದ್ದೀ. ನಿನ್ನ ಅಕ್ಕ ಕೊಟ್ಟ ಸೀರೆ ಅಂತ ತಿಳಿದು ತಗೋ ಇದನ್ನ!"

"ಛೆ. ಛೆ. ಬ್ಯಾಡ, ಬ್ಯಾಡ. ನಿಮ್ಮವರು ಕೇಳಿದರೆ ಏನು ಹೇಳುತ್ತೀ?"

"ಸೀರೆ ತಗೊಂಡದ್ದಾದರೂ ಎಲ್ಲಿ ಗೊತ್ತದೆ ಅವರಿಗೆ?"

"ಮತ್ತೆ? ಲೆಕ್ಕ?"

"ಅವರೆಂದೂ ಲೆಕ್ಕ ಕೇಳಿಲ್ಲ ನನ್ನ," ಎಂದು ಕೊಂಚ ಹೆಮ್ಮೆಯಿಂದಲೇ ನಾನು ಹೇಳಿದೆ.

"ಎಲ್ಲರಿಗೂ ಇಂಥಾ ಗಂಡ ಸಿಗುವದಿಲ್ಲ ಗಿರಿಜಾ. ನೀನು ಭಾಗ್ಯವಂತೆ!" ಎಂದಳು ಸುಶೀಲಾ.

ನನಗೆ ನಗು ಬಂತು. ಸುಶೀಲೆಯ ಬಗೆಗೆ ನಗು, ನನ್ನ ಬಗೆಗೆ ನಗು, ನನ್ನ 'ಭಾಗ್ಯ'ದ ಬಗೆಗೆ ನಗು!

ಇನ್ನಷ್ಟು ಒತ್ತಾಯಮಾಡಿ ಆ ಸೀರೆಯನ್ನು ಸುಶೀಲೆಗೇ ಕೊಟ್ಟು ಬಿಟ್ಟೆ. ಯಾಕೆ ನಾನು ಹಾಗೆ ಮಾಡಿದ್ದು? ನನಗೆ ಬೇಕಾಗಿರಲಿಲ್ಲವೇ ಆ ಸೀರೆ? ಸುಶೀಲೆಯ ಮೇಲಿನ ಪ್ರೀತಿಗಾಗಿ ನಾನು ಅವನ್ನು ಕೊಟ್ಟೆನೇ? ನಿಜವಾಗಿ ಅವಳು ಬಗೆಗೆ ಅಂಥ ಪ್ರೀತಿ ನನ್ನಲ್ಲಿತ್ತೇ?

ಊ ಹೂಂ. ಅದೊಂದೂ ಕಾರಣವಲ್ಲ ಆ ಔದಾರ್ಯಕ್ಕೆ. ನಾನು ವ್ಯಭಿಚಾರಕ್ಕಿಳಿದ ಸಂಗತಿ ಒಂದಿಲ್ಲೊಂದು ದಿನ ಅವಳಿಗೆ ಗೊತ್ತಾಗಬಹುದು. ಅಂಥ ಸಂದರ್ಭದಲ್ಲಿ ಅವಳು ಬಾಯಿ ಮುಚ್ಚಿಕೊಂಡು ಸುಮ್ಮನಿರುವಂತೆ ಮಾಡಲೆಂದೇ ನಾನು ಆ ಸೀರೆಯ ಲಂಚ ತೆತ್ತುದು....

"ಸೀರೆ ಎಲ್ಲಿಯದಂತ ಮನೆಯಲ್ಲಿ ಕೇಳಿದರೇನು ಹೇಳಲಿ ಗಿರಿಜಾ?"

"ನಾನು ಕೊಟ್ಟದೀನಂತ ಹೇಳಿ ಬಿಡು. ಅದಕ್ಯಾಕೆ ಅನುಮಾನ? ಬೇಕಾದರೆ ನಾನೇ ಬಂದು ಹೇಳುತೀನಿ."

ಕೊಡವನ್ನು ಕೊಳಗವನ್ನು ಅಕ್ಕಪಕ್ಕದಲ್ಲಿಟ್ಟು, ಗೋಡೆಗೊಂದು ಫಳಿ ಬಡಿದು ಅದರ ಮೇಲೆ ಪಾತ್ರೆಗಳನ್ನಿಟ್ಟು ದೂರ ನಿಂತುಕೊಂಡು ಅವುಗಳ ಅಂದವನ್ನು ನಿರೀಕ್ಷಿಸಿ ಹರುಷಪಟ್ಟುಕೊಂಡೆ. ಅವರೂ ಅವುಗಳನ್ನು ನೋಡಿ ಸಂತೋಷ ವ್ಯಕ್ತಮಾಡಿದರು.

" ಮುಂದಿನ ತಿಂಗಳು ಇನ್ನು ಸ್ವಲ್ಪ ಹೆಚ್ಚು ದುಡ್ಡು ಸಿಗಬಹುದು ಗಿರಿಜಾ. ಆಮ್ಯಾಲ ಒಂದು ಗಾದಿಯನ್ನೂ ತಂದೀಯಂತೆ.

" ಹೆಚ್ಚು ದುಡ್ಡು ? ಹ್ಯಾಗೆ ?"

" ಗೊಬ್ಬೂರು ರಸ್ತೆಯ ಜಕಾತಿ ಕಟ್ಟಿಗೆ ಹಾಕಬೇಕಂತ ಬಹಳ ದಿನದಿಂದ ಕೇಳುತ್ತಿದೀನಿ ಸಾಹೇಬರನ್ನ. ಅಲ್ಲಿ ಒಂದು ತಿಂಗಳಿದ್ದರೆ ಕೈ – ತುಂಬಾ ರೊಕ್ಕ ಸಿಕ್ಕೀತು. ಐದು ಮಿನಿಟಗೊಂದು ಗಾಡಿ ಬರುತದಲ್ಲ ಗೊಬ್ಬೂರಿಂದ."

" ಚಲೋ ಆಗುತದೆ ಹಾಗಾದರೆ. ದೇವರು ನಮ್ಮ ಮ್ಯಾಲ ಕಣ್ಣು ತೆಗೆದಾನ ಅಂದಂಗಾಯ್ತು."

ಅವರು ನಿರೀಕ್ಷಿಸಿಕೊಂಡಿದ್ದಂತೆ, ಮೊದಲನೆಯ ತಾರೀಖಿನಿಂದ ಅವರನ್ನು ಗೊಬ್ಬೂರು ರಸ್ತೆಯ ಸುಂಕದಕಟ್ಟೆಗೆ ಹಾಕಿದರು. ಅಲ್ಲಿ ಕೆಲಸ ವಿಪರೀತ ವಾಗಿರುತ್ತಿತ್ತು. ಒಂದೊಂದು ದಿನ ಅವರು ಮನೆಗೆ ಬರಬೇಕಾದರೆ ರಾತ್ರಿ ಹತ್ತು ಹನ್ನೊಂದು ಗಂಟೆಯಾಗುತ್ತಿತ್ತು. ಅಷ್ಟರೊಳಗಾಗಿ ಸಂಧಿ ಸಾಧಿಸಿ ಕಾಶಪ್ಪ ಬಂದು ಹೋಗುತ್ತಿದ್ದ. ವಾರಕ್ಕೊಂದು ಬಾರಿ ಐವತ್ತೋ ನೂರೋ ರೂಪಾಯಿ ಗಳನ್ನು ಅವನೂ ಕೊಡುತ್ತಿದ್ದ. ಇವರೂ ಪ್ರತಿನಿತ್ಯವೂ ಐದಾರು ರೂಪಾಯಿ ತಂದುಕೊಡುತ್ತಿದ್ದರು. ನಾನು ಒಂದು ದೊಡ್ಡ ಗಾದಿಯನ್ನು ಉಣ್ಣೆಯ ರಗ್ಗನ್ನೂ ಮಗ್ಗುಲಾಸಿಗೆಗಳನ್ನು ಕೊಂಡು ತಂದೆ. ಸುಶೀಲೆಗೇ ಕೊಟ್ಟ ಸೀರೆಯಂಥ ಎರಡು ಸೀರೆಗಳನ್ನು ಕೊಂಡುಕೊಂಡೆ. ಮನೆಯ ಬಾಗಿಲುಗಳಿಗೆ ಹೆಣಿಗೆಯ ಪರದೆಗಳೂ ಬಂದುವು. ಮತ್ತೆರಡು ಕುರ್ಚಿ, ಮತ್ತೊಂದು ಮೇಜು ಬಂತು. ಸಾದಾ ಕೊಬ್ಬರಿ ಎಣ್ಣೆಗೆ ಬದಲಾಗಿ ಸುಗಂಧದೆಣ್ಣೆಯಾಯಿತು. ಸ್ನೋ ಪೌಡರು ತರುವಷ್ಟು ದೂರ ಹೋಗಲಿಲ್ಲ, ಅಷ್ಟೆ....

" ನಿನ್ನ ಕೈ ಹಿಡಿದದ್ದರಿಂದ ನಾನೂ ಒಬ್ಬ ಸಂಸಾರಿಯಾಗುವಂತಾಯ್ತು ಗಿರಿಜಾ ? ಮನೆ ಎಷ್ಟು ಚಂದ ಕಾಣುತದಲ್ಲ !" ಎಂದು ಹಿಗ್ಗುತ್ತಿದ್ದರವರು.

" ನೀನು ಬಹಳ ರಸಿಕಳು ಗಿರಿಜಾ ! ನಮ್ಮ ಮನೆಯಲ್ಲೂ ಕಾಣದಂಥಾ ಸೊಗಸು ನಿನ್ನ ಮನೆಯಲ್ಲಿ !" ಎಂದು ಹೊಗಳುತ್ತಿದ್ದ ಕಾಶಪ್ಪ. " ಹೂಂ.

ಅವಳಿಗೇನು ಗೊತ್ತಾಗಬೇಕು ಇದೆಲ್ಲಾ ಅದೊಂದು ಮೊದ್ದು !" ಎಂದು ಈರವ್ವ ನನ್ನು ಟೀಕಿಸಲೂ ಮರೆಯುತ್ತಿರಲಿಲ್ಲ.

" ಇದೆಲ್ಲಾ ಇದ್ದರೂ ನನಗೆ ಸಮಾಧಾನ ಇಲ್ಲ ಬಿಡಿರಿ," ಎಂದು ನಾನು ಉಪಾಯವಾಗಿ ಮಾತು ತೆಗೆದೆ, ಒಂದು ದಿನ.

" ಯಾಕೆ? ಇನ್ನೇನು ಬೇಕು ಅನ್ನುತ್ತೀ ?"

" ನನ್ನ ಮ್ಯಾಲ ಅಷ್ಟು ಪ್ರೀತಿ ಅದೆ ಅನ್ನುತ್ತೀರಿ. ನಿಮಗೇ ಗೊತ್ತಾಗುವದಿಲ್ಲೇನು ?" ಎಂದು ನಾನು ಅವನನ್ನು ಕೆಣಕಿದೆ. " ಅಲ್ಲರೀ, ಇಷ್ಟು ದಿನ ಆಯ್ತು, ನನ್ನ ಕೊರಳು ಖಾಲಿ ಇರೂದು ಒಂದು ಸಾರಿ ಆದರೂ ನಿಮ್ಮ ಕಣ್ಣಿಗೆ ಕಾಣಿಸಿಲ್ಲೇನು ?"

" ಓ, ಅಷ್ಟೇ ಹೌದಲ್ಲೋ? ಪಿಶ್ಯ ! ಇದಾದ ದೊಡ್ಡ ಮಾತು ಗಿರಿಜಾ! ನಾಳೇನೇ ತಂದುಕೊಡ್ತೀನಿ. ನಿನಗೆ ಎಂಥಾ ಒಡವೆ ಬೇಕು ಹೇಳು."

" ನೀವು ಎಂಥಾದ್ದು ತಂದುಕೊಟ್ಟರೂ ಇಟ್ಟುಕೋತೀನಿ."

ಮಾರನೆಯ ದಿನವೇ ಐದು ತೊಲೆ ಚಿನ್ನದಿಂದ ಮಾಡಿದ ಅಡ್ಡಿಕೆಯ ಸರವೊಂದನ್ನು ತಂದುಕೊಟ್ಟ ಕಾಶಪ್ಪ.

" ಈಗಾದರೂ ಸಮಾಧಾನವಾಯಿತೇ ನನ್ನ ರಾಣೀ ?"

" ಏನು ಸಮಾಧಾನ ಬಿಡಿರಿ. ಇದೇನು ದೊಡ್ಡದು !" ಎಂದೆ ನಾನು ಬೇಕೆಂತಲೇ.

" ಅರೆ! ಏನು, ಹೀಗಂತೀಯೆ! ಎರಡು ನೂರು ರೂಪಾಯಿ ಕಿಮ್ಮತ್ತು ಆಯ್ತು ಇದಕ್ಕೇ!"

" ಸಾವಿರಾರು ರೂಪಾಯಿ ಲಾಭ ಹೊಡಿಯುವವರಿಗೆ ಎರಡು ನೂರು ಏನು ದೊಡ್ಡದು ಬಿಡಿರಿ. ಈರವ್ವನ ಮೈಮೇಲೆ ಹತ್ತಿಪ್ಪತ್ತು ಸೇರು ಬಂಗಾರವಿರಬೇಕಲ್ಲ ! ಅದರ ಮುಂದೆ ಇದರದೇನು !"

ಎಸೆದ ಬಾಣ ಸರಿಯಾಗಿ ನಾಟಿತು. ಕಾಶಪ್ಪ ನನ್ನನ್ನು ಸಂತೈಸುತ್ತಾ ಹೇಳಿದ :

" ನಿನಗೂ ತಂದು ಕೊಡ್ತೀನಂತೆ ಸುಮ್ಮನಿರು. ಇದಿಷ್ಟೇ ಅಂತ ತಿಳಿದೀಯೇನು !"

ಇಲ್ಲ. ನಾನೇನೂ ಹಾಗೆ ತಿಳಿದಿರಲಿಲ್ಲ. ಕಾಶಪ್ಪನನ್ನು ಮನಸ್ಸು ಬಂದ ಹಾಗೆ ಕುಣಿಸಬಲ್ಲೆನೆಂಬ ಆತ್ಮವಿಶ್ವಾಸ ನನಗಿತ್ತು. ಅವನನ್ನು ಸಂಪೂರ್ಣವಾಗಿ ಸುಲಿಯಬೇಕೆಂದು ನಾನೆಂದೋ ನಿರ್ಧರಿಸಿದ್ದೆ.

ಅವನಿಗೂ ನನಗೂ ಸಂಬಂಧ ಬಂದು ಆರು ತಿಂಗಳು ಕಳೆಯುತ್ತ ಬಂದಿದ್ದುವು. ಆ ವೇಳೆಗೆ ನಾನು ಮೂರು ತಿಂಗಳ ಗರ್ಭಿಣಿಯಾಗಿದ್ದೆ. ನಮ್ಮವರಿಗೇನೋ ಆ ವಿಷಯ ಗೊತ್ತಾಗಿತ್ತು ಆಗಲೇ. ಸಹಜವಾಗಿಯೇ ಅವರಿಗೆ ಆನಂದವಾಗಿತ್ತು. ಕಾಶಪ್ಪನಿಗೆ ಮಾತ್ರ ನಾನಿನ್ನೂ ಆ ಸಮಾಚಾರವನ್ನು ತಿಳಿಸಿರಲಿಲ್ಲ. ಸರಿಯಾದ ಸಮಯವನ್ನು ನೋಡಿ ಆ ಸುದ್ದಿಯನ್ನು ತಿಳಿಸಿ ಅವನಿಂದ ಬಹು ಬೆಲೆಯ ಆಭರಣವೊಂದನ್ನು ಎಬ್ಬಿಸಬೇಕೆಂದು ನಾನು ಯೋಚಿಸಿಕೊಂಡಿದ್ದೆ.

'ಅವರಿಗೆ' ಪುನಃ ರಾತ್ರಿ ಕೆಲಸ ಬಿದ್ದಿತ್ತು. ಕಾಶಪ್ಪ ನಿರಾತಂಕವಾಗಿ ನನ್ನ ಹತ್ತಿರ ಬಂದು ಹೋಗತೊಡಗಿದ್ದ.

ಒಂದು ರಾತ್ರೆ ಅವನು ಸಂತೋಷದಲ್ಲಿದ್ದ ಸಂಧಿ ಸಾಧಿಸಿ ನಾನು ಗರ್ಭಿಣಿಯಾಗಿದ್ದ ವಿಚಾರ ಪ್ರಸ್ತಾಪಿಸಿದೆ– ಹೆಣ್ಣಿನ ಮಹಾಪ್ರಬಲ ಅಸ್ತ್ರವಾದ ಲಜ್ಜೆಯನ್ನು ಉಪಾಯದಿಂದ ಪ್ರಯೋಗಿಸುತ್ತ.

ಕಾಶಪ್ಪನ ಮುಖ ಅಷ್ಟು ಅಗಲವಾಯಿತು. ಅವನ ಕಣ್ಣುಗಳೂ ಅರಳಿದುವು ಆನಂದದಿಂದ. ತನ್ನ ಹೆಂಡತಿಯೇ ಗರ್ಭಿಣಿಯಾಗಿರುವಳೆಂಬ ಸುದ್ದಿ ತಿಳಿದಾಗಲೂ ಅವನಿಗೆ ಅಷ್ಟು ಆನಂದವಾಗುತ್ತಿತ್ತೋ ಇಲ್ಲವೋ. ನಾನು ಗರ್ಭಿಣಿಯಾಗಲು ತಾನೇ ಕಾರಣನೆಂಬ ಹೆಮ್ಮೆಯಿಂದ ಹಿಗ್ಗಿದ ಕಾಶಪ್ಪ. ಗಂಡಸರ ಈ ಟೊಳ್ಳು ಹೆಮ್ಮೆಯನ್ನು ನಾನೂ ಚೆನ್ನಾಗಿ ಬಲ್ಲವಳಾಗಿದ್ದೆ. ಅಂತೆಯೆ, ಅದನ್ನು ಚೆನ್ನಾಗಿ ಉಪಯೋಗಿಸಿಕೊಳ್ಳಲು ನಾನು ಹೊಂಚು ಹಾಕಿದ್ದುದು.

ಕಾಶಪ್ಪ ನನ್ನನ್ನು ತೋಳುಗಳಲ್ಲಿ ಹಿಡಿದುಕೊಂಡು ಮೃದುವಾಗಿ ಆಲಿಂಗಿಸಿಕೊಂಡು,

"ಎಷ್ಟು ತಿಂಗಳು ಗಿರಿಜಾ?" ಎಂದು ಕೇಳಿದ.

" ಮೂರು ತಿಂಗಳು," ಎಂದು ನಾನು ತಡೆಯುತ್ತ ತಡೆಯುತ್ತ ಹೇಳಿದೆ.

ಅವನು ಮನಸ್ಸಿನಲ್ಲೇ ಏನೇನು ಲೆಕ್ಕ ಹಾಕಿಕೊಂಡನೋ. ಅರ್ಥಪೂರ್ಣ ವಾಗಿ ನನ್ನನ್ನು ದಿಟ್ಟಿಸಿ ನಕ್ಕ. " ನಾನೇ, ನಾನೇ ಕಾರಣ ಇದಕ್ಕೆ !" ಎಂದು ಸಾರುತ್ತಿತ್ತು ಆ ನಗು.

ನನಗೂ ಕೂಡಾ ಮನಸ್ಸಿನಲ್ಲೇ ನಗು – ಕಾಶಪ್ಪನ ಮೂರ್ಖತನದ ಬಗೆಗೆ. ನನ್ನ ಗರ್ಭಕ್ಕೆ ಅವನೇ ಕಾರಣನೆಂಬ ಅವನ ಅಹಂಕಾರವೆ! ಸ್ವಂತ ಹೆಂಡತಿಯಲ್ಲೂ ಮಕ್ಕಳಾಗಿಲ್ಲ ಇವನಿಂದ; ಇನ್ನು ನನ್ನಲ್ಲಿ ಆಗುವುದೂ ಉಂಟೇ ?

ಮರುಕ್ಷಣವೇ ನನಗೆನ್ನಿಸಿತು: ಯಾರಿಗೆ ಗೊತ್ತು! ಇದು ಇವನಿಂದಲೇ ಆಗಿರಬಹುದು. 'ಅವರಿಂದಲೇ' ಆಯಿತೆಂದು ಹೇಳುವುದಕ್ಕಾದರೂ ಆಧಾರ ವೇನಿದೆ ? ದೇವರಿಗೇ ಗೊತ್ತು – ಯಾರಿಂದ ಆಯಿತೆಂಬುದು !

ಮತ್ತೆ ನಗು ನನ್ನ ಮನಸ್ಸಿನಲ್ಲಿ. ಎಂಥ ವಿಲಕ್ಷಣ ಸಮಸ್ಯೆ ಅದು....

ಕಾಶಪ್ಪನ ಬಗೆಗೆ ನಾನು ಯೋಚಿಸಿದ್ದಂತೆಯೇ ಆಯಿತು. ಮಾರನೆಯ ದಿನವೇ ಎರಡು ಜೊತೆ ಚಿನ್ನದ ಬಳೆಗಳನ್ನು ತಂದು ಬಹಳ ಪ್ರೀತಿಯಿಂದಲೂ ಅಕ್ಕರತೆಯಿಂದಲೂ ಅವುಗಳನ್ನು ನನ್ನ ಕೈಗೆ ತೊಡಿಸಿದ ಕಾಶಪ್ಪ.

ಅರ್ಥಾತ್ – ಆ ಆಭರಣಗಳು 'ಅವರ' ಕಣ್ಣಿಗೆ ಬೀಳದಂತೆ ನಾನು ಜಾಗರೂಕತೆ ವಹಿಸುವುದು ಅವಶ್ಯವಾಗಿತ್ತು. ಸೀರೆ – ರವಕೆಗಳನ್ನು ತುಂಬಿ ಡಲು ತೆಗೆದುಕೊಂಡಿದ್ದ ಟ್ರಂಕಿನಲ್ಲಿ ಅವುಗಳನ್ನು ಅಡಗಿಸಿಟ್ಟೆ. ಅವುಗಳನ್ನು ಮೈಮೇಲಿಟ್ಟುಕೊಂಡು ಆನಂದಿಸುವ ಸಮಯವಿನ್ನೂ ಬರಲಿಲ್ಲವಲ್ಲಾ ಎಂದು ವ್ಯಸನವಾಗದಿರಲಿಲ್ಲ. ಯೋಗ್ಯ ಸಮಯ ಬಂದಾಗ ಅವುಗಳನ್ನು ಹೊರದೆಗೆಯು ವುದೆಂದು ಯೋಚಿಸಿ ವ್ಯಸನವನ್ನು ಹತ್ತಿಕ್ಕಿಕೊಂಡೆ.

ನಾನು ಗರ್ಭಿಣಿಯಾದ ಸಂಗತಿ ನನ್ನ ತಂದೆ ತಾಯಿಗಳಿಗೂ ಅತ್ತೆ ಮಾವಂದಿಗರಿಗೂ ಗೊತ್ತಾಗಲು ವಿಲಂಬವಾಗಲಿಲ್ಲ – ಅಪ್ಪ, ಅವ್ವ ಮತ್ತು ಗೌರಿ ಮೂವರೂ ಬಂದು ನಾಲ್ಕು ದಿನ ಇದ್ದು, ನನ್ನ ಸುಸ್ಥಿತಿಯನ್ನು ನೋಡಿ ಸಂತೋಷಗೊಂಡು ಹೊರಟುಹೋದರು. ಮಾವನವರೂ ಆಗಾಗ ಬಂದು

ವಿಚಾರಿಸಿಕೊಂಡು ಹೋಗುತ್ತಿದ್ದರು. ಅತ್ತೆ ಮತ್ತು ನೀಲಕ್ಕ ಮಾತ್ರ ಇತ್ತ ಹಾಯಲಿಲ್ಲ.

"ಕುಬುಸ" ಮಾಡುವ ದಿನವೂ ಬಂತು. ಅಪ್ಪ, ಅವ್ವ ಮತ್ತು ಗೌರಿ ಪುನಃ ಬಂದರು. ಒಂದು ಸೀರೆಯನ್ನೂ ಒಂದು ಖಣವನ್ನೂ ತೆಗೆದುಕೊಂಡು ಬಂದಿದ್ದ ಅಪ್ಪ. ಆ ದಿವಸ ಮಾತ್ರ ಅತ್ತೆ, ನೀಲಕ್ಕ, ಅವಳ ಮಕ್ಕಳು ಎಲ್ಲರೂ ಬಂದಿದ್ದರು. ಸುಶೀಲಾ, ಈರವ್ವ, ಓಣಿಯಲ್ಲಿನ ಇನ್ನಿಬ್ಬರು ಹೆಂಗಸರೂ ಸೇರಿದ್ದರು.

ಪದ್ಧತಿಯ ಪ್ರಕಾರ 'ಕುಬುಸ' ಮಾಡುವ ಶಾಸ್ತ್ರವೂ ನಡೆಯಿತು. ಆಗ ನೀಲಕ್ಕ ಹಠಾತ್ತಾಗಿ 'ಇವರ' ಕಡೆ ತಿರುಗಿ ಹೇಳಿದಳು.

"ಹೆಣ್ಣು ಹುಟ್ಟಿದರೆ ನನ್ನ ಮಗನಿಗೇ ಕೊಡಬೇಕಪ್ಪಾ."

ಅವರು 'ಇಲ್ಲ'ವೆಂದು ಹೇಳಲಾಗುತ್ತದೆಯೆ? "ಹಾಗೇ ಆಗಲಿ ನೀಲಕ್ಕಾ," ಎಂದು ಮಾತು ಕೊಟ್ಟುಬಿಟ್ಟರು.

ನಾನು ಮಾತನ್ನೇನೂ ಆಡಲಿಲ್ಲವಾದರೂ, ಎಂಥ ಪ್ರಸಂಗ ಬಂದರೂ ನನ್ನ ಮಗಳನ್ನು ಆ ಮನೆಗೆ ಕೊಡುವುದಿಲ್ಲವೆಂದು ಮನಸ್ಸಿನಲ್ಲೇ ಪ್ರತಿಜ್ಞೆ ಮಾಡಿದೆ.

ಎಲ್ಲವೂ ಮುಗಿದು, ಅಪ್ಪ ಅವ್ವ ಹೊರಟುನಿಂತಾಗ 'ಇವರು' ಗೌರಿಗೊಂದು ಚಿಕ್ಕ ದಟ್ಟಿ ಕೊಡಿಸಿದರು. ಪಾಪ! ಅವಳಿಗಾದ ಆನಂದ ಅವರ್ಣನೀಯ. ಅವಳ ಮುಖದ ಮೇಲಿನ ಹರುಷವನ್ನು ನಿರೀಕ್ಷಿಸುತ್ತಿದ್ದ ಹಾಗೆ ನನ್ನ ಬಾಲ್ಯದ ದಿನಗಳು ನನ್ನ ಕಣ್ಣೆದುರು ಸುಳಿದುಹೋದುವು. ಅಂಥದೊಂದು ದಟ್ಟಿಗಾಗಿ ನಾನೂ ಬಾಯಿ ಬಾಯಿ ಬಿಡುತ್ತಿದ್ದ ಕಾಲವೊಂದಿತ್ತು. ಸಾಹುಕಾರರ ಮನೆಯಲ್ಲಿ ದಟ್ಟಿ ದೊರೆತಾಗ ನಾನೆಷ್ಟು ಹಾರಾಡಿದ್ದೆ!

ಗೌರಿಯನ್ನು ನಾನೇ ಪೇಟೆಗೆ ಕರೆದೊಯ್ದು ಒಂದು ರೇಶಿಮೆ ಸೀರೆ, ಎರಡು ಬ್ಲೌಜು, ಒಂದು ಸಾದಾ ಸೀರೆ ಕೊಡಿಸಿದೆ, ಕೈತುಂಬಾ ಚೆಂದದ ಬಳೆ ಇಡಿಸಿದೆ. ಅಪ್ಪನಿಗೆ ಕೋಟಿನ ಬಟ್ಟೆ, ದೋತರ, ಅವ್ವನಿಗೊಂದು ಸೀರೆ, ಒಂದು ಖಣ ಕೊಡಿಸಿದೆ.

"ಏನು ಗಿರಿಜಾ, ನಿನ್ನ ಗಂಡನಿಗೆ ಕೈತುಂಬಾ ಸಂಬಳ ಬರುತ್ತೈತೇನೇ?" ಎಂದಳು ಅವ್ವ.

"ಹೌದವ್ವಾ. ಸಂಬಳ ಅಲ್ಲದೆ ಮ್ಯಾಲ ಮತ್ತೆ ಸಾಕಷ್ಟು ಬರುತದೆ."

"ಆಯಿತವ್ವಾ. ದೇವರು ನಿಮ್ಮಿಬ್ಬರನ್ನೂ ಹೀಂಗೇ ಸುಖದಿಂದಿಡಲಿ," ಎಂದು ಮನಃಪೂರ್ವಕವಾಗಿ ಹರಸಿದಳು ಅವ್ವ. ಧಾರಾಳವಾಗಿ ಖರ್ಚು ಮಾಡುವ ಆ ಹಣವನ್ನು **ನಾನು ಗಳಿಸುತ್ತಿದ್ದ** ವಿಚಾರ ಗೊತ್ತಾಗಿದ್ದಲ್ಲಿ ಅವಳೇನು ಅನ್ನುತ್ತಿದ್ದಳೋ....

ಅವರು ಹೊರಟುಹೋದರು. ಮನೆ ಮತ್ತೆ ಮೊದಲಿನ ಹಾಗಾಯಿತು. ಈಚೆಗೆ ಕಾಶಪ್ಪ ನನ್ನಲ್ಲಿಗೆ ಬರುವುದು ನಿಂತುಹೋಗಿತ್ತು. ಹೆರಿಗೆಯ ದಿನಗಳು ಸಮೀಪಿಸುತ್ತಿದ್ದುವಲ್ಲವೆ? ಈಗ 'ಅವರು' ಹೆಚ್ಚು ಹೊತ್ತು ಮನೆಯಲ್ಲೇ ಇರುತ್ತಿದ್ದರು. ಮನೆಗೆ ಬೇಕಾದ ನೀರನ್ನೂ ಅವರೇ ತಂದು ತುಂಬುತ್ತಿದ್ದರು. ಈರವ್ವನೂ ಆಗಾಗ ಬಂದು ಅಡುಗೆಯಲ್ಲಿ ನೆರವಾಗುತ್ತಿದ್ದಳು. ಸುಶೀಲೆಯ ಪರೀಕ್ಷೆ ಮುಗಿದುಹೋಗಿತ್ತು. ಆ ವರ್ಷ ಅವಳು ಪಾಸಾಗಿರಲಿಲ್ಲ. ಮನೆಯಲ್ಲೇ ಅಭ್ಯಾಸ ಮಾಡುತ್ತಾ ಮುಂದಿನ ವರ್ಷ ಮತ್ತೆ ಪರೀಕ್ಷೆಗೆ ಕಟ್ಟುವವಳಿದ್ದಳು. ಅವಳೂ ಆಗಾಗ ಬಂದು ನೋಡಿಕೊಂಡು ಹೋಗುತ್ತಿದ್ದಳು. ನಾವು ಸಿನಿಮಾಕ್ಕೆ ಹೋಗುವುದು ಮಾತ್ರ ನಿಂತುಹೋಗಿತ್ತು.

ಒಂದೊಂದು ಬಾರಿ ನನಗೆ ತವರುಮನೆಯ ನೆನಪು ಬಂದು ಬಹಳ ವ್ಯಥೆಯಾಗುತ್ತಿತ್ತು. ಚೊಚ್ಚಲು ಬಾಣಂತನಕ್ಕೆ ನನ್ನನ್ನವರು ಕರೆದುಕೊಂಡು ಹೋಗಬೇಕಾಗಿತ್ತು. ಅಪ್ಪನಿಗೆ ಮಾತ್ರ ನನ್ನನ್ನು ಕರೆದೊಯ್ಯುವ ಇಚ್ಛೆಯಿರಲಿಲ್ಲ. ಏಕೆಂಬುದು ಗೊತ್ತೇ ಇದೆಯಲ್ಲ....

ನನಗೆ ಸಹಾಯ ಮಾಡುವುದಕ್ಕಾಗಿ ಅತ್ತೆಯೂ ಬರಲಿಲ್ಲ, ನೀಲಕ್ಕನೂ ಬರಲಿಲ್ಲ. ನಾನು ಹೋಗಿ, ಅತ್ತು ಕರೆದು ಕೇಳಿಕೊಂಡಿದ್ದರೆ ಬರುತ್ತಿದ್ದರೇನೊ. ನಾನು ಹೋಗಲಿಲ್ಲ, ಅವರೂ ಬರಲಿಲ್ಲ. "ಬರದಿದ್ದರೆ ಬಿಡಲಿ. ಇವರಿಲ್ಲದಿದ್ದರೆ ಹೆರಿಗೆಯೇ ಆಗುವದಿಲ್ಲವೇನು!" ಎಂದು ಹೇಳಿಕೊಂಡು ನನ್ನ ಮನಸ್ಸನ್ನು ನಾನೇ ಸಂತೈಸಿಕೊಂಡೆ.

## ೧೯

ಆ ಹೆರಿಗೆಯ ಕಾಲಕ್ಕೆ ನನಗಾದ ನೋವನ್ನು ನೆನೆಸಿಕೊಂಡರೆ ಬೇಡವ್ವಾ ಬೇಡ ಈ ಹೆಣ್ಣು ಜನ್ಮ! ಎನ್ನಿಸುತ್ತದೆ. ಅಬ್ಬ, ಎಂಥ ಬೇನೆ ಅದು! ಆಗ ನಾನು ಜೀವದಿಂದುಳಿದದ್ದೇ ಆಶ್ಚರ್ಯದ ವಿಷಯ. ಈರವ್ವ ಬಂದು ನೆರವಾಗ ದಿದ್ದಲ್ಲಿ ನಾನು ಅಂದೇ ಸತ್ತು ಹೋಗಬಹುದಾಗಿತ್ತು.

ನನ್ನ ಹೆರಿಗೆಯ ನಿಮಿತ್ತವಾಗಿ ಇವರು ಎರಡು ದಿನಗಳ ಮಟ್ಟಿಗೆ ರಜೆ ತೆಗೆದುಕೊಂಡಿದ್ದರು. ಆದರೆ, ಗಂಡಸು. ಹೆರಿಗೆಯ ಸಮಯಕ್ಕೆ ನೆರವಾಗುವು ದೆಲ್ಲಿ ಸಾಧ್ಯ? ತಮ್ಮ ತಾಯಿಯನ್ನು ಕರೆದುಕೊಂಡು ಬರುವುದಾಗಿ ಅವರು ಹೇಳಿದರಾದರೂ ನಾನೇ ಬೇಡವೆಂದುಬಿಟ್ಟೆದ್ದೆ.

ನಾನು ಬೇನೆ ತಿನ್ನುತ್ತ ನರಳುವಾಗ ಈರವ್ವ ನನ್ನ ಬೆನ್ನು ಹಿಡಿದು ಕುಳಿತಿರುತ್ತಿದ್ದಳು. ನಮ್ಮಿಂದ ತುಸು ದೂರದಲ್ಲಿಯೇ ಅವರೂ ಕುಳಿತಿರು ತ್ತಿದ್ದರು. ಅವರ ದೃಷ್ಟಿ ನನ್ನ ಮೇಲಿಂದ ಹಾದು ಈರವ್ವನನ್ನೇ ಹುಡುಕಿ ಕೊಂಡು ಹೋಗುತ್ತಿದ್ದುದನ್ನು ನಾನು ಅಂಥ ಸಮಯದಲ್ಲೂ ಗುರುತಿಸದಿರಲಿಲ್ಲ. ಎಷ್ಟು ದಿನಗಳಿಂದ ಈ ಆಟ ನಡೆದಿದ್ದಿತೋ ಏನೊ. ಈರವ್ವನ ಕಣ್ಣು ಅವರ ಮೇಲೆಯೇ ನೆಲಸಿರುತ್ತಿದ್ದುದನ್ನು ಕಂಡುಕೊಂಡಾಗ ನನಗೆ ಮೋಜೆನ್ನಿಸ ದಿರಲಿಲ್ಲ.

ಬೇನೆಯಿಂದ ನರಳುತ್ತಿದ್ದ ಹಾಗೇ ನಾನು ಯೋಚಿಸುತ್ತಿದ್ದೆ: ಕಾಶಪ್ಪ ನನ್ನು ನಾನು ಮಡಗಿಕೊಂಡೆ, ಅವನ ಹೆಂಡತಿಯನ್ನು ನಮ್ಮವರು ಮಡಗಿ ಕೊಂಡಿರುವರೋ ಏನೊ. ಹಾಗಾಗುವುದು ಅಸಹಜವೂ ಆಗಿರಲಿಲ್ಲ. ಹಣ

ದಾಸೆಗಾಗಿ ನಾನು ಕಾಶಪ್ಪನ ಪ್ರೇಯಸಿಯಾಗಿದ್ದೆ, ಮಕ್ಕಳಾಸೆಗಾಗಿ ಈರವ್ವ ನಮ್ಮವರ ಪ್ರೇಯಸಿಯಾಗಿರಬಹುದು. ಗಂಡನಿಂದಂತೂ ಮಕ್ಕಳಾಗುವಂತಿಲ್ಲ ವೆಂಬುದು ಅವಳಿಗೆ ತಿಳಿದಿದೆ. ಹೆಣ್ಣು ಜೀವ. ಮಕ್ಕಳಿಲ್ಲದೆ ಅವಳ ಜೀವನ ಪೂರ್ಣವಾಗದು. ಅಲ್ಲದೆ, ಮನೆಯ ಸಂಪತ್ತಿಗೊಬ್ಬ ಉತ್ತರಾಧಿಕಾರಿ ಬೇಕೇ ಬೇಕಲ್ಲವೆ? ಸರಿ. ಹೇಗಾದರಾಗಲಿ, ಯಾರಿಂದಲಾದರೂ ಆಗಲಿ, ಅಂತೂ ಈರವ್ವನಿಗೊಬ್ಬ ಮಗ ಆಗಬೇಕಾಗಿದೆ. ಅದಕ್ಕಾಗಿಯೇ ನಮ್ಮವರನ್ನು ನೋಡಿ ಕೊಂಡಿರಬೇಕು ಈರವ್ವ.

ಮತ್ತೆ ನನಗೆನ್ನಿಸಿತು: ಕಾಶಪ್ಪ ನನಗೆ ಹಣ ಕೊಡುತ್ತಿದ್ದ ಹಾಗೆ ಈರವ್ವನೂ ನಮ್ಮವರಿಗೆ ಕೊಡುತ್ತಿರಬಹುದೋ ಏನೊ. ಹಣ ತೆತ್ತು ಪರ ಪುರುಷರ ಸಂಗ ಮಾಡುವ ಸ್ತ್ರೀಯರನ್ನು ನಾನಾಗಲೆ ನೋಡಿದ್ದೆ. ನಮ್ಮ ಓಣಿಯಲ್ಲೂ ಅಂಥವರಿದ್ದರು ಮೂರು ನಾಲ್ಕು ಮಂದಿ. ಈರವ್ವನೂ ಅವರ ಸಾಲಿಗೆ ಸೇರಿಕೊಂಡಳೋ ಏನೊ....

ನಿಜವಾಗಿ ನನಗಾಗ ಮತ್ಸರವುಂಟಾಗಬೇಕು ಅವಳ ಬಗೆಗೆ. ಆದರೆ ವಾಸ್ತವವಾಗಿ ಹಾಗೇನೂ ಆಗಲಿಲ್ಲ. ನನಗೆ ಬೇಕಿದ್ದುದನ್ನು ನಾನು ಪಡೆಯು ತ್ತಿಲ್ಲವೇ ಅವಳ ಗಂಡನಿಂದ? ಅವಳಿಗೆ ಬೇಕಿದ್ದುದನ್ನು ಅವಳು ನನ್ನ ಗಂಡ ನಿಂದ ಪಡೆಯುತ್ತಿರುವಾಗ ನಾನೇಕೆ ಕರುಬಬೇಕು? ಅವಳಿಗೂ ಒಂದು ಮಗು ವಾಗಲಿ ಪಾಪ! ಬಹಳ ದಿನಗಳಿಂದ ಹಂಬಲಿಸುತ್ತಿದ್ದಾಳೆ! ಎಂದೇ ನನ ಗೆನ್ನಿಸಿತು.

ಆ ವೈಚಿತ್ರ್ಯವನ್ನು ನೆನೆದಾಗ ಒಮ್ಮೊಮ್ಮೆ ನನಗೆ ನಗು ಬರುತ್ತಿದ್ದಿ ತಾದರೂ ಅದರ ಬಗೆಗೆ ಜುಗುಪ್ಸೆಯೇನೂ ಉಂಟಾಗಲಿಲ್ಲ. ಇಂಥ ವಿಚಾರ ಗಳೆಂಂದರೆ ಹೆಂಗಸರು ಬಹಳ ಹೇಸಿಕೆಪಟ್ಟುಕೊಳ್ಳುವರೆಂದು ಗಂಡಸರಲ್ಲಿ ಸಾಮಾನ್ಯವಾದ ತಿಳಿವಳಿಕೆಯಿರುತ್ತದೆ. ವಾಸ್ತವವಾಗಿ ಹಾಗೆ ಹೆಂಗಸು ಅಸಹ್ಯ ಪಟ್ಟುಕೊಳ್ಳುವುದು ಬಹಳ ಅಪರೂಪವಾಗಿ. ಈ ವಿಷಯಕ್ಕೆ ಅವರು ಅಷ್ಟು ಮಹತ್ವವನ್ನೇ ಕೊಡುವುದಿಲ್ಲ. ತಮ್ಮ ಇಚ್ಛೆಯಂತೆ ಕೆಲಸವಾದರಾಯಿತು, ಅವರು ಹೆಚ್ಚು ಆಳವಾಗಿ ಯೋಚಿಸುವುದೇ ಇಲ್ಲ. ಹೆಂಗಸಿನ ಶೀಲದ ಬಗೆಗೆ ಹೆಂಗಸಿಗಿಂತಲೂ ಗಂಡಸಿಗೇ ಚಿಂತೆ ಹೆಚ್ಚು.

ಕಾಶಪ್ಪನಿಗೆ ಚಿಂತೆಯಾಗಿರಲಾರದೇ ತನ್ನ ಹೆಂಡತಿಯ ಶೀಲದ ಬಗೆಗೆ? ನನ್ನ ಗಂಡನ ಬಗೆಗೆ ಅವನಿಗೆ ಸಂದೇಹವೇ ಇರಲಾರದೆಂದು ತೋರುತ್ತದೆ. ನಾನು ಅವನ ಪ್ರೇಯಸಿಯಾಗಿದ್ದುದರಿಂದ ಅವನ ದೃಷ್ಟಿಯಲ್ಲಿ ನನ್ನ ಗಂಡ ಕೈಲಾಗದವನಾಗಿಯೇ ಕಾಣುತ್ತಿರಲು ಸಾಕು. ಅವರಿಗೆ ಗಂಡಸುತನವೇ ಇರಲಿಕ್ಕಿಲ್ಲವೆಂದೂ ಅವನು ಭಾವಿಸಿರಬಹುದು. ಅದೇ ಕಾರಣದಿಂದ ನಾನು ಅವನ ರಹಸ್ಯ ಪ್ರಣಯಿನಿಯಾಗಿರಬೇಕೆಂದೂ ಅವನು ತಿಳಿದಿರಬಹುದು. ಮದುವೆಯಾದ ಹೆಂಡತಿಯನ್ನೇ ಅಂಕೆಯಲ್ಲಿಟ್ಟುಕೊಳ್ಳದ ಗಂಡಸು ಬೇರೊಬ್ಬರ ಹೆಂಡತಿಯನ್ನು ಕಣ್ಣೆತ್ತಿ ನೋಡುವುದೂ ಅಸಾಧ್ಯವೆಂದೂ ಅವನು ನಂಬಿರಬಹುದು. ಮೊದಲು ಮೊದಲು ನನ್ನ ಗಂಡನಿಲ್ಲದ ವೇಳೆಯಲ್ಲಿ ನಮ್ಮ ಮನೆಗೆ ಬಂದು ಹೋಗುತ್ತಿದ್ದ ಈರವ್ವ ಈಚೆಗೆ ಅವರಿದ್ದಾಗಲೂ ಬಂದು ಒಂದೆರಡು ಗಂಟೆ ಇದ್ದು ಹೋಗುತ್ತಿದ್ದಳು. ಕಾಶಪ್ಪನಿಗೆ ಆ ವಿಚಾರ ಗೊತ್ತಿದ್ದರೂ ಅವನು ಅದಕ್ಕೆ ಅಡ್ಡಿಯೊದಗಿಸಿರಲಿಲ್ಲ. ನಾನು ಬೇನೆ ತಿನ್ನತೊಡಗಿದಂದಿನಿಂದ ರಾತ್ರಿಯೆಲ್ಲವನ್ನು ನಮ್ಮಲ್ಲಿಯೇ ಕಳೆಯುತ್ತಿದ್ದಳು ಈರವ್ವ. ಆಗಲೂ ಸುಮ್ಮನೇ ಇದ್ದ ಕಾಶಪ್ಪ. ನಮ್ಮವರೂ ಮರುಳರು, ಇವನೂ ಮರುಳನೇ ಎಂದು ಯೋಚಿಸಿ ನನಗೆ ನಗುವುಕ್ಕಿ ಬರುತ್ತಿತ್ತು.

ಬೇನೆ ಹೊಡೆಯುತ್ತಿದ್ದ ಸಮಯದಲ್ಲಿ ನಾನು ಕೋಣೆಯನ್ನು ಬಿಟ್ಟು ಕದಲುವಂತಿರಲಿಲ್ಲ. ನನ್ನ ಹತ್ತಿರವೇ ಮಲಗಿಕೊಂಡಿರುತ್ತಿದ್ದ ಈರವ್ವ, ನನಗೆ ಜೊಂಪು ಹತ್ತಿದಾಗ ಮೆಲ್ಲನೆದ್ದು ಹೊರಗೆ ಹೋಗಿ ಬರುತ್ತಿದ್ದುದಿತ್ತು. ನಮ್ಮವರು ಪಡಸಾಲೆಯಲ್ಲಿ ಮಲಗಿಕೊಂಡಿರುತ್ತಿದ್ದರು. ಈರವ್ವ ಅಲ್ಲಿಗೇ ಹೋಗಿ ಬರುತ್ತಿದ್ದ ಬಗೆಗೆ ನನಗೇನೂ ಸಂಶಯವುಳಿದಿರಲಿಲ್ಲ. ಅವಳು ಮತ್ತೆ ನನ್ನ ಬಳಿ ಬಂದಾಗ ರಕ್ತವೇರಿ ಕೆಂಪಗಾದ ಅವಳ ಮುಖವನ್ನು ನೋಡುತ್ತಲೂ ನನಗೆಲ್ಲವೂ ಗೊತ್ತಾಗಿ ಹೋಗುತ್ತಿತ್ತು.

"ಎಲ್ಲಿಗೆ ಹೋಗಿದ್ದಿಯೇ ಈರವ್ವ?"

"ಹೊರಗೆ ಹೋಗಿದ್ದಿನೇಳು, ಕಾಲು ಮಡೀಲಿಕ್ಕೆ," ಎಂದು ತಡವರಿಸುವ ಧ್ವನಿಯಲ್ಲಿ ಹೇಳಿ ತಲೆ ತಗ್ಗಿಸುತ್ತಿದ್ದಳು ಈರವ್ವ.

ಕೊನೆಗೊಮ್ಮೆ ಹೆರಿಗೆಯಾಯಿತು. ಹೆಣ್ಣುಮಗು. ಆ ಮಾಂಸದ ಮುದ್ದೆಯನ್ನು ಮೊದಲ ಬಾರಿ ನಿರೀಕ್ಷಿಸಿದಾಗ ನನಗೆ ಅಂಥ ಸಂತೋಷವೇನೂ ಆಗಲಿಲ್ಲ. ಬೇನೆ ತಿನ್ನುವ ತೊಂದರೆಯಂತೂ ತಪ್ಪಿತಲ್ಲಾ ಎಂದು ಸ್ವಲ್ಪ ಹಾಯೆನ್ನಿಸಿತಷ್ಟೆ.

ಅವರಿಗೆ ಮಾತ್ರ ಪರಮ ಸಂತೋಷವಾಗಿತ್ತು. ಮಗುವನ್ನು ತೊಳೆದು ಮೊರದಲ್ಲಿಟ್ಟ ತರುವಾಯ ಅವರು ಅರ್ಧಗಂಟೆಯವರೆಗೂ ಅದನ್ನೇ ನೋಡುತ್ತಾ ಕುಳಿತುಕೊಂಡಿದ್ದರು.

"ಬಹಳ ನೋಡಬಾರದು ಬಿಡಿರಿ. ಕೂಸಿಗೆ ದಿಟ್ಟಿ ಆದೀತು," ಎಂದು ಈರವ್ವ ಸೌಮ್ಯವಾಗಿ ಗದರಿಸಿಕೊಂಡಾಗಲೇ ಅವರು ಅಲ್ಲಿಂದೆದ್ದುದು.

"ಅವ್ವನ್ನೂ ಅಕ್ಕನ್ನೂ ಕರಕೊಂಡು ಬರ್‍ತೀನಿ ಗಿರಿಜಾ."

"ಹೂಂ," ಎಂದ ನಾನು. ಹೆಚ್ಚು ಮಾತನಾಡಲಿಲ್ಲ: ಅವರು ಬಂದರೂ ಅಷ್ಟೆ, ಬರದಿದ್ದರೂ ಅಷ್ಟೆ ಎಂಬ ಭಾವನೆಯಿಂದ.

ಅವರು ಬಂದರು. ಎರಡು ದಿನ ಇಲ್ಲೇ ಇದ್ದು ಮಗುವಿಗೂ ನನಗೂ ಎಣ್ಣೆ ನೀರು ಹಾಕಿದರು. ಅಡುಗೆ ನೋಡಿಕೊಂಡರು. ಮೂರನೆಯ ದಿನ ನೀಲಕ್ಕ ಬರಲಿಲ್ಲ. ಅತ್ತೆಯೊಬ್ಬಳೇ ಬಂದು ಸಂಜೆಯವರೆಗೂ ಇದ್ದು ಹೊರಟುಹೋದಳು.

"ರಾತ್ರಿ ಇಲ್ಲೇ ಇದ್ದು ಬಿಡಲ್ಲ ಅವ್ವಾ," ಎಂದರವರು.

"ಇಲ್ಲಿದ್ದರೆ ಅಲ್ಲಿಯ ಕೆಲಸ ಯಾರು ಮಾಡುವವರಪ್ಪಾ?" ಎಂದಳು ಅತ್ತೆ.

ಸರಿ – ಅವರೂ ಮತ್ತೆ ಬಲವಂತ ಮಾಡಲಿಲ್ಲ. ನಾಸಂತೂ ಆಕೆಯೊಡನೆ ಮಾತಾಡುತ್ತಿದ್ದುದೇ ಅಪರೂಪವಾಗಿ. ಅವಳು ಬರುವುದನ್ನು ಬಿಟ್ಟರೂ ನನಗೇನೂ ತೊಂದರೆಯಾಗುವಂತಿರಲಿಲ್ಲ. ಈರವ್ವ ಹಗಲಿರುಳೂ ನಮ್ಮಲ್ಲಿಯೇ ಇರುತ್ತಿದ್ದಳಲ್ಲವೆ? ಮಗುವಿಗೆ ನೀರೆರೆಯುವುದರಿಂದ ಮೊದಲುಮಾಡಿಕೊಂಡು ಇವರಿಗೆ ಊಟಕ್ಕಿಡುವವರೆಗೆ ಎಲ್ಲ ಕೆಲಸಗಳನ್ನು ಅವಳು ಮಾಡುತ್ತಿದ್ದಳು.

ಮಗುವನ್ನು ತೊಟ್ಟಿಲಲ್ಲಿ ಹಾಕುವ ದಿನದ ಮಧ್ಯಾಹ್ನ. ಮನೆಯಲ್ಲಿ ನನ್ನನ್ನೂ ಈರವ್ವನನ್ನೂ ಹೊರತುಪಡಿಸಿದರೆ ಇನ್ನಾರೂ ಇರಲಿಲ್ಲ. ಆ ಮಾತು ಈ ಮಾತು ಆಡುತ್ತಾ ನಾನು ಸಹಜವಾಗಿಯೆ ಹೇಳಿದೆ:

" ನಿನಗೂ ಒಂದು ಕಂದನಿರಬೇಕಾಗಿತ್ತು ಈರವ್ವ."

" ಹೌದವ್ವಾ. ಏನು ಮಾಡೂದು? ಮಾದೇವನ ಮರ್ಜಿ," ಎಂದು ಹೇಳಿ ನಿಟ್ಟುಸಿರುಬಿಟ್ಟಳು ಈರವ್ವ. ನಿಟ್ಟುಸಿರಿನ ಹಿಂದೆಯೇ ಅಳುವೂ ಚಿಮ್ಮಿಬಂತು.

" ನಾ ಪುಣ್ಯಗೇಡಿ. ಪಡದು ಬರಲಿಲ್ಲ. ಈ ಜನ್ಮದಾಗ ನನಗೆ ಮಕ್ಕಳ ಸುಖಾ ಸಿಗುತದೋ ಇಲ್ಲೋ."

" ಕಾಶಪ್ಪನವರಿಂದ ಮಕ್ಕಳಾಗೂದೂ ಶಕ್ಯ ಅದನೋ ಇಲ್ಲೋ," ಎಂದು ಮಾತನಾಡಿದೆ ನಾನು, ಮಾರ್ಮಿಕವಾಗಿ.

ಅವಳು ಬೆಚ್ಚಿದಳು, ಅಳು ನಿಲ್ಲಿಸಿದಳು, ಕಂಬನಿ ಮಿಡಿದುಕೊಂಡು ಹೇಳಿದಳು :

" ಹೌದು. ಹಾಗೇ ಕಾಣುತದೆ."

" ಹಾಗಾದರೆ...." ಎಂದೆ ನಾನು.

" ಹಾಗಾದರೆ?" ಎಂದು ಅವಳು ನನ್ನನ್ನೇ ದಿಟ್ಟಿಸತೊಡಗಿದಳು.

ನಾನು ಮುಂದುವರಿಸಿದೆ :

" ನೋಡು ಈರವ್ವ. ಬಹಳ ದಿನದಿಂದ ನನ್ನ ಮನಸ್ಸಿನಾಗ ಒಂದು ಸಂಗತಿ ಕುದೀತಾ ಅದೆ. ಹೆಂಡತಿಗೆ ಮಕ್ಕಳಾಗದಿದ್ದರೆ ಗಂಡಸರು ಮತ್ತೊಂದು ಮದುವೆ ಮಾಡಿಕೊಳ್ಳುತ್ತಾರೆ. ಅವರ ಆಸೆ ಪೂರೈಸುತದೆ. ಸವತಿಗೆ ಮಕ್ಕಳಾದದ್ದು ನೋಡುತ್ತಾ ಮೊದಲನೆಯ ಹೆಂಡತಿ ಹಳಹಳಿಸುತ್ತ ಕೂಡುತ್ತಾಳೆ. ಅವಳಿಗೂ ಮಕ್ಕಳು ಬೇಕು ಅನ್ನುವ ಆಸೆ. ಅದು ಪೂರೈಸುವದು ಹ್ಯಾಗೆ? ಗಂಡ ಇನೊಬ್ಬಳನ್ನು ಮಾಡಿಕೊಳ್ಳುವಂತೆ ಇವಳೂ ಇನ್ನೊಬ್ಬ ಗಂಡನ್ನ ಮಾಡಿಕೊಂಡರೆ ಇವಳಿಗೂ ಮಕ್ಕಳಾದಾವು. ಹೌದೋ ಅಲ್ಲೋ?"

" ಹೌದವ್ವಾ. ನೀನನ್ನೂದು ಖರೆ."

" ಆದರೆ, ಗಂಡಸರು ಮಾಡುವ ಹಾಗೆ ನಾವು ಹೆಂಗಸರು ಮಾಡಲು ಬರೂದಿಲ್ಲ. ನಮಗೆ ಮಕ್ಕಳಾಗದಿದ್ದರೆ ನಮಗೆ ಬಂಜೆ ಅಂತ ಹಳೀತಾರೆ, ಮನೆ

ಬಿಟ್ಟು ಹೊರಗೆ ಹಾಕುತಾರೆ. ಹ್ಯಾಗಾದರೂ ಮಾಡಿ ಮಕ್ಕಳನ್ನು ಹಡೆಯು ಬೇಕೆಂತ ನಾವು ಇನ್ನೊಬ್ಬ ಗಂಡಸನ್ನ ಕೂಡಿಕೊಂಡರೆ ಹ್ಯಾಗೆ?"

ಈರವ್ವ ಮತ್ತೆ ಬೆಚ್ಚಿದಳು. ನ್ಯಾಯಾಧೀಶರೆದುರು ನಿಂತ ಅಪರಾಧಿಯಂತಾಗಿತ್ತು ಅವಳ ಸ್ಥಿತಿ.

"ಹಾಗೆ ಹ್ಯಾಗೆ ಮಾಡಲಿಕ್ಕೆ ಬಂದೀತು ಗಿರಿಜವ್ವ? ರೀತಿ ನೀತಿ ಮಾನಾ ಮರ್ಯಾದಿ ಅಂಬೂದು ಇಲ್ಲೇನು?" ಎಂದು ಹೇಳಿದಳು ಈರವ್ವ, ಪತಿವ್ರತೆಯ ಆ ವಿಭ್ರಾಂವದಿಂದ.

ಅವಳ ನಟನೆಯನ್ನು ಕಂಡು ನನಗೆ ಒಳಗೊಳಗೇ ನಗು ಬರುತ್ತಿದ್ದಿತಾದರೂ ಅದನ್ನು ಹೊರಗೆ ವ್ಯಕ್ತಗೊಳಿಸದೆ ಮಾತನಾಡಿದೆ:

"ಮಾನ ಅಂದರೇನು? ಮರ್ಯಾದಿ ಅಂದರೇನು ಈರವ್ವ?"

ಅವಳು ತಬ್ಬಿಬ್ಬಾದಳು.

"ನಾಲ್ಕು ಮಂದಿ ಇರುವ ಹಾಗೆ ನಾವೂ ಇರಬೇಕು ಗಿರಿಜವ್ವ. ಅದಕ್ಕಿಂತ ಹೆಚ್ಚಿಗೆ ನನಗೇನು ಗೊತ್ತಾಗುವದಿಲ್ಲ."

"ಈ ನಾಲ್ಕು ಮಂದಿ ಅನ್ನುವವರು ಈಗ ಹ್ಯಾಗಿದಾರೆ ಅನ್ನೂದು ನಿನಗೆ ನೆಟ್ಟಗೆ ಗೊತ್ತಿಲ್ಲೇನು ಈರವ್ವಾ?"

"ಅಂದರೆ?"

"ಮಾನ ಮರ್ಯಾದಿಯಿಂದಲೇ ನಡೀತಾ ಇದ್ದಾರೇನು ಎಲ್ಲರೂ? ಕದ್ದು ಮುಚ್ಚಿ ಮಾಡಬಾರದ್ದು ಮಾಡುತ್ತಾ ಮ್ಯಾಲ ಸಂಭಾವಿತತನದ ಸೋಗು ಹಾಕುವವರೇ ಬಹಳ ಮಂದಿ ಈಗಿನ ಕಾಲದಾಗ. ಹೌದೋ ಅಲ್ಲೋ?"

"ಹೌದು. ಅದೂ ಖರೆ."

"ಹೂಂ. ಹೀಗೆ ಬಾ ಹಾದಿಗೆ. ಹೆಂಗಸರ ಮಾತು ಬಿಡೋಣ. ಗಂಡಸರಾದರೂ ಎಷ್ಟು ಮಂದಿ ಪೂರಾ ಸಂಭಾವಿತರಾಗಿದಾರೆ ಹೇಳು. ಹೆಂಗಸರು ಕೆಡೂದಕ್ಕ ಕಾರಣರೂ ಗಂಡಸರೇ ಅಲ್ಲೇನು?"

"ಹೌದು. ಅದೂ ಖರೆ."

"ಈಗ ಹೇಳು ನನಗೆ. ಮಾನಾ ಮರ್ಯಾದಿ ಅನ್ನೂದು ಈಗ ಎಷ್ಟು

ಉಳಿದದೆ ಪ್ರಪಂಚದಾಗ? ಅಲ್ಲ ಈರವ್ವಾ, ಗಂಡಸರು ಬೇಕಾದ್ದು ಮಾಡಿದರೂ ನಡೀತದೆ, ಹೆಂಗಸರೂ ಅಂಥಾದ್ದೇ ಮಾಡಿದರೆ ಮಾತ್ರ ಅವರು ವ್ಯಭಿಚಾರಿಗಳು ಅಂತ ದೂರಿ ಮನೆ ಬಿಡಿಸುತಾರೆ. ಇದೆಲ್ಲಿಯ ನ್ಯಾಯ ಹೇಳು. ದೇವರು ಮೆಚ್ಚಿಯಾನೇ ಇಂಥಾದ್ದನ್ನ?"

"ಹೌದು. ಅದೂ ಖರೆ."

"ನಮಗೆ ಗೊತ್ತಾಗದಂತೆ ಗಂಡಸರು ಮಾಡುತಾರೆ, ಅವರಿಗೆ ಗೊತ್ತಾಗದಂತೆ ನಾವು ಮಾಡಿದರಾಯ್ತು. ನಮಗೂ ಮಕ್ಕಳು ಬೇಕು, ಅವರಿಗೂ ಬೇಕು. ಗಂಡನಿಂದ ಆಗದಂತಿದ್ದರೆ ಇನ್ನೊಬ್ಬರಿಂದ ಆದಾವು. ಅದು ಗಂಡನಿಗೆ ತಿಳೀದಿದ್ದರಾಯಿತಲ್ಲ. ಮಕ್ಕಳು ಯಾರಿಂದ ಆದರೂ ಚಿಂತಿಲ್ಲ, ತಮ್ಮಿಂದಲೇ ಆದವು ಅಂತ ಕುಣಿದಾಡುತಾರೆ ಈ ಗಂಡಸರು – ಹುಚ್ಚರು. ನಾವು ಸ್ವಲ್ಪ ಜಾಣತನ ಉಪಯೋಗ ಮಾಡಿದರೆ ಅವರಿಗೂ ಆನಂದ, ನಮಗೂ ಆನಂದ. ಸವತಿ ಬರುವ ಪ್ರಸಂಗವೂ ತಪ್ಪುತದೆ."

ನನ್ನ ಮಾತು ಈರವ್ವನನ್ನು ದೀರ್ಘಾಲೋಚನೆಗೆ ತೊಡಗಿಸಿರಬೇಕು. ಇನ್ನು ಒಂದೆರಡು ವರ್ಷಗಳಲ್ಲಿ ತನಗೆ ಮಕ್ಕಳಾಗದಿದ್ದರೆ ಗಂಡ ಇನ್ನೊಬ್ಬಳನ್ನು ಮದುವೆಯಾದರೂ ಆಗಬಹುದು. ಹೊಸ ಹೆಂಡತಿ ಮನೆಗೆ ಬಂದ ಬಳಿಕ ಅವನು ತನ್ನನ್ನು ಕಣ್ಣೆತ್ತಿಕೂಡ ನೋಡಲಿಕ್ಕಿಲ್ಲ. ಮುಂದೆ ತನ್ನ ಗತಿಯೇನು? ಮನೆಯಲ್ಲಿ ತನ್ನ ಸ್ಥಾನವೇನು? ನಾಯಿಯ ಹಾಗಾದೀತಲ್ಲ ತನ್ನ ಸ್ಥಿತಿ!

"ನೀನು ಹೇಳೂದು ಬರೋಬರಿ ಗಿರಿಜಕ್ಕ. ಆದರೆ, ಗಂಡನಿದ್ದರೂ ಬ್ಯಾರೆ ಗಂಡಸರ ಹತ್ತರ ಹೋಗೂದು ಹ್ಯಾಗವ್ವ?"

"ಅದರಲ್ಲೇನದೆ? ನಿನ್ನದೇನೂ ತಪ್ಪಿಲ್ಲವಲ್ಲ ಈರವ್ವ? ನಿನ್ನ ಗಂಡನಿಂದಲೇ ನಿನಗೆ ಮಕ್ಕಳಾಗಿದ್ದರೆ ನೀನ್ಯಾಕೆ ಬ್ಯಾರೆ ಗಂಡಸರ ವಿಚಾರಕ್ಕೆ ಬೀಳುತಿದ್ದಿ? ನನ್ನ ಮಾತನ್ನೇ ತಗೊಳ್ಳೋಣ. ನನಗೇನೋ ಮಗುವಾಯ್ತು. ನಾನೂ ತಾಯಿಯಾದೆ. ಒಂದು ವೇಳೆ ನನ್ನ ಗಂಡನಿಂದ ಮಕ್ಕಳೇ ಆಗದಂತಿದ್ದರೆ ನಾನೂ ಬ್ಯಾರೆಯವನನ್ನ ನೋಡಿಕೊಳ್ಳುತಿದ್ದೆ...."

"ಹಾಂ?"

" ಹೌದು. ಸುಳ್ಳಲ್ಲ ಈ ಮಾತು. ಒಂದು ವೇಳೆ ನಿನ್ನ ಗಂಡನಿಂದ ನಿನಗೆ ಮಕ್ಕಳಾಗಿದ್ದರೆ ನಾನೂ ಅವನನ್ನೇ ಹಿಡೀತಿದ್ದೆ."

" ಹಾಗಾದರೆ ನಾನೀಗ ನಿನ್ನ ಗಂಡನ್ನ ಹಿಡೀಲೇನೇ?" ಎಂದು ನಗು ನಗುತ್ತಾ ಕೇಳಿದಳು ಈರವ್ವ.

ನಾನೂ ನಗುತ್ತಾ ಉತ್ತರವಿತ್ತೆ :

" ನಿನಗೆ ಅಷ್ಟು ಮನಸ್ಸಿದ್ದರೆ ಹಿಡೀಬಹುದು. ನನ್ನದೇನೂ ತಕರಾರಿಲ್ಲ. ಆದರೊಂದೇ ಕರಾರು ನೋಡವ್ವ. ನಾ ಎದ್ದು ತಿರುಗಾಡುವಷ್ಟರಲ್ಲಿ ಅವರನ್ನ ಬಿಟ್ಟುಬಿಡಬೇಕು ನೀನು."

ಈರವ್ವ ಗಹಗಹಿಸಿ ನಕ್ಕಳು. ನಾನೂ ಅವಳೊಡನೆ ನಕ್ಕುಬಿಟ್ಟೆ. ಆ ನಗೆಯೇ ನಮ್ಮಿಬ್ಬರಲ್ಲಾದ ಗುಪ್ತ ಒಪ್ಪಂದದ ಸಂಕೇತವಾಯಿತು.

ನಾವು ನಗುತ್ತಲಿದ್ದ ಹಾಗೇ ಅವರು ಬಂದರು. ಅವರ ಹೆಜ್ಜೆಯ ಸದ್ದು ಕೇಳಿಸುತ್ತಲೂ ಈರವ್ವ ಎದ್ದು ಅಡುಗೆಮನೆಯಲ್ಲಿ ಮರೆಯಾದಳು. ಅವರು ಕೈ ಕಾಲು ತೊಳೆದುಕೊಂಡು ಬರಲೆಂದು ಅಡುಗೆಮನೆಗೆ ನುಗ್ಗಿದಾಗ ಏನೇನು ನಡೆಯಿತೋ ನನಗೆ ಗೊತ್ತಾಗಲಿಲ್ಲ. ಅವರು ಅವಳನ್ನು ಹಿಡಿದು ಚುಂಬಿಸಿರ ಬೇಕೆಂದೇ ನನಗೆನ್ನಿಸಿತು.

ಏನೇನನ್ನು ಮಾಡುವರೋ ನೋಡೋಣವೆಂದುಕೊಂಡು ನಾನು ತಲೆತುಂಬಾ ಹೊದ್ದಿಕೆಯೆಳೆದುಕೊಂಡು ನಿದ್ದೆ ಹೋದವಳಂತೆ ನಟಿಸತೊಡಗಿದೆ. ಅವರು ಕೈ ಕಾಲು ತೊಳೆದುಕೊಂಡು, ನನ್ನ ಕೋಣೆಯ ಬಾಗಿಲ ಬಳಿ ಬಂದರು. ನಾನು ನಿದ್ರಿಸುತ್ತಿದ್ದುದನ್ನು ನೋಡಿದವರೇ ಮತ್ತೆ ಅಡುಗೆಮನೆಗೆ ಹೋದರು.

ಅರ್ಧಗಂಟೆ ಕಳೆದ ಬಳಿಕ ಅವರು ಮತ್ತೆ ನನ್ನ ಬಳಿ ಬಂದರು.

" ಗಿರಿಜಾ, ಗಿರಿಜಾ."

ನನಗೆ ಎಚ್ಚರವಿತ್ತು. ಆದರೂ ನಾನು 'ಓ' ಕೊಡಲಿಲ್ಲ.

" ಗಿರಿಜಾ, ಗಿರಿಜಾ, ಏನಿದು ನಿದ್ದೆ ಸಂಜೆಯ ಹೊತ್ತಿನಾಗ? ಏಳು. ಏಳು."

ಅಷ್ಟರಲ್ಲಿ ಮಗುವೂ ಎಚ್ಚೆತ್ತುಕೊಂಡು ಅಳತೊಡಗಿತು. ನಾನೂ ಹೊದ್ದಿಕೆಯನ್ನು ಬದಿಗೆ ಸರಿಸಿ ಮಗುವನ್ನೆತ್ತಿಕೊಂಡೆ.

ಮತ್ತೆ ಸ್ವಲ್ಪ ಹೊತ್ತು ಕಳೆದ ಬಳಿಕ ಅತ್ತೆ, ನೀಲಕ್ಕ, ಅವಳ ಮಕ್ಕಳು ಮಾವ ಎಲ್ಲರೂ ಬಂದರು. ಸುಶೀಲೆಯೂ ಬಂದು ಸೇರಿದಳು. ಮಗುವನ್ನು ತೊಟ್ಟಿಲಲ್ಲಿ ಹಾಕಿ ನಾಮಕರಣ ಮಾಡಲಾಯಿತು – ಸುಲೋಚನಾ ಎಂದು.

## ೨೦

ಬೆಳಿಗ್ಗೆ ಕಾಶಪ್ಪ ಅಂಗಡಿಗೆ ಹೋಗುತ್ತಲೂ ನಮ್ಮ ಮನೆಗೆ ಬರುತ್ತಿದ್ದಳು ಈರವ್ವ. ಅಡುಗೆಮನೆಯಲ್ಲಿ ಅವರು ಒಲೆ ಊದುತ್ತಾ ಕುಳಿತಿರುತ್ತಿದ್ದಳು. ಈರವ್ವ ಬಂದು ಅವರನ್ನೆಬ್ಬಿಸಿ ತಾನೇ ಅಡುಗೆ ಮಾಡುತ್ತಿದ್ದಳು. ಅವರೂ ಅವಳಿಗೆ ನೆರವಾಗುತ್ತಿದ್ದರು. ನಾನು ಬಾಣಂತಿ. ಇನ್ನೂ ಎರಡು ತಿಂಗಳುಗಳ ವರೆಗೆ ತಣ್ಣೀರು ಮುಟ್ಟುವಂತಿರಲಿಲ್ಲ....

ಮೂರು ನಾಲ್ಕು ತಿಂಗಳುಗಳ ಕಾಲ ಹಾಗೆ ಸಾಗಿತು. ಈರವ್ವ ಗರ್ಭ ಧರಿಸಿದ ಲಕ್ಷಣಗಳೂ ಕಾಣಿಸಿಕೊಂಡುವು. ಅವಳಿಗೆ ಹರ್ಷವೂ ಆಯಿತು, ಅದರೊಡನೆಯೇ ಲಜ್ಜೆಯೂ.

" ಇನ್ನು ನೀನೂ ತಾಯಿಯಾಗುವಾಕೆ ಈರವ್ವಾ."

" ಥೂ ಬಿಡೇ!" ಎಂದು ನುಡಿದವಳೇ ಈರವ್ವ ನನ್ನೆದುರು ನಿಲ್ಲದೆ ಹೊರಟುಹೋಗುವಳು.

ಅವಳು ಗರ್ಭಿಣಿಯಾದ ಸಂಗತಿಯನ್ನು ಕಾಶಪ್ಪನಿಗೆ ಮೊದಲಬಾರಿ ತಿಳಿಸಿದವಳು ನಾನೇ. ಅವನ ಮುಖವನ್ನೇ ಸೂಕ್ಷ್ಮವಾಗಿ ದಿಟ್ಟಿಸುತ್ತಾ ಆ ವಿಷಯ ಪ್ರಸ್ತಾಪಿಸಿದೆ. ಅವನ ಮುಖ ಆನಂದದಿಂದ ಅಗಲವಾಯಿತು.

" ಖರೇ ಏನೇ ಗಿರಿಜಾ ?"

" ಮತ್ತೆ ? ನಾನೇನು ಸುಳ್ಳು ಹೇಳುತೀನೇನು ?"

" ಆಕೆ ನನಗೆ ಇದುವರೆಗೂ ಹೇಳಲಿಲ್ಲಲ್ಲ ?"

" ಪಾಪ, ನಾಚಿಕೆ ಅಲ್ಲೇನ್ರೀ ?"

" ಹೌದೌದು," ಎಂದಿಷ್ಟೆ ನುಡಿದು ಅವನು ಸುಮ್ಮನಾದ.

ಮಾರನೆಯ ದಿನ ಈರವ್ವ ಭೆಟ್ಟಿಯಾಗುತ್ತಲೂ ನಾನು ಕೇಳಿದೆ :

" ಕಾಶಪ್ಪನವರಿಗೆ ಸುದ್ದಿ ತಿಳಿಸಿದಿಯಾ ಈರವ್ವಾ ?"

" ಹೂಂ. ನಿನ್ನೆ ರಾತ್ರಿ ಅವರೇ ಕೇಳಿದರು."

" ಏನೆಂದರೇ ಈರವ್ವಾ ?"

" ಐದಾರು ವರ್ಷಗಳಿಂದ ಒಮ್ಮೆಯೂ ಮಾಡದಂಥಾ ಪ್ರೀತಿ ಮಾಡಿದರವ್ವಾ. ನನಗೆ ನಗೆ ಬಿಗಿಹಿಡಿಯಲಿಕ್ಕೇ ಆಗಲಿಲ್ಲ."

" ಗಂಡಸರೆಂದರೆ ಎಂಥಾ ಹುಚ್ಚರಿರ್ತಾರೆ ಅಂತ ನಾ ಮೊದಲೇ ಹೇಳಿದ್ದೆನಿಲ್ಲೋ ನಿನಗೆ? ನಾ ಹೇಳಿದ ಹಾಗೇ ಆಯಿತಿಲ್ಲೋ ?"

" ನಿನ್ನಿಂದ ನಾನೂ ಉಳಿದುಕೊಂಡೆನವ್ವಾ. ಇಲ್ಲದಿದ್ದರೆ ನನ್ನ ತಲಿಯ ಮ್ಯಾಲ ಮೆಣಸು ಅರೆಯೂದಕ್ಕೆ ಯಾವಾಕೆ ಬರ್ತಿದ್ದಳೋ...."

ಗರ್ಭಿಣಿಯಾಗುತ್ತಲೂ ಈರವ್ವ ನಮ್ಮವರ ಹತ್ತಿರ ಬರುವುದನ್ನು ನಿಲ್ಲಿಸಿಬಿಟ್ಟಳು. ಅವಳ ಆಸೆ ಪೂರಯಿಸಿದ್ದಿತಲ್ಲವೆ? ಆದರೆ, ನನ್ನ ಆಸೆ ಮಾತ್ರ ಇನ್ನೂ ತೃಪ್ತಿಹೊಂದಿರಲಿಲ್ಲ. ಸುಲೋಚನೆಗೆ ಐದು ತಿಂಗಳು ತುಂಬುತ್ತಲೂ ಅವಳನ್ನು ಕಂಕುಳಲ್ಲಿಟ್ಟುಕೊಂಡು ನಾನು ಕಾಶಪ್ಪನ ಮನೆಗೆ ಹೋಗತೊಡಗಿದೆ. ಹಿಂದಿನಂತೆಯೇ ಅವನೂ ನಮ್ಮಲ್ಲಿಗೆ ಬರತೊಡಗಿದ.

ಒಂದು ದಿನ ಅವನು ಬಹಳ ಸಂತೋಷದಲ್ಲಿದ್ದ ಸಂಧಿ ಸಾಧಿಸಿ,

" ಇನ್ನು ಮ್ಯಾಲ ನನ್ನ ನೆನಪಾದರೂ ಆಗುತದೋ ಇಲ್ಲೋ ನಿಮಗೆ !" ಎಂದೆ.

" ಯಾಕೆ ಗಿರಿಜಾ ಇಂಥಾ ಮಾತು ?"

" ಇಲ್ಲಿಯತನಕ ನಿಮಗೆ ಮಕ್ಕಳಿರಲಿಲ್ಲ ಅಂತ ಹೆಂಡತಿಯ ಮ್ಯಾಲ ಪ್ರೀತಿಯಿರಲಿಲ್ಲ. ಅದಕ್ಕೆ ನನ್ನ ಹತ್ತರ ಬರುತಿದ್ದಿರಿ. ಇನ್ನೇನು, ಮನೆಯೊಳಗೇ ಮಗ ಹುಟ್ಟುತಾನೆ. ಅವನ್ನ ಬಿಟ್ಟು ನೀವು ಬಂದೀರಾ ?"

" ಅದೇನೇ ? ಸುಲೋಚನೆಯೂ ನನ್ನ ಮಗಳೇ ಅಲ್ಲೇನು ?"

" ಹೌದು. ಮಗನ ಮುಂದೆ ಮಗಳದೇನು ಬಿಡಿರಿ. ನಾಳೆ ಇವಳ ಗತಿ ಏನಾಗುವದೋ. ಇವಳಿಗೇನಾದರೂ ಬೇಕಾದರೆ ಯಾರು ಕೊಡಿಸುವವರು ?"

" ನಾನಿದೀನಲ್ಲ ಗಿರಿಜಾ."

" ಇದ್ದೀರಿ. ನಿಮ್ಮ ಮಗನ ಮುಖ ನೋಡುತಾ ಇವಳನ್ನೂ ನನ್ನನ್ನೂ ಇಬ್ಬರನ್ನೂ ಮರೆತು ಕೂಡುತೀರಿ, ಆಯಿತು."

" ಛೆ. ಛೆ. ಹಾಗೆಂದೂ ಮಾಡಲಿಕ್ಕಿಲ್ಲ. ನಿನ್ನ ಕೈ ಮ್ಯಾಲ ಕೈ ಹಾಕಿ ಆಣೆ ಮಾಡ್ತೀನಿ," ಎಂದ ಕಾಶಪ್ಪ.

" ಏನೋ ಅವ್ವಾ. ನನಗಂತೂ ನಂಬಿಕೆಯಿಲ್ಲ."

ಕಾಶಪ್ಪ ಅದೇ ದಿನವೇ ಐದು ನೂರು ರೂಪಾಯಿ ತಂದುಕೊಟ್ಟ.

" ಸುಲೋಚನಾಗಿರಲಿ ಗಿರಿಜಾ. ಜೋಪಾನವಾಗಿಟ್ಟುಕೋ."

" ಇಷ್ಟರಿಂದ ಏನಾದೀತು ?"

" ಇಷ್ಟೇ ಅಲ್ಲ. ಇನ್ನೂ ಕೊಡ್ತೀನಿ," ಎಂದು ಹೇಳಿದ ಕಾಶಪ್ಪ.

ಹದಿನೈದು ದಿನಗಳ ತರುವಾಯ ಆತ ಮತ್ತೆ ಐದುನೂರು ತಂದುಕೊಟ್ಟ. ಎರಡು ಮೂರು ತಿಂಗಳ ಅವಧಿಯಲ್ಲೇ ಅವನಿಂದ ಎರಡು ಸಾವಿರ ರೂಪಾಯಿ ಕಿತ್ತುಕೊಂಡೆ. ಸುಲೋಚನೆಗೆಂದು ಹತ್ತು ತೊಲೆ ಬಂಗಾರವನ್ನೂ ಅವನು ತಂದುಕೊಟ್ಟ.

" ಇದನ್ನೆಲ್ಲಾ ಎಲ್ಲಿಟ್ಟುಕೊಳ್ಳುತೀ ಗಿರಿಜಾ? ರಾಚಪ್ಪಗೆ ಗೊತ್ತಾದರೆ ಸಂಶಯ ಬರಲಿಕ್ಕಿಲ್ಲವೇನು ?"

" ನನ್ನ ಬಗ್ಗೆ ಯಾವದಕ್ಕೂ ಸ್ವಲ್ಪವೂ ಸಂಶಯ ಬರೂದಿಲ್ಲ ಅವರಿಗೆ. ಅವರೂ ಆಗಾಗ ಅಷ್ಟಿಷ್ಟು ರೊಕ್ಕ ತಂದು ಕೊಡುತಾರಲ್ಲ, ಅದನ್ನೇ ಉಳಿಸಿ ಬಂಗಾರ ತಗೊಂಡಿದ್ದೀನಿ ಅಂತ ಹೇಳಿದರೆ ಮುಗೀತು, ಅವರು ಮತ್ತೊಂದು ಮಾತಾಡಲಿಕ್ಕಿಲ್ಲ."

ಅವರಿಗೇನೋ ಸಂದೇಹ ಬರಲಿಲ್ಲ. ಸುಶೀಲೆ ಮಾತ್ರ ನನ್ನನ್ನು ಸಂಶಯದಿಂದ ನೋಡತೊಡಗಿದಳು.

" ನಿನ್ನ ಬಗ್ಗೆ ಓಣಿಯ ಮಂದಿ ಕುಜುಬುಜು ಮಾಡುತಾರೆ ಗಿರಿಜಕ್ಕಾ," ಎಂದು ಅವಳೊಂದು ದಿನ ಹೆದರುತ್ತ ಹೆದರುತ್ತ ಹೇಳಿದಳು.

" ಕುಜುಬುಜು ಮಾಡುತಾರೇನು ? ಏನಂತ ?"

ಸುಶೀಲೆ ಪೂರಾ ಹೆದರಿದಳು. ಮುಂದೆ ಮಾತನಾಡುವುದಕ್ಕೂ ಅವಳಿಗಾಗಲಿಲ್ಲ.

" ಹೇಳು, ಹೇಳು. ಏನಿದ್ದರೂ ಚಿಂತಿಲ್ಲ."

" ನಾ ಹೀಗೆ ಹೇಳ್ತೀನಿ ಅಂತ ನನ್ನ ಮ್ಯಾಲ ಸಿಟ್ಟಾಗಬಾರದವ್ವ ನೀನು."

" ನಿನ್ನ ಮ್ಯಾಲ ಯಾಕೆ ಸಿಟ್ಟಾದೇನು? ಓಣಿಯ ಹೆಂಗಸರ ಹಾಗೆ ನೀನೇನೂ ಮಾತಾಡಿಲ್ಲಲ್ಲ?"

" ಇಲ್ಲ. ನನಗೇನು ಸಂಶಯ ಇಲ್ಲ ನಿನ್ನ ಬಗ್ಗೆ. ಆದರೆ, ಜನರ ಬಾಯಿ ಕಟ್ಟೋದು ಹ್ಯಾಗೆ ಗಿರಿಜಕ್ಕಾ? ಕೇಳಿ ಕೇಳಿ ನನಗೆ ಬಹಳ ಕೆಟ್ಟೆನ್ನಿಸಿತು."

" ಅವರು ಅನ್ನೋದಾದರೂ ಏನು ಸುಶೀಲಾ?"

ಮತ್ತೆ ಒಂದೆರಡು ನಿಮಿಷ ಸುಮ್ಮನಿದ್ದು ಅವಳು ಹೇಳಿದಳು:

" ಕಾಶಪ್ಪನ್ನೂ ನಿನ್ನೂ ಸೇರಿಸಿ ಏನೇನೋ ಮಾತಾಡುತಾರವ್ವ."

ಆ ಕ್ಷಣಕ್ಕೆ ನನಗೆ ಕೋಪ ಬಂತು. ಬಹಳವಾಗಿ ಕೋಪ ಬಂತು. ಯಾರ ಮೇಲೆ ಕೋಪ? ಏಕೆ? ಜನರು ಸತ್ಯವನ್ನೇ ಆಡುತ್ತಿರುವಾಗ ನಾನು ಕೋಪಿಸಿಕೊಳ್ಳಲು ಕಾರಣವಾದರೂ ಏನಿತ್ತು? ಏನೊ. ಅಂತೂ ನನಗೆ ಕೋಪ ಬಂದದ್ದು ಮಾತ್ರ ನಿಜ. ಸುಶೀಲೆಯ ಮೇಲೂ ಕೋಪ ಬಂತು. ಜನರು ಏನಾದರೂ ಅಂದುಕೊಳ್ಳಲೊಲ್ಲರೇಕೆ? ಇವಳಿಗೇಕೆ ಒಣ ಉಪದ್ವ್ಯಾಪ? ಇವಳೇಕೆ ಆ ಮಾತನ್ನು ಹೇಳಿ ನನ್ನನ್ನು ಅವಮಾನಗೊಳಿಸಬೇಕು? ಆ ವಿಚಾರ ಆಡುವುದರಿಂದ ಇವಳಿಗೂ ಒಂದು ಬಗೆಯ ಆನಂದವಾಗುತ್ತಿರಲು ಸಾಕು. ತನಗಿಲ್ಲದ ಭಾಗ್ಯ ನನಗೆ ದೊರೆತಿದೆಯೆಂದು ಅಸೂಯೆಯೂ ಉಂಟಾಗಿರಬಹುದು ಇವಳಿಗೆ. ಇವಳ ನಡತೆ ನನಗೆ ತಿಳಿಯದುದೇ? ಇವಳ ಬಡಿವಾರವೇನು, ಬಿಂಕವೇನು, ಬಿನ್ನಾಣವೇನು, ಸ್ವೈರ ಸ್ವಚ್ಛಂದ ವರ್ತನೆಯೇನು! ಸಿನಿಮಾ ಥಿಯೇಟರಿನಲ್ಲಿ ಗೆಳೆಯರೊಡನೆ ಇವಳು ನಡಸುವ ಚಕ್ಕಂದವೇನು! ಇಂಥವಳು ನನ್ನ ಬಗೆಗೆ ಇಂಥ ಮಾತು ಆಡುವುದೂ ಸಹಜವಾದುದೇ....

" ಹೊಲಸು ಕೆಲಸಾ ಮಾಡುವವರ ಬಾಯಿಯೊಳಗೆ ಹೊಲಸು ಮಾತೇ ಯಾವಾಗಲೂ!" ಎಂದೆ ನಾನು, ಅವಳ ಮರ್ಮಕ್ಕೆ ಏಟು ಕೊಡುವ ಧ್ವನಿಯಲ್ಲಿ.

ಪಾಪ! ಸುಶೀಲೆಯ ಮುಖ ಚಿಕ್ಕದಾಯಿತು.

"ನನ್ನ ಮ್ಯಾಲ್ಯಾಕೆ ಸಿಟ್ಟಾಗುತೀಯವ್ವಾ? ಮಂದಿ...."

"ಮಂದಿ....ಮಂದಿ....ಮಂದಿ! ಮಂದಿ ಅಂದರೇನು ಹಂದಿ ಇದ್ದ ಹಾಗೆ. ತಮ್ಮ ಮನೆಯೊಳಗೆ ಸೂಳೆಗಾರಿಕೆ ನಡಸುತ್ತಿದ್ದರೂ ನೆರೆಹೊರೆಯವರಿಗೆ ಹೆಸರಿಟ್ಟು ನಗುವ ಹಲ್ಕಾ ಮಂದಿ....ಅವರ ಮಾತು ತಗೊಂಡೇನು ಮಾಡೂದು? ಬರೀ ನನ್ನೊಬ್ಬಳ ಬಗ್ಗೇ ಮಾತಾಡುತಾರಂತೀಯೇನು? ನಿನ್ನ ಬಗ್ಗೆ ಏನೇನು ಮಾತಾಡೂದಿಲ್ಲ ಈ ಮಂದಿ!"

ಸುಶೀಲೆ ಭೂಮಿಗಿಳಿದುಹೋದಳು.

"ನನ್ನ ಬಗ್ಗೂ ಮಾತಾಡುತಾರಂತೀಯಾ? ಏನಂತ?"

ನಾನು ವಿಕಟವಾದ ನಗೆಯೊಂದಿಗೆ ಹೇಳಿದೆ:

"ಸಿನಿಮಾ ನೋಡುವುದಕ್ಕೆ ಹೋದಾಗಲೇ ನೀ ಎಲ್ಲಾ ಸಿನಿಮಾ ಮುಗಿಸಿಕೊಂಡು ಬರುತೀ ಅಂತನ್ನುತಾರವ್ವ."

ವಾಸ್ತವವಾಗಿ ನನ್ನೆದುರಿಗೆ ಯಾರೊಬ್ಬರೂ ಹಾಗೆ ಮಾತಾಡಿರಲಿಲ್ಲ. ನಾನು ಹೇಳುತ್ತಿದ್ದುದು ಸುಳ್ಳೆಂಬುದೇನೊ ನನಗೆ ಗೊತ್ತಿತ್ತು. ಆದರೂ ಆ ಸುಳ್ಳು ಹೊರಬಿತ್ತು ನನ್ನ ಬಾಯಿಂದ. ನನ್ನ ಬಗೆಗೂ ಜನರು ಏನನ್ನೂ ಮಾತಾಡುತ್ತಿರಲಿಕ್ಕಿಲ್ಲ, ಸುಶೀಲೆಯೇ ಎಲ್ಲವನ್ನೂ ಹುಟ್ಟಿಸಿಕೊಂಡು ಹೇಳುತ್ತಿರ ಬಹುದು ಎಂದು ನನಗೆನ್ನಿಸಿದ್ದುದೇ ಕಾರಣವಾಗಿರಬೇಕು ನಾನು ಆ ಮಾತಾಡಲು.

ಸುಶೀಲೆ ಮುಖ ಬಾಡಿಸಿಕೊಂಡು ಹೊರಟುಹೋದಳು. ಮುಂದೆ ಒಂದೆ ರಡು ವಾರ ಅವಳು ನನಗೆ ಮುಖವನ್ನೇ ತೋರಿಸಲಿಲ್ಲ. ಅವಳ ಭೆಟ್ಟಿಯಾಗ ದಿದ್ದುದರಿಂದ ನನಗೇ ಹೇಗೆ ಹೇಗೋ ಅನ್ನಿಸತೊಡಗಿತು. ಅಂದು ನಡೆದ ಆ ಪ್ರಸಂಗವನ್ನು ನಾನು ಯಾವಾಗಲೋ ಮರೆತುಬಿಟ್ಟದ್ದೆ. ಅವಳು ಮರೆತಿದ್ದಳೋ ಇಲ್ಲವೋ....

ಒಂದು ದಿನ ಪೇಟೆಗೆ ಹೋಗಿ ಬರಬೇಕಾಗಿ ಬಂದಾಗ ಸುಶೀಲೆಯ ನೆನಪು ಬಂದು ಅವಳನ್ನು ಕೂಗಿದೆ. ಸುಶೀಲೆಗೆ ಬದಲು ಅವಳ ತಾಯಿ ಕಮಲಾ ಬಾಯಿ ಹೊರಗೆ ಬಂದು ಹೇಳಿದರು:

" ಅವಳಿಗೆ ಮೈಯಲ್ಲಿ ನೆಟ್ಟಗಿಲ್ಲ ಗಿರಿಜವ್ವಾ."

" ಹಾಂ ? ನೆಟ್ಟಗಿಲ್ಲ ? ಏನಾಯ್ತು ?"

" ಏನೋ ಜ್ವರ. ಮೂರು ನಾಲ್ಕು ದಿನವಾಯ್ತು. ಬಿಡವೊಲ್ಲದು."

ನನ್ನ ಕರುಳಿನಲ್ಲಿ ಕಲಮಲವಾಗದಿರಲಿಲ್ಲ. ಒಳಗೆ ಹೋಗಿ ಸುಶೀಲೆಯನ್ನು ಕಂಡು ಮಾತನಾಡಿಸಿದೆ.

" ಏನಾಯಿತೇ ಸುಶೀಲಾ ? ನನಗ್ಯಾಕೆ ಹೇಳಿಕಳಿಸಲಿಲ್ಲ ?"

" ಏನೂ ಇಲ್ಲ ಬಿಡವ್ವ. ಇದೇನೋ ಚಿಲ್ಲರೆ ಜ್ವರ. ಗಾಬರಿಯೇನೂ ಇಲ್ಲ."

" ಔಷಧ ತಗೊಳ್ಳುತಾ ಇದೀಯಾ ಸುಶೀಲಾ ?"

" ಹೂಂ."

" ಡಾಕ್ಟರು ದಿನಾಲೂ ಬಂದು ಹೋಗುತಾರೆ," ಎಂದರು ಕಮಲಾಬಾಯಿ.

ಅಂದು ನಾನಾಡಿದ ಮಾತನ್ನೇ ಮನಸ್ಸಿಗೆ ಹಚ್ಚಿಕೊಂಡು ಕಾಯಿಲೆ ಬಿದ್ದಿರಲಿಕ್ಕಿಲ್ಲವಷ್ಟೇ ಸುಶೀಲಾ ? ಇವಳಿಷ್ಟು ಕೋಮಲ ಹೃದಯದವಳೆಂದು ಯಾರಿಗೆ ಗೊತ್ತಿತ್ತು ? ಗಂಡಸರ ಹಾಗೇ ತುಂಬ ಧೈರ್ಯದಿಂದ ಬೀದಿ ಬೀದಿ ಸುತ್ತುವ ಹುಡುಗಿ; ಇವಳ ಮನಸ್ಸೂ ಅಷ್ಟೇ ಗಟ್ಟಿಯಾಗಿದ್ದೀತು ಎಂದು ನಾನು ಭಾವಿಸಿದ್ದೆ. ಅಂತೆಯೇ ಅವಳ ಮರ್ಮಸ್ಥಾನಕ್ಕೆ ಏಟು ಹಾಕುವಂಥ ಮಾತನ್ನಾಡಲೂ ನಾನು ಹಿಂಜರಿದಿರಲಿಲ್ಲ....

ಕಮಲಾಬಾಯಿ ಅಡುಗೆಮನೆಗೆ ಹೋಗುತ್ತಲೂ, ಸುಶೀಲೆಯ ತಲೆ ಗೂದಲಿನ ಮೇಲೆ ಕೈಯಾಡಿಸುತ್ತ ನಾನೆಂದೆ :

" ಅವತ್ತು ಆಡಿದ ಮಾತು ಮನಸ್ಸಿಗೆ ಹಚ್ಚಿಕೊಂಡೀಯೇನೇ ಸುಶೀಲಾ ?"

ಅವಳ ಕಣ್ಣುಗಳಲ್ಲಿ ಫಳಕ್ಕನೆ ನೀರು ತುಂಬಿ ಬಂತು.

" ಇಲ್ಲವ್ವಾ. ಹಾಗೇನೂ ಇಲ್ಲ, ಹಾಗೇನೂ ಇಲ್ಲ," ಎಂದೇನೋ ಅವಳು ಹೇಳಿದಳಾದರೂ ಅವಳ ಕಾಹಿಲೆಗೆ ಅದೇ ಕಾರಣವೆಂಬುದನ್ನು ಅವಳ ಕಣ್ಣೀರೇ ಸೂಚಿಸುತ್ತಿತ್ತು.

“ ಮನಸ್ಸಿಗೆ ನೋವು ಮಾಡಿಕೋಬ್ಯಾಡವ್ವ ಸುಶೀಲಾ. ನೀ ನನ್ನ ತಂಗಿಯಿದ್ದ ಹಾಗೆ. ನಿನಗೆ ದುಃಖ ಆದರೆ ನನಗೂ ಆಗುತದೆ.”

ಸುಶೀಲೆ ಮತ್ತೆ ಮಾತಾಡಲಿಲ್ಲ. ನನ್ನ ಕೈಯನ್ನು ಹಿಡಿದು ಸ್ನೇಹದಿಂದ ಅದುಮಿದಳು.

## ೨೧

ಇಂದು ನನಗೆ ನಿಜವಾಗಿಯೂ ಈ ಗಂಡಸು ಜಾತಿಯ ಬಗೆಗೆ ಕನಿಕರ ಬರುತ್ತಿದೆ. ಎಂಥ ನಂಬಿಗೆಯ ಪ್ರಾಣಿಗಳಿವು! ನನ್ನ ಶರೀರವನ್ನು ನಾನು ಇನ್ನೊಬ್ಬನಿಗೆ ಮಾರಿ ಹಣ ಗಳಿಸುತ್ತಿದ್ದೆ. ಈರವ್ವ ತನ್ನ ದೇಹವನ್ನು ನಮ್ಮವರಿ ಗರ್ಪಿಸಿ ಗಂಡುಮಗುವಿನ ತಾಯಿಯಾದಳು. ಅದು ತನ್ನಿಂದಲೇ ಜನಿಸಿದ ಮಗುವೆಂದು ನಂಬಿ ಸಂತೋಷಸಾಗರದಲ್ಲಿ ಮುಳುಗಿದ ಕಾಶಪ್ಪ ; ಬುಟ್ಟಿಗಟ್ಟಲೆ ಮಿಠಾಯಿ ತರಿಸಿ ಓಣಿಯಲ್ಲೆಲ್ಲ ಹಂಚಿದ. ನಮ್ಮ ಮನೆಗೂ ಬರದಿರುತ್ತದೆಯೇ ಮಿಠಾಯಿ ? ಅದನ್ನು ತಿನ್ನುವಾಗಲೇ ನನಗೆ ನಗೆಯೇ ನಗೆ. ನಮ್ಮವರೂ ಅಂತ ರಂಗದಲ್ಲೇ ನಕ್ಕುಬಿಟ್ಟಿರಲು ಸಾಕು.

ಈಗ ನಮ್ಮ ಮನೆ ನೋಡುವುದಕ್ಕೆ ಬಹಳ ಅಂದವಾಗಿತ್ತು. ಅಡುಗೆ ಮನೆಯ ತುಂಬಾ ತಾಮ್ರ ಹಿತ್ತಾಳೆಯ ಪಾತ್ರೆಗಳು. ಎರಡು ಮಂಚಗಳು, ಏಳೆಂಟು ಕುರ್ಚಿಗಳು, ಎರಡು ಮೇಜುಗಳು. ಹಾಸಿಗೆ ಹೊದ್ದಿಕೆ. ಎರಡು ಟ್ರಂಕು ತುಂಬುವಷ್ಟು ಪತ್ತಲಗಳು. ಅವರಿಗೂ ಸಾಕಷ್ಟು ಬಟ್ಟೆ ಬರೆ. ಟ್ರಂಕಿನಲ್ಲಿ ಇಪ್ಪತ್ತು ತೊಲೆ ಬಂಗಾರ ಇಷ್ಟರಿಂದಲೂ ತೃಪ್ತಿಯಿರಲಿಲ್ಲ ನನಗೆ. ಈರವ್ವನ ಒಡವೆಗಳನ್ನು ನೋಡಿದಂತೆಲ್ಲ ನನಗೂ ಅಷ್ಟು ಒಡವೆಗಳು ಬೇಕೇ ಬೇಕೆನ್ನಿಸುತ್ತಿತ್ತು. ಮೂವತ್ತು ನಲವತ್ತು ತೊಲೆಗಳಷ್ಟಾದರೂ ಬಂಗಾರ, ಕೈಯಲ್ಲಿ ಎಂಟು ಹತ್ತು ಸಾವಿರ ರೂಪಾಯಿಗಳಾದರೂ ಬೇಕೆನ್ನಿಸುತ್ತಿತ್ತು.

ಮನೆಯಲ್ಲಿನ ಈ ಸಾಮಾನುಗಳಿಗೆಲ್ಲ ಹಣ ಬಂದುದೆಲ್ಲಿಂದ? ಎಂಬ ವಿಚಾರ ಒಂದು ಸಲವೂ ಅವರನ್ನು ಕಾಡಿಸಿದ್ದಂತಿರಲಿಲ್ಲ. ತಾವು ತಂದು ಕೊಟ್ಟ

ಹಣವೆಷ್ಟು? ನಾನು ಖರ್ಚು ಮಾಡುತ್ತಿದ್ದುದೆಷ್ಟು? ಎಂಬ ವಿಚಾರವಾದರೂ ಬರಬೇಡವೆ ಅವರಿಗೆ? ನನ್ನ ಸಿನಿಮಾದ ಚಟಕ್ಕೇ ಅವರ ಸಂಬಳದ ಅರ್ಧ ಹಣ ಖರ್ಚಾಗುತ್ತಿತ್ತು. ಅದನ್ನು ಅವರು ಗಮನಿಸಿದವರಲ್ಲ. ಒಂದು ಬಾರಿ– ಒಂದೇ ಒಂದು ಬಾರಿ– ಅವರು ಸೌಮ್ಯಶಬ್ದಗಳಲ್ಲಿ ಆಕ್ಷೇಪಿಸಿದ್ದರು:

"ಸಿನಿಮಾ ನೋಡೂದರಿಂದ ಕಣ್ಣು ಕೆಡುತಾವೆ ಗಿರಿಜಾ."

"ಕಣ್ಣು ಕೆಟ್ಟರೆ ಚಾಳೀಸು ಹಾಕಿದರಾಯ್ತು. ರೊಕ್ಕ ಖರ್ಚಾಗುತದೆ ಅಂತ ನಿಮಗೆ ಚಿಂತೆಯೋ ಏನೊ. ಸಿನಿಮಾಕ್ಕೆ ಸುಶೀಲಾನೇ ಕೊಡುತಿರುತ್ತಾಳೆ ದುಡ್ಡು."

"ಅವಳ ದುಡ್ಡ್ಯಾಕೆ ಖರ್ಚು ಮಾಡಿಸುತೀ ಗಿರಿಜಾ?"

"ಅಂದರೆ, ಯಾವಾಗಲೂ ಅವಳೇ ಕೊಡುತಾಳಂತಲ್ಲ. ನಾನೊಮ್ಮೆ, ಅವಳೊಮ್ಮೆ."

ಅವರು ಆ ವಿಚಾರವನ್ನು ಅಲ್ಲಿಗೇ ಬಿಟ್ಟು ಬಿಡುತ್ತಿದ್ದರು.

ನಮ್ಮ ಮನೆಯ ವೈಭವವನ್ನು ಕಂಡು ಮಾವನವರಿಗೂ ಸಂದೇಹ ಬಂದಿತ್ತು, ಒಂದೆರಡು ಬಾರಿ.

"ರಾಚಪ್ಪನ ಸಂಬಳವೆಷ್ಟು? ಇದಕ್ಕೆಲ್ಲಾ ರೊಕ್ಕ ಎಲ್ಲಿಂದ ಬಂತು ಗಿರಿಜಾ?"

"ಬರಿಯ ಸಂಬಳದಿಂದ ಹೊಟ್ಟೆ ಕೂಡಾ ತುಂಬಲಿಕ್ಕಿಲ್ಲ ಮಾವಾ.... ಸಂಬಳದ ಹತ್ತರಷ್ಟು ಲಂಚ ಸಿಗುತದೆ ಅವರಿಗೆ."

"ಹುಷಾರಾಗಿರಲು ಹೇಳವ್ವ. ಇಷ್ಟೊಂದು ಲಂಚ ತಿನ್ನೂದು ಚಲೋದಲ್ಲ. ಸಿಕ್ಕಿ ಬಿದ್ದ ಅಂದರೆ ನೌಕರಿಯೇ ಹೋದೀತು. ಹೆಚ್ಚು ಆಸೆ ಮಾಡಬಾರದು," ಎಂದು ಅವರು ಎಚ್ಚರಿಸಿದ್ದರು. ಅವರ ಮಾತನ್ನು ನಾನು ಸರಿಯಾಗಿ ಅರ್ಥಮಾಡಿಕೊಂಡು ಅವರಿಗೂ ಇಪ್ಪತ್ತುರೂಪಾಯಿ ಕೊಟ್ಟು ಕಳಿಸಿದ್ದೆ. ನಾನು ಬಲು ಒಳ್ಳೆಯ ಹೆಣ್ಣು ಎಂದು ಮಾವನವರು ಭಾವಿಸಿರಲು ಸಾಕು. ಅತ್ತೆಯೂ ಹಾಗೇ ಅಭಿಪ್ರಾಯಪಟ್ಟಳಂತೆ. ನೀಲಕ್ಕ ಒಬ್ಬಾಕೆ ಮಾತ್ರ ಆ ಅಭಿಪ್ರಾಯವನ್ನೊಪ್ಪಲಿಲ್ಲ. ನನ್ನ ನೆಲೆ ಯಾರಿಗೂ ಗೊತ್ತಾಗದೆಂದು

ಹೇಳಿದ್ದಳಂತೆ. ಅವರ ಪಕ್ಕದ ಮನೆಯ ಮಲ್ಲಪ್ಪನಿಂದ ನನಗೆ ಗೊತ್ತಾಯಿತು ಆ ಸಂಗತಿ.

ನಾವು ಬೇರೆ ಮನೆ ಮಾಡಿದುದಕ್ಕೆ ನಾಲ್ಕು ವರ್ಷಗಳಾಗಿದ್ದುವು. ಅಷ್ಟರಲ್ಲಿ ನಾನು ಮತ್ತೆ ಗರ್ಭಿಣಿಯಾಗಿದ್ದೆ. ಈ ಬಾರಿ ನಾನು ಗಂಡು ಮಗುವನ್ನೇ ಹೆರುವೆನೆಂದು ಅವರು ಪಣ ತೊಟ್ಟಿದ್ದರು. ಅವರೇ ಗೆದ್ದಂತೆಯೂ ಆಯಿತು. ನಾನು ಗಂಡುಮಗುವಿನ ತಾಯಿಯಾದೆ. ನನ್ನ ಮಗ ಸಿನಿಮಾನಟನಾಗ ಬೇಕೆಂಬ ಹಂಬಲದಿಂದ ನಾನೇ ಅವನಿಗೆ ಕುಮಾರ ಎಂದು ಹೆಸರಿಟ್ಟೆ. ಅವನು ಹುಟ್ಟುವುದಕ್ಕೂ ಎರಡನೆಯ ಮಹಾಯುದ್ಧಕ್ಕಾರಂಭವಾಗುವುದಕ್ಕೂ ಗಂಟು ಬಿತ್ತು.

"ನಿನ್ನ ಕುಮಾರ ಹುಟ್ಟಿ ಜಗತ್ತಿಗೆ ಯುದ್ಧ ತಂದಿಟ್ಟ!" ಎಂದು ಅವರು ಹಾಸ್ಯವಾಡುತ್ತಿದ್ದರು.

"ಅವನೇನು ಯುದ್ಧಕ್ಕೆ ಗಿದ್ಧಕ್ಕೆ ಹೋಗುವದಿಲ್ಲ," ಎಂದು ನಾನು ಹೇಳುತ್ತಿದ್ದೆ.

"ಮನೆಯಲ್ಲೇ ಯುದ್ಧ ಮಾಡಿದರೆ?"

"ಊ ಹೂಂ. ನಮ್ಮ ಕುಮಾರ ಅಹಿಂಸಾವಾದಿ. ಗಾಂಧಿಯವರ ಶಿಷ್ಯ."

ಕುಮಾರ ಮಗುವಾಗಿದ್ದಾಗಿನಿಂದಲೂ ಸ್ವಲ್ಪ ಹಟಮಾರಿಯೇ. ಹೊತ್ತು–ವೇಳೆ ನೋಡದೆ ಲಹರಿ ಬಂದಾಗಲೆಲ್ಲಾ ಅಳುವುದು ಅವನ ದುರಭ್ಯಾಸವಾಗಿತ್ತು. ಅವನನ್ನೆತ್ತಿಕೊಂಡು ತಿರುಗುವುದಕ್ಕೇ ಒಂದು ಆಳು ಬೇಕಾಗುತ್ತಿತ್ತು, ಯಾವಾಗಲೂ. ಸುಲೋಚನಾ ಇನ್ನೂ ಚಿಕ್ಕ ಮಗು. ಕುಮಾರನನ್ನು ಅವಳು ಎತ್ತಿಕೊಳ್ಳುವಂತಿರಲಿಲ್ಲ. ನನಗಾದರೋ ಮನೆ ಗೆಲಸಗಳು.

"ಸ್ವಲ್ಪ ಎತ್ತಿಕೊಳ್ಳಾಕ್ರೀ ಹುಡುಗನ್ನ?" ಎಂದು ನಾನು ಅವರಿಗೆ ಕೂಗಿ ಹೇಳುತ್ತಿದ್ದೆ.

"ನಾ ಲೆಕ್ಕ ಮಾಡುತಾ ಇದೀನಿ. ನೀನೇ ಎತ್ತಿಕೋ," ಎಂದು ಅವರು ಹೇಳುತ್ತಿದ್ದರು.

"ಅಲ್ಲೂ ಲೆಕ್ಕ, ಇಲ್ಲೂ ಲೆಕ್ಕ. ನಿಮಗೇನು ಊಟ ಬೇಕೋ ಬ್ಯಾಡೋ ?" ಎಂದು ನಾನು ಆರ್ಭಟಿಸುತ್ತಿದ್ದೆ.

"ನೋಡಿದಿಯಾ, ಮನೆಯೊಳಗೆ ಯುದ್ಧ ಸುರುವಾಯ್ತು," ಎಂದು ನಗಲಾರಂಭಿಸುತ್ತಿದ್ದರವರು.

ಕುಮಾರ ಒಳ್ಳೆಯ ಸ್ಫುರದ್ರೂಪಿಯಾಗಿದ್ದ. ಬಣ್ಣ, ಕಣ್ಣು, ಮೂಗು ಎಲ್ಲವೂ ನನ್ನ ಹಾಗೆ. ಸುಲೋಚನೆಗೂ ಅವನಿಗೂ ಬಹಳ ವ್ಯತ್ಯಾಸವಿತ್ತು. ಅವರಿಬ್ಬರೂ ಸೋದರ ಸೋದರಿಯರೆಂದು ಹೇಳುವುದಕ್ಕೂ ನಾಚಿಕೆಯಾಗುವಂತಿತ್ತು. ಸುಲೋಚನೆಯ ಮೈ ಬಣ್ಣ ಸ್ವಲ್ಪ ಕಪ್ಪು. ಮೂಗು ಮೊಂಡ. ಕಣ್ಣು ಮಾತ್ರ ಅಗಲವಾಗಿದ್ದುವು. ಕುಮಾರ ಸುಂದರ ಯುವಕನಾಗುವನೆಂದು ನನಗೆ ನಂಬಿಕೆಯಿತ್ತು. ಅವನ ಬಾಲಲೀಲೆಗಳನ್ನು ನಿರೀಕ್ಷಿಸುತ್ತ ನಲಿದುದೆಷ್ಟು ಸಲವೊ! ಅವನು ನಿದ್ರಿಸುವವರೆಗೂ ನಾವಿಬ್ಬರೂ ಅವನನ್ನೇ ನೋಡುತ್ತ ಆನಂದದಲ್ಲಿ ಹೊತ್ತು ಕಳೆಯುತ್ತಿದ್ದುದಿತ್ತು. ಇಂಥ ಪ್ರೀತಿಯ ಗಂಡ, ಎರಡು ಮಕ್ಕಳು ಇರುತ್ತಾ ಇನ್ನಾದರೂ ಕಾಶಪ್ಪನ ಸಹವಾಸ ಬಿಡಬೇಕೆಂದು ಎಷ್ಟೋ ಬಾರಿ ಅನ್ನಿಸಿತ್ತು. ಆದರೆ, ಅವನಿಂದ ಹಣ ಸಿಗುವದು ನಿಂತು ಹೋಗುವುದಲ್ಲ. ಮನೆಗೆ ಹರಿದು ಬರುತ್ತಿದ್ದ ಆ ಲಕ್ಷ್ಮಿಯನ್ನು ನಾನಾಗೇ ಕಳೆದುಕೊಳ್ಳಲು ನನಗೆ ಇಷ್ಟವಿರಲಿಲ್ಲ. ಕಾಶಪ್ಪನಿಗೂ ನನ್ನ ಹುಚ್ಚು ಹೋಗಿರಲಿಲ್ಲ, ಇನ್ನು. ಇವರಿಗೆ ರಾತ್ರಿ ಕೆಲಸದ ಸರದಿ ಬರುವುದನ್ನೇ ಅವನು ಕಾಯುತ್ತ ಕೂಡುತ್ತಿದ್ದ.

ಅತ್ತ ಈರವ್ವನಿಗೂ ಒಂದೇ ಮಗುವಿನಿಂದ ತೃಪ್ತಿಯಿದ್ದಂತಿರಲಿಲ್ಲ.

"ಮನೆಗೆ ದೀಪವಾಗುವದಕ್ಕೆ ಗಂಡುಮಗನ್ನ ಹಡೆದೆ. ಇನ್ನೊಂದು ಹೆಣ್ಣು ಹುಟ್ಟಿದರೆ ಚಂದ ನೋಡವ್ವಾ," ಎನ್ನುತ್ತಿದ್ದಳು ಈರವ್ವ.

"ಹೌದೌದು. ಮನೆಯೊಳಗೆ ಹೆಣ್ಣಿದ್ದರೇ ಚೆಂದು," ಎಂದು ನಾನೂ ಅವಳನ್ನು ಪುಸಲಾಯಿಸುತ್ತಿದ್ದೆ.

ಅವಳು ನಮ್ಮಲ್ಲಿಗೆ ಬಂದಾಗಲೆಲ್ಲ ಸಮಯ ಸಾಧಿಸಿ ಇವರೊಡನೆ ಮಾತಾಡುವಳು. ನಾನೂ ಕಾಶಪ್ಪನ ಮನೆಗೆ ಹೋಗುತ್ತಿದ್ದೆ. ಅವನಿಗೂ ಇವರಿಗೂ ಪರಿಚಯ ಬೆಳೆದು ಒಬ್ಬರು ಇನ್ನೊಬ್ಬರ ಮನೆಗೆ ಬರುವುದಕ್ಕೂ

ಆರಂಭವಾಗಿತ್ತು. ಅವರಿಲ್ಲದ ಸಮಯ ಸಾಧಿಸಿ ಕಾಶಪ್ಪ ಮಧ್ಯಾಹ್ನದ ವೇಳೆಯಲ್ಲೂ ನಮ್ಮಲ್ಲಿಗೆ ಬಂದು ಹೋಗುತ್ತಿದ್ದ. ಈರವ್ವನೂ ಹಾಗೆಯೇ. ಅವಳಿಗಂತೂ ನನ್ನ ಹೆದರಿಕೆಯೂ ಇರಲಿಲ್ಲವಲ್ಲ. ಹಂಬಲಿಸಿದಂತೆಯೇ ಅವಳು ಮತ್ತೆ ಗರ್ಭವತಿಯಾಗಿ ಹೆಣ್ಣು ಹೆತ್ತಳು. ಆಗಲೂ ಮಿಠಾಯಿ ಹಂಚಲು ಮರೆಯಲಿಲ್ಲ ಕಾಶಪ್ಪ. ಓಣಿಯವರೆಲ್ಲಾ ಮಿಠಾಯಿ ತಿಂದು ನಮ್ಮನ್ನಾಡಿ ಕೊಂಡು ನಕ್ಕರು. ಇತ್ತಿತ್ತಲಾಗಿ, ಜನರ ಟೀಕೆಗಳಿಗೆ ಲಕ್ಷ್ಯವನ್ನೇ ಕೊಡುತ್ತಿರ ಲಿಲ್ಲ ನಾನು.

ಸುಶೀಲೆಯ ತಂದೆ ಕೆಲಸದಿಂದ ನಿವೃತ್ತರಾಗಿದ್ದರು. ಅವಳಿಗೊಬ್ಬ ವರನನ್ನು ಗಂಟು ಹಾಕಬೇಕೆಂದು ಅವರು ಪ್ರಯತ್ನಿಸಿದುದೆಲ್ಲ ವ್ಯರ್ಥವಾಗಿತ್ತು. ಆಕೆ ಮನೆಯಲ್ಲಿ ಕುಳಿತು ಮಾಡುವುದಾದರೂ ಏನನ್ನು ? ಅಂತೆಯೇ, ಶಿಕ್ಷಿಕೆಯ ಕೆಲಸ ಸಂಪಾದಿಸಲು ಓಡಿಯಾಡುತ್ತಿದ್ದಳು ಸುಶೀಲೆ. ನನ್ನ ಶೀಲದ ಬಗೆಗೆ ಅವಳಲ್ಲಿ ಸಂದೇಹವಿದ್ದಂತೆ ಅವಳ ಶೀಲದ ಬಗೆಗೂ ನನ್ನಲ್ಲಿ ಸಂದೇಹವಿತ್ತು. ಮ್ಯಾಟ್ರಿಕ್ ಪಾಸುಮಾಡಿದ ಇಪ್ಪತ್ತು ವರ್ಷಗಳ ಅವಿವಾಹಿತ ಹುಡುಗಿ. ಮೊದಲಿನಿಂದಲೂ ಷೋಕಿಯಲ್ಲಿ ಪ್ರೇಮ. ಚಂಚಲ ಸ್ವಭಾವ ನಿವೃತ್ತನಾಗಿದ್ದ ತಂದೆಯಿಂದ ಅವಳ ಷೋಕಿಗೆ ದುಡ್ಡು ಸಿಕ್ಕುವುದೆಲ್ಲಿ ಸಾಧ್ಯ? ಸರಿ. ನನ್ನ ಹಾಗೇ ಅವಳೂ ಯಾರನ್ನಾದರೂ ನೋಡಿಕೊಂಡಿರಬೇಕೆಂದು ನನಗೆನ್ನಿಸು ತ್ತಿತ್ತು. ಅವಳು ಮಾತ್ರ ನನ್ನ ಹತ್ತಿರ ತನ್ನ ರಹಸ್ಯಗಳಾವುವನ್ನೂ ಹೇಳಿರಲಿಲ್ಲ. ನನಗೂ ಸಹ ಅವುಗಳನ್ನು ತಿಳಿದುಕೊಳ್ಳುವ ಅಭಿಲಾಷೆಯಿರಲಿಲ್ಲ.

ಕುಮಾರ ಹುಟ್ಟಿ ಎರಡು ವರ್ಷಗಳಾಗಿರಬಹುದು. ಹೆಚ್ಚು ಹಣ ಸಿಗುವ ಸುಂಕದ ಕಟ್ಟಿಯ ಕೆಲಸ ದೊರಕಿಸಲು ಇವರು ಯತ್ನಿಸುತ್ತಿದ್ದರು. ಸುಂಕದ ಕಟ್ಟೆಗಳ ಮೇಲ್ವಿಚಾರಣೆಯ ಅಧಿಕಾರಿಯಾಗಿದ್ದ ಮಲ್ಲೇಶಪ್ಪನೂ ನಮ್ಮ ಜಾತಿಯವನೇ. ಹಾಗೆಂದು ಅವನು ನಮ್ಮವರಿಗೆ ಪುಕ್ಕಟೆಯಾಗಿ ಸಹಾಯ ಮಾಡಲು ಸಿದ್ಧನಿರಲಿಲ್ಲ.

“ಮಲ್ಲೇಶಪ್ಪ ಮನಸು ಮಾಡಿದರೆ ನನಗೆ ಆ ಕಟ್ಟೆ ಸಿಗಬಹುದು. ಅದು ಸಿಕ್ಕರೆ ಒಂದೇ ವರ್ಷದೊಳಗಾಗಿ ಸಾವಿರಾರು ರೂಪಾಯಿ ಗಳಿಸಬಹುದು ನೋಡು ಗಿರಿಜಾ,” ಎಂದು ಅವರೊಮ್ಮೆ ಹೇಳಿದರು.

ಸಾವಿರಾರು ರೂಪಾಯಿ ಎನ್ನುತ್ತಲೂ ನನ್ನ ಎದೆ ಪುಲಕಿತವಾಯಿತು. ಆ ಸುಸಂದರ್ಭವನ್ನು ಕಳೆದುಕೊಳ್ಳಬಾರದೆಂದು ನಿಶ್ಚಯಿಸಿ ನಾನೆಂದೆ:

"ಹಾಗಾದರೆ ಅವನನ್ನ ಬಿಡಬ್ಯಾಡಿರಿ. ಅವನೂ ನಮ್ಮವನೇ ಅಲ್ಲೇನು? ಜಾತಿಯ ಅಭಿಮಾನದಿಂದ ನಿಮ್ಮನ್ನೇ ಅಲ್ಲಿ ಹಾಕಬಹುದಲ್ಲ?"

ಅವರು ಮುಗುಳ್ನಕ್ಕು ಹೇಳಿದರು:

"ಇಂದಿನ ಜಗತ್ತಿನೊಳಗೆ ಜಾತಿಯ ಅಭಿಮಾನಕ್ಕಿಂತ ದುಡ್ಡಿನ ಅಭಿಮಾನವೇ ದೊಡ್ಡದು ಗಿರಿಜಾ."

"ಅಂದರೆ?"

"ಅಂದರೆ....ನಮಗೆ ಸಿಗುವ ಹಣದಲ್ಲಿಂದ ಮಲ್ಲೇಶಪ್ಪಗೆ ಪ್ರತಿತಿಂಗಳೂ ಇಪ್ಪತ್ತೈದು ರೂಪಾಯಿ ಕೊಡಬೇಕಾಗುತದೆ. ಮೊದಲಿನಿಂದ ಬಂದ ಮಾಮೂಲು ಅದು."

ಆ ಮಾತು ಕೇಳಿ ನನ್ನ ಹೊಟ್ಟೆಯುರಿಯಿತು. ರಾತ್ರಿ ಹಗಲು ಸುಂಕದ ಕಟ್ಟೆಯಲ್ಲಿ ಕುಳಿತು ಸಂಪಾದಿಸುವವರು; ಇವರು ಏನನ್ನು ಮಾಡದೆ ಇಪ್ಪತ್ತೈದು ರೂಪಾಯಿ ಹೊಡೆದುಕೊಳ್ಳುವವನು ಮಲ್ಲೇಶಪ್ಪ. ಇದೆಂಥ ಅನ್ಯಾಯ!

"ಮಲ್ಲೇಶಪ್ಪ ಹೀಗೆ ಹಣ ತಗೊಳ್ಳುವದು ಮುನ್ಸಿಪಾಲ್ಟಿ ಅಧ್ಯಕ್ಷರಿಗೆ ಗೊತ್ತಿಲ್ಲವೇನ್ರಿ?"

"ಗೊತ್ತಿರದೇನು? ಎಲ್ಲರಿಗೂ ಗೊತ್ತೇ ಅದೆ."

"ಚೀಫ್ ಆಫೀಸರಿಗೆ?"

"ಅವರಿಗೂ."

"ಅವರೆಲ್ಲಾ ಸುಮ್ಮನೇ ಇರುತಾರೇನು?"

"ಮತ್ತೇನು ಮಾಡಿಯಾರು? ಮಲ್ಲೇಶಪ್ಪ ಒಬ್ಬನೇ ಅಂತ ತಿಳಿದೀಯಾ ಮುನ್ಸಿಪಾಲ್ಟಿಯೊಳಗೆ ಲಂಚ ತಿನ್ನುವವ? ಕಾರಕೂನರಿಂದ ಹಿಡಿದುಕೊಂಡು ಅಧ್ಯಕ್ಷರ ತನಕ ಎಲ್ಲರೂ ತಿನ್ನುತಾರೆ. ಒಬ್ಬರ ಗುಟ್ಟು ಇನ್ನೊಬ್ಬರಿಗೆ ಗೊತ್ತು. ಅದಕ್ಕೇ ಎಲ್ಲರೂ ಸುಮ್ಮನಿರುತಾರೆ ಆಯ್ತು."

"ಅಧ್ಯಕ್ಷರೂ ತಿನ್ನುತಾರೆ ಅಂತೀರಾ?"

"ಅವರದು ಸಣ್ಣ ಪುಟ್ಟ ಕೆಲಸ ಅಲ್ಲ ಗಿರಿಜಾ. ಯಾವದಾದರೂ ಟೆಂಡರೋ ಕಂಟ್ರಾಕ್ಟೋ ಕೊಡುವಾಗ ಸಾವಿರಗಟ್ಟಲೆ ಹೊಡೀತಾರೆ."

"ಮುನ್ಸಿಪಾಲ್ಟಿ ಮೆಂಬರಾಗುವದಕ್ಕೂ ಅಧ್ಯಕ್ಷ ಆಗುವದಕ್ಕೂ ಇವರು ಇಷ್ಟೊಂದು ಬಡಿದಾಡೂದು ಇದಕ್ಕೇ ಅನ್ನಿರಿ ಹಾಗಾದರೆ? ಏನೋ ಒಣಾ ದೊಡ್ಡಿಸ್ತನಕ್ಕೆ ಬಡಿದಾಡುತಾರಂತ ನಾ ತಿಳಿದಿದ್ದೆ ಇಷ್ಟು ದಿನ!"

"ಹುಚ್ಚಿಯೇ ಹುಚ್ಚಿ!" ಎಂದು ಅವರು ಮತ್ತೆ ನಕ್ಕರು.

"ಮಲ್ಲೇಶಪ್ಪನನ್ನ ಮನೆಗೆ ಕರಕೊಂಡು ಬಂದು ಚಹಾ ಕೊಡಬೇಕು ಅಂತ ಮಾಡೀನಿ," ಎಂದರವರು.

"ಕರಕೊಂಡು ಬರ್ರ್ಯಲ್ಲ!" ಎಂದು ನಾನೂ ಹೇಳಿದೆ.

ಎರಡು ದಿನ ಬಿಟ್ಟು ಅವರು ಅವನನ್ನು ಕರೆದುಕೊಂಡು ಬಂದರು. ಅವನು ನಲವತ್ತು ನಲವತ್ತೆರಡರ ಪ್ರೌಢವ್ಯಕ್ತಿ. ದಪ್ಪಗೆ ಗುಂಡಗೆ ಇದ್ದ ದೇಹ. ಮುಂದೆ ಬಂದ ಹೊಟ್ಟೆ. ಬೋಳುತಲೆ. ಕಡ್ಡಿ ಮೀಸೆ. ಚಿಕ್ಕ ಚಿಕ್ಕ ಕಣ್ಣುಗಳು. ಸಿನಿಮಾಗಳಲ್ಲಿನ ಹಾಸ್ಯಪಾತ್ರದಂತೆ ಕಾಣುತ್ತಿದ್ದ.

ಉಂಡೆ, ಅವಲಕ್ಕಿ, ಚಹಾ ಕೊಟ್ಟು ಅವನನ್ನು ಉಬ್ಬಿಸಿದುದಾಯಿತು. ಮಲ್ಲೇಶಪ್ಪ ತಿಂಡಿ ತಿನ್ನುವುದನ್ನು ಮರೆತು ನನ್ನನ್ನೇ ಮಿಕಿ ಮಿಕಿ ನೋಡುತ್ತಿದ್ದ. ಅದನ್ನು ಕಂಡು ನಮ್ಮವರಿಗೇನೆನ್ನಿಸಿತೊ ಏನೊ. ನಾನು ಸಂಕೋಚವನ್ನು ನಟಿಸುತ್ತಿದ್ದೆನಾದರೂ ಒಳಗೊಳಗೇ ಹರ್ಷಿತಳಾಗದಿರಲಿಲ್ಲ – ನನ್ನನ್ನು ಎಲ್ಲರೂ ಬಯಕೆಗಣ್ಣಿನಿಂದಲೇ ನೋಡುವರಲ್ಲಾ ಎಂದು!

ಚಹಾ ಮುಗಿಯುತ್ತಲೂ ನಾನೇ ಎಲೆ ಅಡಿಕೆ ಮಡಿಸಿ ಕೊಟ್ಟೆ. ಮಲ್ಲೇಶಪ್ಪ ನನ್ನನ್ನು ಓರೆಗಣ್ಣಿನಿಂದ ದಿಟ್ಟಿಸುತ್ತ,

"ನಿಮ್ಮ ಮನೆ ಬಹಳ ಅಚ್ಚುಕಟ್ಟಾಗಿದೆ ರಾಚಪ್ಪ!" ಎಂದ.

"ಎಲ್ಲಾ ನಮ್ಮ ಹೆಂಗಸರ ಶಿಸ್ತು!" ಎಂದರವರು.

"ನಮ್ಮ ಮನೆಯಲ್ಲಿ ಕೂಡಾ ಇಷ್ಟು ಚೆಂದ ಇಲ್ಲರೀ. ಎಲ್ಲಾ ಅವ್ಯವಸ್ಥೆ. ಮುಖ್ಯ – ಮನೆಯ ಒಡತಿ ಜಾಣೆಯಾಗಿರಬೇಕು," ಎಂದ ಮಲ್ಲೇಶಪ್ಪ.

ನನ್ನನ್ನು ಹೊಗಳುವುದಕ್ಕೆಂದೇ ಅವನು ಹಾಗೆ ಮಾತಾಡುತ್ತಿದ್ದುದು ಸ್ಪಷ್ಟವಿತ್ತು. ಅವನ ಉದ್ದೇಶವನ್ನು ನಾನು ಅರಿತುಕೊಳ್ಳದಿರಲಿಲ್ಲ.

"ನೀನು ತಕ್ಕೊಳ್ಳುವ ಇಪ್ಪತ್ತೈದು ರೂಪಾಯಿ ಬಿಟ್ಟುಬಿಟ್ಟರೆ ನಿನ್ನ ಬಯಕೆಯನ್ನ ಪೂರೈಸಿಕೊಡುತ್ತೀನಿ," ಎಂದು ನಾನು ಮನಸ್ಸಿನಲ್ಲೇ ಹೇಳಿಕೊಂಡೆ.

ಎಂಥ ಅಸಹ್ಯವಿಚಾರ! ಎನ್ನುವಿಯಲ್ಲವೇ ನೀನು, ಪ್ರಿಯಸಖಿ?

ಅದು ಸಹ್ಯವೋ ಅಸಹ್ಯವೋ ನಾನರಿಯೆ. ಅಂತು, ಆ ಕಾಲಕ್ಕೆ ಆ ವಿಚಾರ ನನ್ನೆದೆಯಲ್ಲಿ ಮೂಡಿದ್ದುದು ಮಾತ್ರ ಸತ್ಯ. ಜಗತ್ತಿನಲ್ಲಿನ ಎಲ್ಲ ಹಣವೂ ನನಗೇ ಸಿಕ್ಕಬೇಕೆಂದು ಆಶಿಸುತ್ತಿದ್ದ ನಾನು ನನ್ನ ಶೀಲ, ಮಾನ, ಮರ್ಯಾದೆಗಳೆಲ್ಲವನ್ನು ಗಾಳಿಗೆ ತೂರಿಬಿಟ್ಟಿದ್ದೆನಲ್ಲವೆ? ಅಂಥ ಯೋಚನೆ ಬರುವುದು ಉಚಿತವಲ್ಲವೆಂದು ನನಗಾಗ ಹೊಳೆಯುತ್ತಿರಲೇ ಇಲ್ಲ. ಆಗಲೇ ಹಾಗೆ ಅನ್ನಿಸಿದ್ದಲ್ಲಿ ನನಗಿಂದು ಇಂಥ ಪ್ರಸಂಗವೇ ಬರುತ್ತಿರಲಿಲ್ಲವೇನೊ. ಎಂದೋ ಒಂದು ಬಾರಿ ವಿವೇಕ ಮೂಡುತಿದ್ದಿತಾದರೂ ಬಿಸಿಲುಗಾಲದ ಮೋಡದಂತೆ ಕ್ಷಣಾರ್ಧದಲ್ಲೇ ಚದರಿಹೋಗುತ್ತಿತ್ತು. ದುಡ್ಡಿದ್ದವನೇ ದೊಡ್ಡಪ್ಪ, ದುಡ್ಡಿದ್ದವಳೇ ದೊಡ್ಡವ್ವ. ನನ್ನ ಹತ್ತಿರ ಸ್ವಲ್ಪ ದುಡ್ಡಿದೆಯೆಂದು ಗೊತ್ತಾದ, ಕ್ಷಣವೇ ನನ್ನ ಅತ್ತೆ ತನ್ನ ಗಂಡನನ್ನು ನನ್ನ ಬಳಿಗೆ ಕಳಿಸಿರಲಿಲ್ಲವೆ? 'ತಿರುಕನ ಮಗಳು' ಎಂದು ನನ್ನನ್ನು ಹೀಯಾಳಿಸಿದ ಅದೇ ಅತ್ತೆ!

....ಮಲ್ಲೇಶಪ್ಪ ಮತ್ತೆ ಮೂರು ನಾಲ್ಕು ಬಾರಿ ನಮ್ಮ ಮನೆಗೆ ಬಂದು ಹೋದ. ಅವನು ಬಂದಾಗಲೆಲ್ಲ ಇವರೂ ಇರುತ್ತಿದ್ದರಾದುದರಿಂದ ನನ್ನೊಡನೆ ಸರಸ ಬೆಳೆಸುವ ಅವಕಾಶ ಅವನಿಗೆ ಲಭಿಸಲಿಲ್ಲ. ಇವರಿಲ್ಲದಾಗ ಬಂದು ಹೋಗುವಷ್ಟು ದಿಟ್ಟತನವೂ ಅವನಲ್ಲಿರಲಿಲ್ಲವೇನೊ. ನಾನು ಕೊಟ್ಟ ತಿಂಡಿ ತಿಂದು, ಚಹ ಕುಡಿದು, ಎಲೆ ಅಡಿಕೆ ಜಗಿದು, ನನ್ನೊಡನೆ ಒಂದೆರಡು ಮಾತಾಡಿ, ನನ್ನನ್ನು ಕಣ್ಣುತುಂಬಾ ನೋಡುವುದರಿಂದಲೇ ಅವನು ತೃಪ್ತಿಪಟ್ಟುಕೊಳ್ಳಬೇಕಾಯಿತು. ಇವರಿಂದ ಪ್ರತಿತಿಂಗಳೂ ಇಪ್ಪತ್ತೈದು ರೂಪಾಯಿ ಕಿತ್ತುಕೊಳ್ಳುವುದನ್ನೇನೂ ಅವನು ಬಿಡಲಿಲ್ಲ. ನೂರು ರೂಪಾಯಿ ಲಾಭವಿರುವಾಗ ಇಪ್ಪತ್ತೈದು ರೂಪಾಯಿ ಕೊಡುವುದು ಕಷ್ಟವಲ್ಲವೆಂದು ಹೇಳಿಕೊಂಡು ನಾನೂ ಸಮಾಧಾನ ಕಳೆದೆ.

ಕಾಶಪ್ಪನಿಗೂ ನಮ್ಮವರಿಗೂ ಸಖ್ಯ ಬೆಳೆಯುತ್ತ ಬಂತು. ಅವನು ನಮ್ಮಲ್ಲಿಗೆ, ಇವರು ಅವರಲ್ಲಿಗೆ ಊಟಕ್ಕೆ ಹೋಗುವುದೂ ಆರಂಭವಾಯಿತು. ಅವರಿಬ್ಬರೂ ಜತೆಯಾಗಿ ಊಟಕ್ಕೆ ಕುಳಿತಿದ್ದಾಗ ಬಡಿಸುವುದೆಂದರೆ ನನಗೆ ಹೇಗೆ ಹೇಗೋ ಅನ್ನಿಸುವುದು. ಮೊದಲು ಕೆಲವು ಸಲವಂತೂ ಸಂಕೋಚ ದಿಂದಾಗಿ ಬಾಯಿಂದ ಶಬ್ದಗಳೇ ಹೊರಬೀಳುತ್ತಿರಲಿಲ್ಲ. ಕಾಶಪ್ಪನೊಬ್ಬನೇ ಇದ್ದಾಗ ಏನೆಲ್ಲ ಮಾತಾಡುತ್ತಿದ್ದೆನಲ್ಲವೆ? ಅವನೊಡನೆ ಇವರೂ ಇದ್ದ ಮಾತ್ರಕ್ಕೆ ಸಂಕೋಚವೇಕಾಗಬೇಕೋ ತಿಳಿಯಲಿಲ್ಲ. ಕಳ್ಳತನ ಮಾಡಿ ಸಿಕ್ಕಿ ಬಿದ್ದವರಂತೆ ನನ್ನ ಸ್ಥಿತಿಯಾಗುತ್ತಿತ್ತು. ಇವರು ಸ್ವಲ್ಪ ಜಾಣರಾಗಿದ್ದರೆ ಆಗಲೇ ಕಂಡುಹಿಡಿಯುತ್ತಿದ್ದರೇನೋ ನನ್ನ ರಹಸ್ಯವನ್ನು! ಆದರೆ ಇವರಲ್ಲಿ ಎಲ್ಲಿಂದ ಬರಬೇಕು ಅಷ್ಟೊಂದು ಕೌಶಲ್ಯ! ನಾಚಿಕೆಯಿಂದಾಗಿ ನನಗೆ ಹಾಗಾಗುತ್ತಿರ ಬೇಕೆಂದು ಇವರು ತರ್ಕಿಸಿಕೊಂಡು ಸುಮ್ಮನಾಗಿರಬೇಕು.

ಒಂದು ಬಾರಿ ನಮ್ಮನ್ನೆಲ್ಲ ಊಟಕ್ಕೆ ಕರೆದಿದ್ದ ಕಾಶಪ್ಪ. ನಾನು ಮೊದಲೇ ಹೋಗಿ ಅಡುಗೆಯಲ್ಲೂ ಸಹಾಯಮಾಡಿದ್ದೆ. ಊಟಕ್ಕೆ ನೀಡುವ ಸಮಯ ಬಂತು. ಮನೆಯೊಡತಿಯೇ ಬಡಿಸಬೇಕಷ್ಟೆ. ಈರವ್ವನಿಗೆ ಮಾತ್ರ ಪೀಕ ಲಾಟಕ್ಕಿಟ್ಟುಕೊಂಡಿತು.

" ನೀನೇ ಬಡಿಸು ಗಿರಿಜಕ್ಕಾ."

" ನಿನ್ನ ಮನೆಯಲ್ಲಿ ನೀನೇ ಬಡಿಸಬೇಕು. ನಾನು ಹೋದರೆ ನಕ್ಕಾರು ಅವರು."

" ಏನೋ ಅವ್ವಾ. ನನಗಂತೂ ಆಗುವದಿಲ್ಲ," ಎಂದಳು ಈರವ್ವ.

ಅವಳ ಪೆಚ್ಚು ಮೋರೆಯನ್ನೂ ಅಪರಾಧ ಎದ್ದು ಕಾಣುತ್ತಿದ್ದ ಕಣ್ಣು ಗಳನ್ನೂ ನೋಡಿದಾಗ ನನಗೆ ಅಯ್ಯೋ ಪಾಪ ಎನ್ನಿಸದಿರಲಿಲ್ಲ. ಸರಿ ನಾನೇ ಬಡಿಸತೊಡಗಿದೆ.

" ಇಲ್ಲೂ ನಿನ್ನ ಕೈಯಿಂದಲೇ ಉಣಬೇಕೇನು?" ಎಂದು ನಮ್ಮವರು ಹಾಸ್ಯವಾಡಿದರು.

" ಹಾಗಾದರೇನು ನಿಮ್ಮ ಪ್ರೇಯಸಿಯ ಕೈಯಿಂದ ಉಣಬೇಕಾಗಿ ತ್ತೇನು?" ಎಂದು ಮನಸ್ಸಿನಲ್ಲಿಯೇ ಅಂದು ಕೊಂಡು,

"ಸಾಕು ಬಿಡಿರಿ. ಎಲ್ಲಿಹೋದರೂ ನಿಮ್ಮ ಚೇಷ್ಟೆ ತಪ್ಪಿದ್ದಲ್ಲ. ಈರವ್ವಗೆ ನಾಚಿಕೆ ಅಂತ ನಾನೇ ತಂದೆ," ಎಂದು ಹೇಳಿ ಒಂದೊಂದು ಕಡೆಗೆ ಒಂದೊಂದು ದೃಷ್ಟಿ ಬೀರಿದೆ. ಹಾಸ್ಯದ ಮಧ್ಯೆ ಊಟ ಮುಗಿಯಿತು.

ಅವರು ಎದ್ದು ಮಹಡಿಯ ಮೇಲಿನ ಕೊಠಡಿಗೆ ಹೋದರು. ತಟ್ಟೆಗಳನ್ನು ತೆಗೆದಿಟ್ಟು, ಮಕ್ಕಳೊಂದಿಗೆ ನಾವೂ ಊಟಕ್ಕೆ ಕುಳಿತೆವು. ಸುಲೋಚನೆಯೂ ಈರವ್ವನ ಮಗ ಶಂಭುಲಿಂಗನೂ ಸರಿಯಾಗಿ ಊಟ ಮಾಡುತ್ತಿದ್ದರು. ನಮ್ಮ ಕುಮಾರ ಮಾತ್ರ ಒಂದು ಕಡೆ ಕುಳಿತಿರುತ್ತಿರಲಿಲ್ಲ. ಒಲೆಗೆ ನುಗ್ಗುವುದು, ಕಡುಬು ಎಳೆದು ಬಿಸುಟುವುದು, ತುಪ್ಪದ ಪಾತ್ರೆಯನ್ನೆತ್ತಿ ಅಪ್ಪಳಿಸುವುದು, ಸಾರು ಚೆಲ್ಲಾಪಿಲ್ಲಿ ಮಾಡುವುದು ಇವೇ ಮೊದಲಾದ ಮೋಜಿನ ಕಾರ್ಯಗಳಲ್ಲಿ ಮಗ್ನನಾಗಿದ್ದ. ಅವನ ಗದ್ದಲದಲ್ಲಿ ನಮ್ಮ ಊಟವೂ ಸಾಗುವಂತಿರಲಿಲ್ಲ. ಕೊನೆಗೆ ಕಾಶಪ್ಪ ಬಂದು ಅವನನ್ನೆತ್ತಿಕೊಂಡು ಹೋದ. ಅಳುತ್ತಳುತ್ತಾ ಅಡುಗೆಮನೆಯಿಂದ ಹೊರಟ ಕುಮಾರ ಮಹಡಿಗೆ ಹೋಗುತ್ತಲೂ ಅಲ್ಲಿದ್ದ ಎಲೆಅಡಿಕೆಯ ತಟ್ಟೆಯನ್ನೆತ್ತಿ ತಲೆಯ ಮೇಲಿಟ್ಟುಕೊಂಡು ನರ್ತಿಸಿದ ನಂತೆ.

ನೂರು ಜನ ಗಂಡಸರು ಊಟ ಮಾಡಿ ಮುಗಿಸಿದರೂ ಮೂರು ಜನ ಹೆಂಗಸರ ಊಟ ಮುಗಿಯುವುದಿಲ್ಲ. ಹೆಂಗಸರು ಊಟ ಮಾಡುವುದಕ್ಕಿಂತ ಹರಟೆ ಕೊಚ್ಚುವುದೇ ಹೆಚ್ಚು. ಗಂಡಸರ ವಿಚಾರ ಹಾಗಲ್ಲ. ಊಟಕ್ಕೆ ಕುಳಿತಾಗ ಅವರು ಮಾತಾಡುವುದು ಕಡಮೆ. ಹೆಂಗಸರಿಗಾದರೋ ಎಷ್ಟು ಹೊತ್ತಾದರೂ ಮಾತು ಮುಗಿಯದು. ಅವಳ ಮಗಳು ಮೈ ನೆರೆದು ಅಷ್ಟು ವರುಷಗಳಾದುವು, ಇನ್ನು ಮದುವೆಯಾಗಲಿಲ್ಲ. ಇವಳಿಗೆ ಮದುವೆಯಾಗಿ ಅಷ್ಟು ವರುಷಗಳಾದುವು, ಇನ್ನು ಮಕ್ಕಳಾಗಲಿಲ್ಲ. ಅವಳು ಗಂಡನಿಗೂ ಮಕ್ಕಳಿಗೂ ಕೂಳು ಕೂಡ ಹಾಕುವುದಿಲ್ಲ. ಅವಳು ಅಹಂಕಾರಿ. ಇವಳು ದುರಭಿಮಾನಿ. ಅವಳು ಎಂಟು ದಿನಗಳಿಗೊಮ್ಮೆ ಸ್ನಾನ ಮಾಡುತ್ತಾಳೆ, ಅವಳ ಮೈ ಗೊಮ್ಮೆಂದು ನಾರುತ್ತದೆ. ಇವಳು ದಿನಕ್ಕೆರಡು ಬಾರಿ ಸ್ನಾನ ಮಾಡುತ್ತಾಳೆ, ಎಷ್ಟು ಸೋಪು ತಿಕ್ಕಿದರೂ ಇವಳ ಮೋರೆ ಬೆಳ್ಳಗಾಗುವುದಿಲ್ಲ – ಅವಳು

ವರುಷಕ್ಕೊಮ್ಮೆ ಮನೆ ಸಾರಿಸುತ್ತಾಳೆ, ಅವಳ ಮುಖ ರಾಕ್ಷಸಿಯ ಹಾಗಿದೆ. ಇವಳ ಮೂಗು ಬಾಯಿ ನೋಡಿದರೆ ಹೇಸಿಕೆ ಬರುತ್ತದೆ. ಅವಳು ಮಾತಾಡುವ ರೀತಿ ದರೋಡೆಗಾರರಂತಿದೆ. ಒಂದೇ ಎರಡೇ! ಎಲ್ಲ ಮಾತುಗಳೂ ಬೇರೆಯವರನ್ನು ಕುರಿತವುಗಳೇ ಆಗಿರುತ್ತವೆ. ಹಾಗೆ ಇತರರನ್ನು ಟೀಕಿಸಿ ಹಳಿಯುವಾಗ ನಾವು ಅವರಿಗಿಂತ ಶ್ರೇಷ್ಠರೆಂದು ತೋರಿಸುವ ಥಾಟಯಿರುತ್ತದೆ. ಕೈಯಲ್ಲಿದ್ದ ತುತ್ತನ್ನು ಬಾಯಲ್ಲಿಟ್ಟುಕೊಳ್ಳುವುದನ್ನು ಬಿಟ್ಟು ಹಾಗೇ ಮಾತನಾಡುತ್ತಿರುವುದು – ಹೆಂಗಸರ ಈ ವಿಶಿಷ್ಟ ಚಟ ನಮಗೂ ಅಂಟಿಕೊಂಡೇ ಇದ್ದಿತು. ಅಂತೆಯೆ, ಅಂದು ನಾವು ಊಟ ಮಾಡಿ ಮುಗಿಸಬೇಕಾದರೆ ಮೂರು ತಾಸು ಬೇಕಾಯಿತು. ಒಮ್ಮೆ ಪಿಸು ಮಾತು, ಒಮ್ಮೆ ನಗು, ಒಮ್ಮೆ ಚೇಷ್ಟೆ. ಅಷ್ಟರೊಳಗಾಗಿ ಗಂಡಸರು ಒಂದು ನಿದ್ದೆ ಮಾಡಿ ಎದ್ದಿದ್ದರು.

ಮನೆಗೆ ಬರುತ್ತಲೂ ಇವರೆಂದರು :

" ಅವರೆಲ್ಲಾ ಒಳ್ಳೆಯವರು ನೋಡು ಗಿರಿಜಾ."

" ಯಾರು ?"

" ಕಾಶಪ್ಪನ ಮನೆಯವರು."

" ಮನೆಯವರೆಂದರ್ಯಾರು ?"

" ಹಾಗೆಂದರೇನೇ ? ಎಲ್ಲರೂ."

" ಎಲ್ಲರೂ ಹ್ಯಾಗೆ ? ಈರವ್ವ ಒಬ್ಬಳೇ."

ನೋಡುವಂತಾಗಿತ್ತು ಅವರ ಮುಖ. ಅದುವರೆಗೂ ತಮ್ಮ ರಹಸ್ಯ ನನಗೆ ಗೊತ್ತಿರಲಿಕ್ಕಿಲ್ಲವೆಂದೇ ಅವರು ಭಾವಿಸಿದ್ದರು. ಇದೊಳ್ಳೆಯ ತಮಾಷೆಯ ವಿಷಯವೇ ಅಲ್ಲವೇ ?

ಕಳ್ಳನಂತಾಗಿತ್ತು ಅವರ ಮುಖ. ನನಗೆ ನಗುವನ್ನು ತಡೆದುಕೊಳ್ಳಲಾಗಲಿಲ್ಲ. ನಗುನಗುತ್ತಲೇ ಹೇಳಿದೆ :

" ಈರವ್ವನೇ ಎಲ್ಲಾ ಹೇಳಿದಾಳೆ ನನಗೆ. ನಿಮ್ಮ ಗುಟ್ಟೆಲ್ಲಾ ನನಗೆ ಗೊತ್ತು."

" ಈರವ್ವ ಹೇಳಿದಾಳೆ ?" ಎಂದು ಅವರು ತಬ್ಬಿಬ್ಬಾಗಿ ನುಡಿದರು. ಅದನ್ನು ನಂಬುವುದಕ್ಕೂ ಆಗುವಂತಿರಲಿಲ್ಲ ಅವರಿಗೆ.

" ಏನು ಹೇಳಿದಾಳೆ? ಸುಮ್ಮನೆ ಚೇಷ್ಟೆ ಮಾಡಬ್ಯಾಡ ಗಿರಿಜಾ."

" ಚೇಷ್ಟೆಯಲ್ಲರೀ. ನಿಜವಾಗಿ ನನಗೆಲ್ಲಾ ಗೊತ್ತದೆ ನಿಮ್ಮ ಮತ್ತು ಈರವ್ವನ ಗುಟ್ಟು."

" ಹಾಂ ?"

" ಸುಲೋಚನೆ ಹುಟ್ಟುವ ವೇಳೆಯೊಳಗೇ ಗೊತ್ತಾಗಿ ಹೋಗಿತ್ತು ನನಗೆಲ್ಲಾ. ನೀವು ಬೆಕ್ಕುಗಳು ಕಣ್ಣು ಮುಚ್ಚಿ ಕುಡೀತಿದ್ದರೆ ಮನೆಯೊಳಗಿರುವ ನನಗೆ ಗೊತ್ತಾಗದಿರುತದೇನ್ರೀ ?"

ತಗ್ಗಿಸಿದ ತಲೆಯನ್ನು ಮೇಲಕ್ಕೆತ್ತದೆ ಅವರು ಕೇಳಿದರು :

" ಮತ್ತೆ ಯಾರ್ಯಾರಿಗೆ ಗೊತ್ತಾಗಿಹೋಗಿದೆ ಗಿರಿಜಾ ?"

" ಯಾರಿಗೋ. ನನಗೇನು ಗೊತ್ತು !"

" ಕಾಶಪ್ಪಗೆ ಗೊತ್ತಾಗಿರಲಿಕ್ಕಿಲ್ಲವಲ್ಲ ?"

" ಯಾರಿಗೆ ಗೊತ್ತು !"

ಅವರು ಸ್ವಲ್ಪ ಯೋಚಿಸಿದರು. ಕಾಶಪ್ಪನಿಗೆ ಆ ವಿಷಯ ಗೊತ್ತಾಗಿರಲಾರದೆಂದೇ ಅವರಿಗೆನ್ನಿಸಿರಬೇಕು. ಅವನಿಗೂ ಗೊತ್ತಾಗಿದ್ದ ಪಕ್ಷಕ್ಕೆ ಅವನು ಇವರೊಡನೆ ಸ್ನೇಹದಿಂದ ವರ್ತಿಸುವಂತಿರಲಿಲ್ಲವಲ್ಲ.

ಅವರು ಸಮಾಧಾನದ ಉಸಿರು ಹಾಕಿ ನನ್ನೆರಡೂ ಕೈಗಳನ್ನು ಹಿಡಿದುಕೊಂಡು ಹೇಳಿದರು :

" ನಿನ್ನ ಗುಣ ಬಹಳ ದೊಡ್ಡದು ಗಿರಿಜಾ. ನಿನಗೆ ಗೊತ್ತಾದಾಗ ನೀನೆಲ್ಲಿ ಸಿಟ್ಟಾಗಿ ನನ್ನ ಮಾನ ಕಳೆಯುತೀಯೋ ಅಂತ ಇಷ್ಟು ದಿನ ಅಂಜಿಕೆಯಿತ್ತು ನನಗೆ."

" ಅಲ್ಲರೀ! ನನ್ನಂಥಾ ಹೆಂಡತಿ ಇದ್ದರೂ ಅವಳ್ಯಾಕೆ ಬೇಕಾದಳು ನಿಮಗೆ ?"

" ಏನು ಹೇಳಲಿ ಗಿರಿಜಾ, ಇದೆಲ್ಲಾ ಹಣೇಬರಹ. ಇದು ಹೀಗೆ ಯಾಕಾಗುತದೆ ಅನ್ನೂದು ತಿಳಿಯೂದಿಲ್ಲ. ನಿಜವಾಗಿ ನನಗೇನು ಅವಳು ಬೇಕಾಗಿರಲಿಲ್ಲ. ಅವಳೇ ನನ್ನನ್ನೆಳೆದಳು. ನನಗೂ ಆಗ ನಿನ್ನ ಸಹವಾಸ

ಇರಲಿಲ್ಲ. ಕಾಲು ಜಾರಿದೆ. ನಾನು ತಪ್ಪು ಮಾಡಿದ್ದು ನಿಜ. ನೀನು ಸಿಟ್ಟಿಗೆದ್ದರೂ – ಶಿಕ್ಷೆ ಕೊಟ್ಟರೂ ಚಿಂತೆಯಿಲ್ಲ."

"ನಾನ್ಯಾಕೆ – ಸಿಟ್ಟಾಗಲಿ? ನನಗೇನು ಕಡಿಮೆ ಮಾಡೀರಿ ನೀವು? ಬಂಗಾರದಂಥ ಎರಡು ಮಕ್ಕಳವೆ. ತಿನ್ನೂದಕ್ಕೆ ಉಣ್ಣೂದಕ್ಕೆ ಏನೂ ಕಡಮೆ ಇಲ್ಲ. ನನಗೆ ಹೆಚ್ಚಿನಾಸೆಯೇನೂ ಇಲ್ಲ. ಅವಳೂ ನನ್ನ ಗೆಳತಿ. ಮಕ್ಕಳಾಗಲಿಲ್ಲಂತ ಕೊರಗುತಾ ಇದ್ದಳು. ಈಗ ಅವಳಿಗೂ ಮಕ್ಕಳಾದವು. ಗಂಡ ಹೆಂಡರು ಎಷ್ಟು ಆನಂದದಿಂದಿದ್ದಾರಲ್ಲ...."

ಅವರು ನನ್ನನ್ನು ತಬ್ಬಿಕೊಂಡು ಮುದ್ದಿಸಿದರು – ಇಷ್ಟು ದಿನಗಳವರೆಗೆ ಅವರ ಎದೆಭಾರವಾಗಿದ್ದ ಸಂಗತಿ ಹೊರಬಿದ್ದುದರಿಂದ ಅವರಿಗೆಷ್ಟೋ ಸಮಾಧಾನವಾದಂತಿತ್ತು. ನನಗೂ ಕೂಡ ಏನೋ ಒಂದು ಬಗೆಯ ವಿಚಿತ್ರ ಸಮಾಧಾನ. ಅವರ ಗುಟ್ಟು ನನಗೆ ಗೊತ್ತಾದರೂ ನಾನು ಸುಮ್ಮನಿದ್ದ ಹಾಗೇ ನನ್ನ ಗುಟ್ಟು ಗೊತ್ತಾದಾಗ ಅವರೂ ಸುಮ್ಮನಿರಬಹುದೋ ಏನೋ ಎಂಬ ಸಣ್ಣ ಆಸೆಯೊಂದು ಮನದಲ್ಲಿ ಮೂಡುತ್ತಿತ್ತು. ಅದೇ ನನಗೆ ಸಮಾಧಾನವಿತ್ತಿರಬೇಕು. ಅದಲ್ಲದೆ, ಅಂದು ಅವರು ಸೋತವರಾಗಿದ್ದರು. ಅವರ ಮೇಲೆ ನಾನೊಂದು ಬಗೆಯ ವಿಜಯ ಸಂಪಾದಿಸಿದ್ದೆ. ನಿಜವಾಗಿ ಅದು ವಿಜಯವಾಗಿರಲಿಲ್ಲವಾದರೂ ಆ ಕ್ಷಣಕ್ಕೆ ನನಗೆ ಹಾಗೆ ಭ್ರಾಂತಿಯಾಗಿತ್ತು. ಅವರಿಗಿಂತ ನನ್ನ ಚಾರಿತ್ರ್ಯ ಪರಿಶುದ್ಧವಾದುದೆಂದೇ ನನಗೆ ಭಾಸವಾಗುತ್ತಿತ್ತು. ಗೆದ್ದವರು ಸೋತವರ ಮೇಲೆ ಅಧಿಕಾರ ನಡಸುವಂತೆ ನಾನಿನ್ನು ಇವರ ಮೇಲೆ ಅಧಿಕಾರ ನಡಸಬಹುದೆಂದು ನನಗೆನ್ನಿಸುತ್ತಿತ್ತು.

ಅದನ್ನೆಲ್ಲ ಈಗ ಜ್ಞಾಪಿಸಿಕೊಂಡರೆ ನನಗೆ ನಗೆ ಬರುತ್ತದೆ. ನನ್ನ ಬಗೆಗೆ ನನಗೇ ಕನಿಕರವೆನ್ನಿಸುತ್ತದೆ. ಗೆದ್ದವರಾರು? ಸೋತವರಾರು? ಯಾರ ಮೇಲೆ ಯಾರು ಅಧಿಕಾರ ನಡಸಿದರು? ಕೊನೆಗೆ ನನ್ನ ಗತಿಯೇನಾಯಿತು?

## ೨೨

ನನ್ನ ರೂಪದ ಬಗೆಗೆ ನನಗೆ ಯಾವಾಗಲೂ ಹೆಮ್ಮೆಯೇ ಇತ್ತು. ಎರಡು ಮಕ್ಕಳನ್ನು ಹೆತ್ತ ಮಾತ್ರಕ್ಕೇ ಮುದುಕಿಯರಂತೆ ಕಾಣುವ ಅನೇಕ ಹೆಂಗಸರನ್ನು ನಾನು ನೋಡಿದ್ದೇನೆ. ಗುಳಿಬಿದ್ದ ಕಣ್ಣು – ಕೆನ್ನೆಗಳು, ಜೋಲು ಬಿದ್ದ ಸ್ತನಗಳು, ಉದುರಿ ವಿರಳವಾದ ತಲೆಗೂದಲು, ಬಣ್ಣಗೆಟ್ಟ ಚರ್ಮ. ಅಂಥವರನ್ನು ಕಂಡರೆ ನನಗೆ ಯಾವಾಗಲೂ ತಾತ್ಸಾರ. ನಾನೂ ಅವರ ಹಾಗಾಗಬಾರದೆಂದು ಮೊದಲಿನಿಂದಲೂ ಎಚ್ಚರಿಕೆ ವಹಿಸುತ್ತ ಬಂದಿದ್ದೆ. ಮಗುವಿಗೆ ಮೊಲೆಯುಣ್ಣಿಸುವಾಗಲಷ್ಟೇ ನಾನು ಅವುಗಳ ಬಿಗಿಯನ್ನು ಸಡಲಿಸುತ್ತಿದ್ದುದು. ನನ್ನ ಸ್ತನಗಳು ಜೋಲುಬಿದ್ದುದನ್ನು ನೋಡಿದರೆ ಬಲು ಸಿಟ್ಟು ಬರುತ್ತಿತ್ತು. ಅದರಂತೆಯೇ ವೇಷಭೂಷಣದ ಬಗೆಗೂ ಬಹಳ ಎಚ್ಚರಿಕೆ. ಕೂದಲು ಉದುರಿ ಹೋಗದಂತೆ ದಕ್ಷತೆ ವಹಿಸುತ್ತಿದ್ದೆ. ಬಾಚಿಕೊಳ್ಳುವುದೂ ಕೂಡ ಅಚ್ಚುಕಟ್ಟಾಗಿ, ಅಂದವಾಗಿ. ನನ್ನ ಬೈತಲೆಯ ನೇರವನ್ನು ಕಂಡೇ ಇತರ ಹೆಂಗಸರು ಅಸೂಯೆಪಡುವಹಾಗಿತ್ತು. ನಾನು ಎರಡು ಮಕ್ಕಳ ತಾಯಿಯೆಂದು ಯಾರೂ ಅನ್ನುವ ಹಾಗಿರಲಿಲ್ಲ. ಇನ್ನು ಯುವತಿಯಂತೆಯೇ ಕಾಣುತ್ತಿದ್ದೆ. ಯಾವಾಗಲೂ ಹಾಗೇ ನನ್ನ ಯೌವನವನ್ನು ಕಾಪಾಡಿಕೊಂಡಿರಬೇಕೆಂಬ ಬಯಕೆ ನನಗಿತ್ತು.

ಇವರಿಗೆ ಆ ಸುಂಕದ ಕಟ್ಟೆಯ ಕೆಲಸ ಸಿಕ್ಕಂದಿನಿಂದ ದುಡ್ಡಿಗೆ ಕೊರತೆಯಿರಲಿಲ್ಲ. ಇವರ ಸಹಾಯವನ್ನು ಪಡೆದು ಕಾಶಪ್ಪನೂ ಹಣ ಮಾಡಿಕೊಳ್ಳುವ ಯೋಜನೆ ಹೂಡಿದ. ನಮ್ಮ ಮನೆಯಲ್ಲಿಯೇ ಕುಳಿತು ಅವರು ಆ ಯೋಜನೆ ತಯಾರಿಸಿದರು.

ಅದು ಸಮರಕಾಲ. ನೂಲು – ರೇಶಿಮೆಗಳ ಧಾರಣೆ ದಿನದಿಂದ ದಿನಕ್ಕೆ ಏರುತ್ತಲೇ ಇತ್ತು. ನಮ್ಮ ಭಾಗದಲ್ಲಿ ನಿಯಂತ್ರಣಗಳ ಆಡಳಿತಕ್ಕೂ ಆರಂಭ ವಾಗಿತ್ತು. ಬಡ ನೇಕಾರರಿಗೆ ನೂಲು ದೊರೆಯುವುದೂ ದುಸ್ತರವಾಗಿತ್ತು. ಸಾಹುಕಾರರನೇಕರು ನೂಲನ್ನು ಕಳ್ಳಪೇಟೆಯಲ್ಲಿ ವಿಕ್ರಯಿಸಿ ಲಕ್ಷಾಧೀಶ ರಾಗತೊಡಗಿದ್ದರು. ಅದುವರೆಗೆ ಬಟ್ಟೆಯಂಗಡಿಯ ವ್ಯಾಪಾರದಲ್ಲೇ ತೃಪ್ತ ನಾಗಿದ್ದ ಕಾಶಪ್ಪನಿಗೂ ನೂಲು – ರೇಶಿಮೆ ವ್ಯಾಪಾರ ಸಾಗಿಸಿ ಲಕ್ಷಾಧೀಶ ನಾಗಬೇಕೆಂಬ ಅಪೇಕ್ಷೆಯುತ್ಪನ್ನವಾಯಿತು. ಅವನು ಲಕ್ಷಗಟ್ಟಲೆ ಹಣ ಗಳಿಸಿದರೆ ನನಗೂ ಲಾಭವೇ ಅಲ್ಲವೆ? ಅವನಿಂದ ನೂರನ್ನೋ ಇನ್ನೂರನ್ನೋ ಕಿತ್ತು ಕೊಳ್ಳುತ್ತಿದ್ದ ನಾನು ಸಾವಿರ ಸಾವಿರ ಕಿತ್ತುಕೊಳ್ಳಲು ಸಾಧ್ಯವಾಗಬಹುದಾಗಿ ತ್ತಲ್ಲವೆ? ಅಂತೆಯೇ, ಮುಂದಿನ ಆ ಲಾಭದ ಮೇಲೆ ದೃಷ್ಟಿಯಿಟ್ಟು ನಾನೂ ಅವನನ್ನು ಪ್ರೋತ್ಸಾಹಿಸಿದೆ.

"ರಾಚಪ್ಪನ ಸಹಾಯ ಸಿಕ್ಕರೆ ಈ ವ್ಯಾಪಾರ ಮಾಡಬಹುದು," ಎಂದ ಕಾಶಪ್ಪ.

ವ್ಯಾಪಾರಕ್ಕೆ ಇವರ ಸಹಾಯವೆಂದರೇನೆಂಬುದು ಮೊದಲು ಮೊದಲು ನನಗೆ ಅರ್ಥವಾಗಲಿಲ್ಲ. ಕಾಶಪ್ಪ ವಿವರಿಸಿ ಹೇಳಿದ:

"ಇಲ್ಲೇ ಸಮೀಪದಲ್ಲಿ ರಾವಣದುರ್ಗ ಸಂಸ್ಥಾನವಿದೆಯಲ್ಲ ಗಿರಿಜಾ. ಅಲ್ಲಿ ರೇಶಿಮೆಗೆ ಕಂಟ್ರೋಲ್ ಇಲ್ಲ. ಅಗ್ಗದರದಿಂದ ಬೇಕಾದಷ್ಟು ರೇಶಿಮೆ ಕೊಳ್ಳಬಹುದು. ಇಲ್ಲಿ ತಂದು ಮಾರಿದರೆ ಒಂದಕ್ಕೆ ನೂರರಷ್ಟು ಲಾಭ."

"ಹಾಗಿದ್ದರೆ ಯಾಕೆ ಅನುಮಾನಿಸುತ್ತೀರಿ? ಸುರುಮಾಡಿರಲ್ಲ?"

"ಅದು ಅಷ್ಟು ಸುಲಭದ ಕೆಲಸ ಅಲ್ಲ ಗಿರಿಜಾ. ಇಲ್ಲಿ ಕಂಟ್ರೋಲ್ ಅದೆಯಲ್ಲ. ಪೋಲೀಸರ ಕಣ್ಣು ತಪ್ಪಿಸಿ, ಸುಂಕದ ಕಟ್ಟೆಯವರ ಸಹಾಯದಿಂದ ರೇಶಿಮೆ ದಾಟಿಸಬೇಕಾಗುತದೆ."

"ಇಷ್ಟೇ ಹೌದಲ್ಲೋ? ಇದರಲ್ಲೇನದೆ ಅಂಥಾದ್ದು? ನಮ್ಮವರಂತೂ ನಿಮಗೆ ಸಹಾಯಮಾಡಿಯೇ ಮಾಡುವರು. ಇನ್ನು ಪೋಲೀಸರ ಕಣ್ಣಿಗೆ ಮಣ್ಣು ಹಾಕುವದೊಂದು ಉಳಿಯಿತು. ಅವರಿಗೂ ಏನಾದರೂ ಕೊಟ್ಟರಾಯಿತಲ್ಲ?"

" ನಾನೂ ಅದನ್ನೇ ವಿಚಾರ ಮಾಡುತಿದ್ದೀನಿ," ಎಂದ ಕಾಶಪ್ಪ.

ಒಂದು ಭಾನುವಾರ ನಮ್ಮವರು ಮನೆಯಲ್ಲಿದ್ದ ಸಮಯ ಸಾಧಿಸಿ ಕಾಶಪ್ಪ ಬಂದು ಆ ವಿಷಯ ಪ್ರಸ್ತಾಪಿಸಿದ. ಇವರು ತಕ್ಷಣ ಒಪ್ಪಿಗೆ ಕೊಡಲಿಲ್ಲ. ಸ್ವಲ್ಪ ಹೊತ್ತು ಯೋಚಿಸುತ್ತಾ ಇದ್ದು, ಅನಂತರ ಹೇಳಿದರು :

" ಇದು ಬಹಳ ಗಂಡಾಂತರದ ಕೆಲಸ. ಪೋಲೀಸರು ತಿರುಗಿಬಿದ್ದರೆಂದರೆ ನನ್ನ ಸೌಕರಿಯೂ ಹೋಗುವ ಪ್ರಸಂಗ."

ಕಾಶಪ್ಪ ಅವರಿಗೆ ಧೈರ್ಯ ಕೊಡುತ್ತ ಹೇಳಿದ :

" ಗಂಡಾಂತರದ ಕೆಲಸ ಅನ್ನುವದೇನೋ ನಿಜ. ಗಂಡಾಂತರವಿದ್ದಲ್ಲೇ ಲಾಭವೂ ಇರೂದು. ನೌಕರಿ ಹೋಗುತದೆ ಅಂತ ನೀವೇನೂ ಹೆದರಬೇಕಾಗಿಲ್ಲ. ಮುನ್ಸಿಪಾಲ್ಟಿ ಅಧ್ಯಕ್ಷರು ನನ್ನ ಗೆಳೆಯರು. ಅವರಿರುವ ತನಕ ಯಾವ ಭಯವೂ ಇಲ್ಲ."

" ಅವರಿರುವದಾದರೂ ಎಷ್ಟು ದಿನ? ಈ ಊರಿನ ಮುನ್ಸಿಪಾಲ್ಟಿ ಅಂದರೆ ನೀರ ಮ್ಯಾಲಿನ ಗುಳ್ಳೆ ಇದ್ದ ಹಾಗೆ. ಇವತ್ತು ಇದ್ದ ಅಧ್ಯಕ್ಷ ನಾಳೆ ಇರುತಾನೆಂಬ ನಿಯಮವಿಲ್ಲ. ಯಾವಾಗ ಅವಿಶ್ವಾಸ ಠರಾವು ಬಂದು ಬಿದ್ದು ಹೋಗುವನೋ ಹೇಳಲು ಬರೂದಿಲ್ಲ."

" ಅದೂ ನಿಜ. ಆದರೂ, ಏನೇ ಆದರೂ ನಿಮಗೆ ಮುಂದಿನ ಚಿಂತೆ ಬೇಡ. ಒಂದು ವೇಳೆ ನಿಮ್ಮ ನೌಕರಿ ಹೋದರೂ ನಾನು ನಿಮಗೊಂದು ಅಂಗಡಿ ಹಾಕಿ ಕೊಡುತೀನಿ. ಈಗೇನು ಯುದ್ಧಕಾಲ. ನೂರು ರೂಪಾಯಿ ಬಂಡವಳ ಹಾಕಿ ಸಾವಿರ ರೂಪಾಯಿ ಗಳಿಸಿಕೊಳ್ಳಬಹುದು. ನೌಕರಿಗಿಂತ ವ್ಯಾಪಾರ ಚಲೋ ದಲ್ಲೇನು ?"

" ಹೌದು. ನೀವು ಹೇಳುವದೂ ಬರಾಬರಿ. ಆದರೂ ನನಗ್ಯಾಕೋ ಧೈರ್ಯ ಇಲ್ಲ. ಮೊದಲು ಪೋಲೀಸ್ ಸಬ್‌ಇನ್ಸ್‌ಪೆಕ್ಟರನ್ನ ಕೇಳಿ ಭರವಸೆ ತಗೊಳ್ಳೂದು ಉತ್ತಮ."

" ಅವನ್ನೆಲ್ಲಾ ನನಗೆ ಬಿಡಿರಿ. ನಾ ಮಾಡುತೀನಿ. ಅವರನ್ನು ನಾನು ಬಲ್ಲೆ. ಅವರನ್ನ ಕಿಸೆಗೆ ಹಾಕಿಕೊಳ್ಳೂದು ಎಷ್ಟು ಹೊತ್ತಿನ ಕೆಲಸ!" ಎಂದ ಕಾಶಪ್ಪ.

ಅಂದು ರಾತ್ರೆ ನನ್ನೊಡನೆ ಮಾತಾಡುತ್ತ ಅವರೆಂದರು :

" ಕಾಶಪ್ಪನ ದಾಕ್ಷಿಣ್ಯಕ್ಕೆ ಬಿದ್ದು ನಾನೆಲ್ಲಿ ಹಾಳಾಗುತೀನೋ ಅಂತನಿಸು ತದೆ ಗಿರಿಜಾ. ಒಳ್ಳೇ ಸಂಕಟವೇ ಬಂತು. ಒಪ್ಪಿದರೂ ಕಷ್ಟ, ಒಪ್ಪದಿದ್ದರೂ ಕಷ್ಟ."

" ಫೌಜದಾರರನ್ನೇ ಅವರು ಕಿಸೆಗೆ ಹಾಕಿಕೊಂಡ ಮ್ಯಾಲ ನೀವ್ಯಾಕೆ ಅಂಜಬೇಕು ?"

" ಈ ಪೋಲೀಸರನ್ನ ಪೂರಾ ನಂಬುವಂತಿಲ್ಲ ಗಿರಿಜಾ. ಅವರು ಯಾವಾಗ ತಿರುಗಿಬಿದ್ದಾರೆಂಬ ಭರವಸೆಯಿಲ್ಲ. ಅದಲ್ಲದೆ ಅವರೇನು ಇಲ್ಲೇ ಕಾಯಂ ಆಗಿ ಇರುತಾರೇನು ? ವರ್ಗ ಆಯ್ತೆಂದರೆ ಹೋಗುವವರು."

" ಆಯಿತಲ್ಲ. ಅವರಿಲ್ಲಿ ಇರುವಷ್ಟು ದಿನ ಆದರೂ ಚಿಂತೆಯಿಲ್ಲವಲ್ಲ !"

" ಊಹೂಂ. ಹಾಗನ್ನುವದಕ್ಕೂ ಬರೂದಿಲ್ಲ. ಪೋಲೀಸರನ್ನ ನಂಬಿ ಕೆಲಸ ಮಾಡೂದು ಅಂದರೆ ಹಾವು ನಂಬಿದ ಹಾಗೆ."

ಹಾಗೆ, ಎದೆಯಲ್ಲಿ ಅಂಜಿಕೆ ತುಂಬಿದ್ದರೂ ಅವರು ಕಾಶಪ್ಪನಿಗೆ ನೆರವಾಗ ಬೇಕಾಯಿತು. ಅವನು ವಾರಕ್ಕೊಂದುಬಾರಿಯೋ ಎರಡುವಾರಗಳಿಗೊಂದು ಬಾರಿಯೋ ರಾವಣದುರ್ಗ ಸಂಸ್ಥಾನಕ್ಕೆ ಹೋಗಿ ಒಂದು ಲಾರಿ ತುಂಬುವಷ್ಟು ರೇಶಿಮೆ ಕೊಂಡುತಂದು ಈ ನಗರದಲ್ಲಿ ವಿಕ್ರಯಿಸತೊಡಗಿದ. ಫೌಜದಾರರ ಕೃಪೆಯಿದ್ದುದರಿಂದ ಅವನಿಗಾವ ಆತಂಕವೂ ಉಂಟಾಗಲಿಲ್ಲ. ಒಂದೇ ಒಂದು ತಿಂಗಳಲ್ಲಿ ಮೂವತ್ತು ಸಾವಿರದಷ್ಟು ಲಾಭವಾಯಿತು ಕಾಶಪ್ಪನಿಗೆ. ಅದರಲ್ಲಿ ಕಾಲುಭಾಗವಾದರೂ ಫೌಜದಾರರ ಕಿಸೆಗೆ ಹೋಗಿರಬಹುದು. ನಮ್ಮವರಿಗೂ ಒಂದೆರಡುಸಾವಿರ ರೂಪಾಯಿ ಬಂತು. ನನಗೆ ?

ಮೂವತ್ತು ಸಾವಿರ ರೂಪಾಯಿಗಳ ಪೈಕಿ ಅರ್ಧದಷ್ಟು ಹಣವನ್ನಾದರೂ ಕಿತ್ತುಕೊಳ್ಳಬೇಕೆಂದು ನಾನು ಲೆಕ್ಕ ಹಾಕಿಕೊಂಡಿದ್ದೆ. ಆದರೆ, ಕಾಶಪ್ಪ ಬಹಳ ಘಾಟಿ. ತನಗೆ ಅಷ್ಟು ಲಾಭವಾಯಿತೆಂದು ಅವನು ಒಪ್ಪಿಕೊಳ್ಳಲೇ ಇಲ್ಲ.

" ಮೂವತ್ತು ಸಾವಿರ ಅಂತ ಯಾರು ಹೇಳಿದರು ನಿನಗೆ ? ಏನೋ ಎಂಟು ಹತ್ತು ಸಾವಿರ ಆದರೆ ಬಹಳ ಆಯ್ತು," ಎಂದನಾ ಕಳ್ಳ.

" ಸುಮ್ಮನೆ ಸುಳ್ಳು ಹೇಳಬ್ಯಾಡಿರಿ ನನ್ನ ಮುಂದೆ. ನನಗೆ ಗೊತ್ತಿಲ್ಲವೇನು ನಿಮ್ಮ ಗುಟ್ಟು? ನಿಮಗೆ ಸರಿಯಾಗಿ ಮೂವತ್ತು ಸಾವಿರ ಬಂದದೆ. ನನಗೆ ಕೊಡಬೇಕಾಗುತದೆ ಅಂತ ಹೀಗೆಲ್ಲಾ ಆಡುತ್ತಿದೀರಿ."

" ನಿನಗೆ ಕೊಡದೇ ಇನ್ನ್ಯಾರಿಗೆ ಕೊಡಲಿ ಗಿರಿಜಾ? ಆದರೆ, ನಿಜವಾಗಿ ನನಗೆ ಅಷ್ಟು ಬಂದಿಲ್ಲ. ಮುಂದಿನ ಸಲ ಹೆಚ್ಚು ಬರಬಹುದು."

" ಕೇಳಿದಾಗಲೆಲ್ಲಾ ಮುಂದಿನ ಸಲ ಮುಂದಿನ ಸಲ ಅಂತ ಹೇಳಿ ಬಾಯಿ ಮುಚ್ಚಿಸುತೀರಿ. ಗಂಡಸು ಜಾತಿಯೇ ಹೀಗೆ. ಬಹಳ ಸ್ವಾರ್ಥಿಗಳು," ಎಂದು ನಾನು ಹುಸಿಕೋಪ ನಟಿಸಿದೆ. ಅಷ್ಟರಿಂದಲೇ ಕಾಶಪ್ಪನ ಎದೆ ಕರಗಿ ಹೋಯಿತು. ಎರಡುಸಾವಿರ ರೂಪಾಯಿಯ ನೋಟುಗಳನ್ನು ತಂದು ನನ್ನ ಸೆರಗಿನಲ್ಲಿ ಕಟ್ಟಿ ನಾನು ಮತ್ತೆ ಪ್ರಸನ್ನಳಾಗುವಂತೆ ಮಾಡಬೇಕಾದರೆ ಸಾಕು ಸಾಕೆನ್ನಿಸಿಹೋಯಿತು ಕಾಶಪ್ಪನಿಗೆ.

ಆ ಹಣವನ್ನು ಹತ್ತಿರ ಇಟ್ಟುಕೊಳ್ಳದೆ ಬಂಗಾರ ಕೊಂಡು ತಂದು ಟ್ರಂಕಿನಲ್ಲಿ ಮಡಗಿದೆ. ಅವರು ಕೊಟ್ಟ ಎರಡುಸಾವಿರ ರೂಪಾಯಿಗಳೂ ನನ್ನ ಹತ್ತಿರವೇ ಇದ್ದುವು.

ರೇಶಿಮೆಯ ಕಳ್ಳ ಸಾಗಾಟ ಹಾಗೇ ಸಾಗಿತು – ಏಳೆಂಟು ತಿಂಗಳವರೆಗೆ. ಕಾಶಪ್ಪನ ಲಾಭ ಹೆಚ್ಚಿದ ಹಾಗೆ ನನ್ನ ಟ್ರಂಕಿನ ಭಾರವೂ ಹೆಚ್ಚುತ್ತಿತ್ತು. ಕೈಗೆ ಚಿನ್ನದ ಬಳೆ ಬಂದಿದ್ದುವು. ಕೊರಳಲ್ಲಿ ಬಂಗಾರದ ಹಾರ. ಸುಲೋಚನೆಯ ಮೈಮೇಲೂ ಸಾಕಷ್ಟು ಒಡವೆಗಳು. ಅವರ ಕೈಗೆ ಬೆಲೆ ಬಾಳುವ ಗಡಿಯಾರ.

ಇಷ್ಟಾದರೂ ನನಗೆ ತೃಪ್ತಿಯಿರಲಿಲ್ಲ. ಬಾಡಿಗೆಗಿದ್ದ ಆ ಮನೆಯನ್ನು ಖರೀದಿಗೆ ತೆಗೆದುಕೊಂಡು, ಅದಕ್ಕೊಂದು ಮಹಡಿಯನ್ನು ಸೇರಿಸಿ, ಕಾಶಪ್ಪನ ಮನೆಯಂತೆಯೇ ಅದನ್ನೂ ಅಲಂಕರಿಸಿ ವಿದ್ಯುದ್ದೀಪ ಹಾಕಿಸಿ, ರೇಡಿಯೋ ಇರಿಸಿ 'ಸಾಹುಕಾರ್ತಿ' ಯೆನ್ನಿಸಿಕೊಳ್ಳಬೇಕು, ಹತ್ತಿಪ್ಪತ್ತು ಕೂರಿಗೆ ಜಮೀನು ತೆಗೆದುಕೊಳ್ಳಬೇಕು ಎಂಬ ಹಂಬಲು ನನ್ನದು. ಅವರು ಆ ಹಾಳು ನೌಕರಿ ಬಿಟ್ಟುಕೊಟ್ಟು ಅಂಗಡಿಯಿಟ್ಟು ಲಾಭಗಳಿಸಬೇಕೆಂದೂ ಆಶಿಸುತ್ತಿದ್ದೆ. ಈ ಬಯಕೆಗಳೆಲ್ಲ ಪೂರೈಸುವವರೆಗೂ ನನಗೆ ತೃಪ್ತಿಯಾಗುವಂತಿರಲಿಲ್ಲ. ನನ್ನ

ಅತ್ತೆಯಿಂದ ನಾನು ಅನ್ನಿಸಿಕೊಂಡ ಹಾಗೆ ನನ್ನ ಮಗಳೂ ಅನ್ನಿಸಿಕೊಳ್ಳಬಾರದು. 'ತಿರುಕರು' ಎಂಬ ಅಭಿದಾನದಿಂದ ಯಾರೂ ನಮ್ಮನ್ನು ಕರೆಯಬಾರದು. ಅಂಥ ಸ್ಥಿತಿಗೆ ನಾವು ಮುಟ್ಟಬೇಕೆಂದೇ ನಾನು ಅಷ್ಟು ಸಾಹಸ ಮಾಡುತ್ತಿದ್ದುದು.

ಆದರೆ, ನಾನೊಂದು ಬಗೆದರೆ ದೈವವೊಂದು ಬಗೆಯಬೇಕೇ! ಕಾಶಪ್ಪನ ಏರಿಕೆಯ ಕಾಲದಲ್ಲಿಯೇ ನಾನು ಮತ್ತೆ ಗರ್ಭವತಿಯಾದೆ. ನಿಜವಾಗಿ ನನಗೆ ಆಗ ಗರ್ಭಿಣಿಯಾಗುವ ಇಚ್ಛೆಯಿರಲಿಲ್ಲ. ಗರ್ಭಿಣಿಯಾಗಿಬಿಟ್ಟರೆ ಕಾಶಪ್ಪನ ಸಹವಾಸ ತಪ್ಪಿದ ಹಾಗೆ. ಅವನೊಡನೆ ನಾನು ನಡಸುತ್ತಿದ್ದುದೂ ಒಂದು ವ್ಯಾಪಾರವನ್ನೇ. ದುಡ್ಡು ತೆತ್ತು ನನ್ನನ್ನು ಕೊಂಡುಕೊಳ್ಳುತ್ತಿದ್ದ ಕಾಶಪ್ಪ. ಸಹವಾಸಸುಖ ತಪ್ಪಿದಾಗ ಅವನೇಕೆ ದುಡ್ಡು ಕೊಟ್ಟಾನು ನನಗೆ? ನಾನು ಅವನನ್ನು ಕೇಳುವುದಾದರೂ ಹೇಗೆ?

ಆದರೂ, ಎಂದಾದರೊಮ್ಮೆ ಅವನ ಮನೆಗೆ ಹೋದಾಗ ಹಣಕ್ಕಾಗಿ ಕೇಳುತ್ತಿದ್ದೆ. ಅವನು ಇಲ್ಲವೆನ್ನದೆ ಕೊಡುತ್ತಿದ್ದುದೇನೊ ನಿಜ. ಆದರೆ ಅದರಲ್ಲಿ ಮೊದಲಿನ ಔದಾರ್ಯವಿರುತ್ತಿರಲಿಲ್ಲ. ನನ್ನ ಮೇಲೊಂದು ದೊಡ್ಡ ಉಪಕಾರ ಮಾಡುವ ಹಾಗೆ ತೋರಿಸುತ್ತಾ ಮೂವತ್ತೋ ನಲವತ್ತೋ ರೂಪಾಯಿ ಕೊಡುತ್ತಿದ್ದ. ಅವನ ರೀತಿಯನ್ನು ಕಂಡು ನನಗೆ ವ್ಯಸನವಾಗದಿರುತ್ತಿರಲಿಲ್ಲ. ಮತ್ತೊಮ್ಮೆ ಅವನನ್ನು ಕೇಳಬಾರದೆಂದೂ ಹೇಳಿಕೊಳ್ಳುತ್ತಿದ್ದೆ. ಆದರೆ, ಎಂಥ ತುಚ್ಛ ಆಸೆ ಅದು! ಹಣದ ಎದುರಿಗೆ ಸ್ವಾಭಿಮಾನಕ್ಕೂ ಏನೂ ಬೆಲೆ ಯುಳಿದಿರಲಿಲ್ಲ. ಅವನು ಕೊಟ್ಟಷ್ಟನ್ನೇ ಸ್ವೀಕರಿಸಿ ಟ್ರಂಕು ತುಂಬುತ್ತಿದ್ದೆ.

ಇತ್ತಿತ್ತಲಾಗಿ ಓಣಿಯ ಹೆಂಗಸರು ನನ್ನ ಮತ್ತು ಕಾಶಪ್ಪನ, ನಮ್ಮವರ ಮತ್ತು ಈರವ್ವನ ಸಂಬಂಧವಾಗಿ ಬಹಿರಂಗವಾಗಿಯೇ ಮಾತನಾಡತೊಡಗಿದ್ದರು. ತೀರ ಬಡವಿಯಂತೆ ಅಲ್ಲಿಗೆ ಬಂದಿದ್ದ ನಾನು ದಿನದಿಂದ ದಿನಕ್ಕೆ ಶ್ರೀಮಂತ ಳಾಗುತ್ತಿದ್ದುದನ್ನು ನೋಡಿದ ಹಾಗೆಲ್ಲ ಅವರಿಗೆ ಅಸೂಯೆಯುಂಟಾಗಿದ್ದುದು ಸ್ಪಷ್ಟವಾಗಿತ್ತು. ಅವರಾಡಿಕೊಳ್ಳುವ ಮಾತುಗಳು ಒಂದೆರಡು ಸಲ ನನ್ನ ಕಿವಿಗೂ ಬಿದ್ದುವು. ಇದನ್ನು ಹೀಗೇ ಬೆಳೆಯಗೊಡುವುದು ಸರಿಯಲ್ಲವೆಂದುಕೊಂಡು, ಒಂದು ದಿನ ಇವರು ಮನೆಯಲ್ಲಿಲ್ಲದಾಗ ಹೊರಬಾಗಿಲಿಗೆ ಬಂದು ನಿಂತು,

ಈರವ್ವನನ್ನು ಹೊರಗೆ ಕರೆದು ಅವಳೊಡನೆ ಮಾತಾಡುವ ನೆಪದಿಂದ ಓಣಿಯ ಹೆಂಗಸರನ್ನು ದಬಾಯಿಸಿದೆ :

"ಅಗ್ಗದ ರಂಡೆಯರು ಏನೇನು ಮಾತಾಡ್ತಾರೆ ನೋಡಿದಿಯಾ ಈರವ್ವಾ? ನಮ್ಮದು ನಾವು ಮಾಡಿ ತಿಂದು ನಮ್ಮಷ್ಟಕ್ಕೆ ನಾವಿದ್ದರೆ ಇವರದೇನು ಗಂಟು ಹೋಗ್ತದೆ? ಇವರಿಗ್ಯಾಕೆ ಹೊಟ್ಟೆ ಉರಿ? ನಿಮ್ಮ ಮನೆಗೆ ನಾವು ಬರಬಾರದಂತೆ. ನಮ್ಮ ಮನೆಗೆ ನೀವು ಬರಬಾರದಂತೆ. ನಾವೂ ನೀವೂ ಚೆನ್ನಾಗಿ ಇರಬಾರದಂತೆ. ಇಲ್ಲದ ಹೊಲಸು ಸಂಬಂಧ ಹಚ್ಚಿ ಬಾಯಿ ಹರಿಬಿಡುತಾರೆ. ನನಗೇನು ಗಂಡನಿಲ್ಲಾ? ಮಕ್ಕಳಿಲ್ಲಾ? ಹೊಟ್ಟೇಕಿಚ್ಚಿನಿಂದ ನನ್ನ ಬಗ್ಗೆ ಮಾತಾಡುವವರು ಬೇಕಾದರೆ ನನ್ನ ಗಂಡನ ಸಾವಾಸ ಮಾಡಲಿ. ಅವರಿಗೂ ಮಕ್ಕಳಾದವು. ನಾಚಿಕೆಯಿಲ್ಲದೆ ಮಾತಾಡಿದರೆ ಇವರಿಗೇನು ಲಾಭವಾಗುತದೋ ಪರಮಾತ್ಮಗೇ ಗೊತ್ತು!"

"ಹೋಗಲಿ ಬಿಡು ಗಿರಿಜವ್ವಾ. ಇವರು ಏನಂದರೆ ನನಗೇನು! ನಾವು ನೆಟ್ಟಗಿದ್ದರಾಯಿತಲ್ಲ!" ಎಂದಳು ಈರವ್ವ.

"ಹೀಗೇ ಬಿಟ್ಟರೆ ಹ್ಯಾಗೆ ಇವರನ್ನ! ಇವರಾದರೂ ಏನು ದೊಡ್ಡ ಗರತಿಯರು ಅಂತ ಇಂಥಾ ದಿಮಾಕು ಇವರದು? ನಾ ಬಲ್ಲೆ ಒಬ್ಬೊಬ್ಬಳದೇ ಹೊಲಸು ರಾಡೀ ಎಲ್ಲಾ. ಗರತಿಯರಾದವರು ಬ್ಯಾರೆಯವರ ಬಗ್ಗೆ ಎಂದೂ ಮಾತಾಡೂದಿಲ್ಲ. ಇವರ ಗೆಣೆಯರದು ಮುಂದಿಗೆ ಗೊತ್ತಿಲ್ಲಂತ ತಿಳಕೊಂಡು ಇನ್ನೊಬ್ಬರ ಮಾರಿಗೆ ಮಸಿ ಹಚ್ಚಲಿಕ್ಕೆ ಬರುತಾರೆ. ಇನ್ನೊಮ್ಮೆ ಯಾವಾಕೆ ಯಾದರೂ ನನ್ನ ಬಗ್ಗೆ ಮಾತಾಡಿದ್ದು ಗೊತ್ತಾದರೆ ಓಣಿಯೊಳಗೆ ನಿಂತುಕೊಂಡು ಇವರ ರಾಡಿಯೆಲ್ಲಾ ಬಯಲಿಗೆ ಹಾಕುತೀನಿ. ಅಷ್ಟೇ ಅಲ್ಲ, ಇವರ ಗೆಣೆಯರು ಮನೆಗೆ ಬಂದಾಗ ನಾಲ್ಕು ಮಂದಿಯ ಮುಂದೆ ತೋರಿಸಿಕೊಡುತೀನಿ. ಅದಕ್ಕಾಗಿ ಒಂದೆರಡು ದಿನ ಊಟ ನಿದ್ದೆ ಇಲ್ಲದಿದ್ದರೂ ಚಿಂತೆಯಿಲ್ಲ."

ನಾನು ಹಾಗೆ ದಬಾಯಿಸಿದುದು ಪರಿಣಾಮಕಾರಿಯಾಗದಿರಲಿಲ್ಲ. ಓಣಿಯ ಹೆಂಗಸರಿಗೆಲ್ಲ ಆ ಮಾತು ಕೇಳಿಸಿದ್ದುವಾದರೂ ನನ್ನೊಡನೆ ವಾದಿಸಲು ಒಬ್ಬಳೂ ಹೊರಗೆ ಬರಲಿಲ್ಲ. ಅಂದಿನಿಂದ ನನ್ನ ಬಗ್ಗೆ ಗುಸು ಗುಸು ಮಾತಾಡುವುದು

ನಿಂತಿತು. ಒಬ್ಬಿಬ್ಬರು ಹೆಂಗಸರು ನನ್ನೊಡನೆ ಮಾತಾಡುವುದನ್ನೂ ನಿಲ್ಲಿಸಿದರು. ಅವರೊಡನೆ ನನಗಾದರೂ ಎಲ್ಲಿ ಬೇಕಿತ್ತು ಮಾತು! ಚಮತ್ಕಾರದ ವಿಷಯ ವೆಂದರೆ, ಅಷ್ಟು ದಿನ ನನ್ನ ಬಗೆಗೆ ಅಸೂಯೆಪಟ್ಟುಕೊಳ್ಳುತ್ತಿದ್ದ ಎಷ್ಟೋ ಮಂದಿ ಹೆಂಗಸರು ಅಂದಿನಿಂದ ನನ್ನೊಡನೆ ಸಲಿಗೆ ಬೆಳೆಸತೊಡಗಿದರು. ನನ್ನ ವಾಗ್ಬಾಣ ಗಳಿಗೆ ಅವರು ಪೂರಾ ಹೆದರಿಹೋಗಿದ್ದುದು ಎದ್ದುಕಾಣುತ್ತಿತ್ತು. ಅವರು ಸಲಿಗೆ ತೋರ್ಪಡಿಸಿದರೂ ನಾನು ಮಾತ್ರ ಬಿಗುವಿನಿಂದಲೇ ಇದ್ದು ಬಿಟ್ಟೆ. ಅವರನ್ನು ಮನೆಯಲ್ಲೂ ಸೇರಿಸಲಿಲ್ಲ. ಹೊಸ್ತಿಲು ದಾಟಿ ಬಂದರೆ ಸಾಕು, ಹಿತ್ತಲಿನವರೆಗಿನ ವಿಷಯಗಳನ್ನೆಲ್ಲ ತಿಳಿದುಕೊಂಡುಬಿಡುವ ಜಾತಿ ಹೆಂಗಸರದ್ದು.

ಮತ್ತೆ ಆರು ತಿಂಗಳು ಕಳೆದುವು. ವಿಮಲೆ ಹುಟ್ಟಿದಳು.

"ಇನ್ನು ಮಕ್ಕಳು ಸಾಕು," ಎಂದು ಸ್ಪಷ್ಟವಾಗಿ ಹೇಳಿದೆ.

ಅವರು ನಗುತ್ತಾ ನುಡಿದರು:

"ಸಾಕು ಅಂತ ಹೇಳಿದರೆ ದೇವರು ಕೇಳುತಾನೇನೇ ಹುಚ್ಚಿ? ಇದೆಲ್ಲಾ ನಮ್ಮ ಕೈಯೊಳಗಿನ ಮಾತಲ್ಲ."

"ಈಗ ಎಲ್ಲಾ ಆಗುತದಲ್ಲರೀ? ಮೊನ್ನೆ ಮೊನ್ನೆ ಸುಶೀಲಾ ಹೇಳು ತಿದ್ದಳು. ಅದೆಂಥಾದ್ದೋ ಔಷಧ ಬಂದದೆ ಅಂತಲ್ಲ ಪ್ಯಾಟಿಯೊಳಗೆ?"

"ಸುಶೀಲಾಗೇನು ಗೊತ್ತು ಈ ಸಂಗತಿ?" ಅವರು ಕೊಂಚ ಬೆರಗು ಗೊಂಡು ಕೇಳಿದರು.

"ಅವಳಿಗೆ ಗೊತ್ತಾಗದ್ದು ಏನದ ಹೇಳಿರಿ. ಅವಳೇನು ಇನ್ನೂ ಸಣ್ಣ ಕೂಸು ಅಂತ ತಿಳಿದೀರೋ ಏನು?"

"ಹೋಗಲಿ ಬಿಡು. ಅವಳನ್ನಾದರೂ ನಾವ್ಯಾಕೆ ಆಡಿಕೋಬೇಕು? ವರದಕ್ಷಿಣೆ ಕೊಡೂದಕ್ಕೆ ಶಕ್ತಿಯಿಲ್ಲಂತ ಮದುವೆಯಾಗಲಿಲ್ಲ ಇನ್ನು. ಪಾಪ. ಒಂದು ನೌಕರಿಯೂ ಸಿಗಲಿಲ್ಲ ಅವಳಿಗೆ," ಎಂದು ಅವರು ಮರುಕ ಸೂಚಿಸಿದರು.

"ಈಗಿನ ಕಾಲದಾಗ ನೌಕರಿ ಆದರೂ ಎಲ್ಲಿ ಸಿಗುತಾವೆ ಸುಲಭದಲ್ಲಿ? ಹೂಂ. ಅದಿರಲಿ. ನೀವು ಔಷಧ ತಗೊಳ್ಳುವದಕ್ಕೆ ಮರೆಯಬ್ಯಾಡ್ರಿ."

"ಹಾಗೇ ಆಗಲಿ ಮಹರಾಯಿತಿ," ಎಂದು ಅವರು ಒಪ್ಪಿಕೊಂಡರು.

ಮೈ ಬಣ್ಣ ಮತ್ತು ರೂಪಗಳಲ್ಲಿ ವಿಮಲೆಯೂ ಕುಮಾರನನ್ನೇ ಹೋಲುತ್ತಿದ್ದಳು. ಅವಳೂ ಚೆಲುವೆಯಾಗುವಳೆಂದು ನಾನು ಭಾವಿಸಿದೆ. ಆ ಹೆರಿಗೆಯ ಕಾಲಕ್ಕೂ ನನಗೆ ಬಹಳ ನೋವಾಯಿತು. ಮಕ್ಕಳು ಸಾಕೆಂದು ನನಗೆನ್ನಿಸಲು ಅದೇ ಕಾರಣವಾಗಿತ್ತು. ನಾಲ್ಕನೆಯ ಮಗುವಾಗುವ ಪ್ರಸಂಗ ಬಂದರೆ ನಾನು ಸತ್ತೇಹೋಗಬಹುದೆಂದು ಹೆದರಿಕೆಯಾಗಿಯೇ ನಾನು ಅವರಿಗೆ ಹಾಗೆ ಹೇಳಿದುದು.

## ೨೩

ವಿಮಲೆ ಹುಟ್ಟಿ ಐದು ತಿಂಗಳಾಗಿತ್ತು. ನಾನಾಗಲೆ ಎದ್ದು ತಿರುಗಾಡಲು ಸಮರ್ಥಳಾಗಿದ್ದೆ. ಎಷ್ಟೋ ದಿನಗಳಿಂದ ಸಿನಿಮಾಗೆ ಹೋಗಲು ಸಾಧ್ಯವಾಗಿರಲಿಲ್ಲ. ಎಳೆಯ ಮಗುವನ್ನೆತ್ತಿಕೊಂಡು ಹೋಗುವುದಕ್ಕೂ ನನಗೆ ಬೇಸರವೇ.

ಒಂದು ಭಾನುವಾರ, ಮಕ್ಕಳನ್ನು ಈರವ್ವನ ವಶಕ್ಕೊಪ್ಪಿಸಿ ಸಿನಿಮಾಕ್ಕೆ ಹೊರಟುನಿಂತು ಸುಶೀಲೆಯನ್ನು ಕೂಗಿದೆ. ಬಹಳ ದಿನಗಳಿಂದೀಚೆಗೆ ನಾನು ಅವಳನ್ನು ಕಂಡಿರಲಿಲ್ಲ. ಅವಳೂ ನಮ್ಮ ಮನೆಗೆ ಬರುವುದನ್ನು ಕಡಮೆ ಮಾಡಿದ್ದಳು. ಹಾಗೆಂದು, ಅವಳ ಬಗೆಗೆ ನನ್ನಲ್ಲಿದ್ದ ಪ್ರೀತಿಯೇನೂ ಕಡಮೆಯಾಗಿರಲಿಲ್ಲ. ಎಷ್ಟಾದರೂ ಅವಳು ನನ್ನ ಗುರು. ನನಗೆ ನಾಲ್ಕು ಅಕ್ಷರ ಕಲಿಸಿದವಳು, ನಾಗರಿಕ ರೀತಿ ನಡತೆಗಳನ್ನು ಹೊಸ ಹೊಸ ಫ್ಯಾಷನ್ನಿನ ಪರಿಯನ್ನು ತಿಳಿಸಿದವಳು, ಕತೆ ಕಾದಂಬರಿಗಳನ್ನೋದುವುದರಲ್ಲಿ ಅಭಿರುಚಿ ಹುಟ್ಟಿಸಿದವಳು – ಅವಳ ಬಗೆಗೆ ನಾನು ಕೃತಜ್ಞಳಾಗಿರುವುದು ಸಹಜವೇ ಆಗಿತ್ತು.

“ಇಷ್ಟು ದಿನ ಕಾಣಲೇ ಇಲ್ಲವಲ್ಲೇ?” ಅವಳು ಬರುತ್ತಲೂ ನಾನು ಕೇಳಿದೆ.

“ಸವುಡೇ ಇಲ್ಲವ್ವ,” ಎಂದಳು ಸುಶೀಲಾ – ಏನೋ ಒಂದು ಮಹಾ ಜವಾಬ್ದಾರಿ ವಹಿಸಿಕೊಂಡವರ ಹಾಗೆ.

“ಏನೇ ಅಂಥಾ ಕೆಲಸ?”

“ಇನ್ನೇನವ್ವ? ಕೆಲಸ ಹುಡುಕೂದೇ ಒಂದು ಕೆಲಸ. ಒಂದು ವರ್ಷದಿಂದ ತಿರುಗುತಾ ಇದೀನಿ. ಇನ್ನೂ ಫಲ ಸಿಗಲಿಲ್ಲ.”

" ಈ ಕಾಲವೇ ಹಾಗೆ ಸುಶೀಲಾ. ನೀನೇನು ನಿರಾಶಳಾಗಬಾರದು. ಇಂದಿಲ್ಲ ನಾಳೆ ಸಿಕ್ಕೀತು ಕೆಲಸ. ಸಿನಿಮಾಗೆ ಹೋಗೋಣ ಬರ್‍ತೀಯಾ ?"

ನನ್ನ ಜೊತೆಗೆ ಬರುವುದಕ್ಕೂ ಅವಳಿಗಿಷ್ಟವಿದ್ದಂತಿರಲಿಲ್ಲ.

" ಒಲ್ಲೆನವ್ವ. ಇವತ್ತು ಒಬ್ಬರು ಬರುವವರಿದಾರೆ ಮನೆಗೆ."

" ಒಬ್ಬರು ಅಂದರೆ ?" ಎಂದು ನಾನು ಮಾರ್ಮಿಕವಾಗಿ ಪ್ರಶ್ನಿಸಿದೆ.

" ಅಂದರೆ ನನ್ನ ಗೆಳತಿಯೊಬ್ಬರು ಅಂತ."

" ಅಷ್ಟೇ ಹೌದಲ್ಲೋ! ನಾನೇನೋ ತಿಳಿದಿದ್ದೆ – ಗೆಳೆಯರು ಅಂತ," ಎಂದು ನಾನು ತಮಾಷೆ ಮಾಡಿದೆ. " ಗೆಳತಿ ಬಂದರೆ ಕೂತಿರ್‍ತಾಳ ಮನೆಯೊಳಗೆ. ನಾನು ಸಿನಿಮಾ ನೋಡಿ ಬಹಳ ದಿನ ಆಯಿತು. ಹೋಗೋಣ ನಡೀ." ಎಂದೆ.

ಅವಳು ಮನಸ್ಸಿಲ್ಲದ ಮನಸ್ಸಿನಿಂದ ಒಪ್ಪಿಕೊಂಡಳು. ಸೀರೆ ಬದಲಿಸಿ, ಅಲಂಕಾರ ಮಾಡಿಕೊಂಡು ಹೊರಟೆವು. ಆ ಮಾತು ಈ ಮಾತು ಆಡುತ್ತಾ ನಾನು ಕೇಳಿದೆ :

" ನಿನ್ನ ಮದುವೀದು ಏನಾದರೂ ಆಯ್ತೇ ಸುಶೀಲಾ ?"

" ಎದೆಯಲ್ಲಿನ ತಿರಸ್ಕಾರವೆಲ್ಲವನ್ನೂ ಧ್ವನಿಯಲ್ಲಿಳಿಸಿ ಅವಳು ಹೇಳಿದಳು :

" ಮದುವೀ! ಮದುವೀ! ಇನ್ನೊಮ್ಮೆ ಅವರ ಸುದ್ದೀ ಎತ್ತ ಬ್ಯಾಡ ನನ್ನ ಮುಂದೆ ಗಿರಿಜಕ್ಕಾ !"

" ಅರೆ! ಏನೇ, ಹೀಗೆಲ್ಲ ಆಡುತೀ ? ನಿನಗೇನಾಯ್ತು ?"

" ಆಗುವದೇನು ಉಳದದೆ ಅಂತೀ ? ಆಗಬೇಕಾದ್ದೆಲ್ಲಾ ಆಗಿಹೋಯ್ತು. ಇದಕ್ಕಿಂತ· ಹೆಚ್ಚಿಗೆ ನನ್ನನ್ನೇನೂ ಕೇಳಬ್ಯಾಡ. ಮದುವಿ ಅಂದರೆ ಸಾಕು, ಮೈಯೆಲ್ಲಾ ಉರೀತದೆ ನನಗೆ. ನಾನು ಬ್ರಾಹ್ಮಣರ ಮಗಳಾಗಿ, ಅದರಲ್ಲೂ ಬಡ ಬ್ರಾಹ್ಮಣರ ಮಗಳಾಗಿ ಹುಟ್ಟಿದ್ದೇ ನನ್ನ ತಪ್ಪು. ಒಬ್ಬೊಬ್ಬ ವರ ನಾಲ್ಕು ಐದು ಸಾವಿರ ರೂಪಾಯಿ ವರದಕ್ಷಿಣೆ ಕೇಳುತಾರೆ. ನಮ್ಮ ತಂದೆ ಎಲ್ಲಿಂದ ಕೊಟ್ಟಾರು ಇಷ್ಟು ಹಣ ? ಈ ವರಗಳನ್ನೆಲ್ಲಾ ಬೆಂಕಿಯಲ್ಲಿ ಹಾಕಿ ಸುಡಬೇಕು. ಇವರ ಸಂಗಡ ಮದುವೆಮಾಡಿಕೊಳ್ಳುವ ಮಾತೂ ಬ್ಯಾಡ."

ಸುಶೀಲೆಯ ಮನಃಸ್ಥಿತಿ ನನಗೆ ಸ್ವಲ್ಪ ಸ್ವಲ್ಪವಾಗಿ ಅರ್ಥವಾದಂತಾಯಿತು.

ಅಂಥ ಮನಃಸ್ಥಿತಿಯಲ್ಲಿ ಅವಳಿರುವಾಗ ಸ್ವೈರವಾಗಿ ವರ್ತಿಸಿ ಏನು ಗಂಡಾಂತರ ತಂದುಕೊಳ್ಳುವಳೋ ಎಂದು ಕೊಂಚ ದಿಗಿಲೂ ಆಗದಿರಲಿಲ್ಲ.

ಟಿಕೀಟು ತೆಗೆದುಕೊಂಡು ನಾವು ಥಿಯೇಟರಿನಲ್ಲಿ ಪ್ರವೇಶಿಸುತ್ತಿದ್ದ ಹಾಗೇ ಸೂಟು ಧರಿಸಿದ ಪ್ರೌಢವ್ಯಕ್ತಿಯೊಂದು ಎದುರಿಗೆ ಬಂದು ಸುಶೀಲೆಯನ್ನು ಮಾತನಾಡಿಸಿತು.

"ಇವರ್‍ಯಾರು ಸುಶೀಲಾ ?"

ಆ ಪ್ರಸಂಗವನ್ನು ನಾನು ಒಡನೆಯೇ ಅರ್ಥಮಾಡಿಕೊಂಡೆ. ನನ್ನ ಜೊತೆಗೆ ಸಿನಿಮಾಕ್ಕೆ ಬರಲು ಅವಳು ಹಿಂಜರಿಯುತ್ತಿದ್ದುದೇಕೆಂಬುದೂ ಗೊತ್ತಾಯಿತು. ಇವರಿಬ್ಬರೂ ಸೇರಿ ಸಿನಿಮಾ ಕಾರ್ಯಕ್ರಮವನ್ನು ಮೊದಲೇ ಗೊತ್ತುಪಡಿಸಿರಬೇಕು. ಅದನ್ನು ತಪ್ಪಿಸಲಿಷ್ಟವಿಲ್ಲದೆ ಸುಶೀಲೆ ಹಾಗೆ ಹಿಂಜರಿದಿರಬೇಕು. ಅವರು ನಿಶ್ಚಿತಗೊಳಿಸಿದ ಸಿನಿಮಾಕ್ಕೇ ನಾವೂ ಬಂದಿದ್ದುದು ಸುಶೀಲೆಯನ್ನು ಇನ್ನೂ ಗೊಂದಲಕ್ಕೀಡುಮಾಡಿತ್ತು. ಅವಳಿಗಾಗಿ ಕಾದುನಿಂತಿದ್ದ ಆ ಸೂಟುಧಾರಿ, ಅವಳೊಡನೆ ಬಂದಿದ್ದ ನನ್ನನ್ನು ನೋಡಿ ಸಹಜವಾಗಿಯೆ ಹಾಗೆ ಕೇಳಿದ್ದರು.

ನನ್ನನ್ನು ಕಂಡು ಅವರಿಗೆ ಅಸಮಾಧಾನವೇನೂ ಉಂಟಾದಂತೆ ಕಾಣಲಿಲ್ಲ. ಹಾಗಾಗುವುದು ಸಾಧ್ಯವೂ ಇರಲಿಲ್ಲ, ಅಲ್ಲವೆ? ನನ್ನನ್ನು ನೋಡಿ ಮರುಳಾಗದಿರುವ ಗಂಡಸರಾದರೂ ಎಲ್ಲಿದ್ದರು ?

"ಇವರು ಗಿರಿಜಾದೇವಿಯವರು, ಸುಂಕದ ಕಟ್ಟೆಯ ಕಾರಕೂನ ರಾಚಪ್ಪನವರ ಹೆಂಡತಿ," ಎಂದು ನನ್ನನ್ನು ಪರಿಚಯಮಾಡಿಕೊಟ್ಟಳು ಸುಶೀಲಾ. "ಇವರು ಸ್ಕೂಲ್ ಬೋರ್ಡಿನ ಎ. ಓ. ಸಾಹೇಬರು, ಗಿರಿಜಕ್ಕಾ."

ಸಾಹೇಬರು ಮಂದಸ್ಮಿತ ಬೀರುತ್ತಾ ಎರಡೂ ಕೈಗಳನ್ನು ಜೋಡಿಸಿ "ನಮಸ್ಕಾರ," ಎಂದರು.

ಅದು, ಸಭ್ಯ ಸಮಾಜದ ಶಿಷ್ಟಾಚಾರವೆಂಬುದೇನೊ ನನಗೆ ಗೊತ್ತಿದ್ದಿತು. ಸಿನಿಮಾಗಳಲ್ಲಿ ಅಂಥ ನಮಸ್ಕಾರ ಚಮತ್ಕಾರಗಳನೇಕವನ್ನು ನೋಡಿದವಳಲ್ಲವೆ ನಾನು? ಆದರೆ, ಹಾಗೆ ಅಪರಿಚಿತ ಗಂಡಸರೊಡನೆ ಶಿಷ್ಟಾಚಾರದಿಂದ

ವರ್ತಿಸುವ ಪ್ರಸಂಗ ಅದು ಮೊದಲು ನನಗೆ ಬಂದಿರಲಿಲ್ಲ. ನಾನು ಸ್ವಲ್ಪ ಸಂಕೋಚದಿಂದಲೇ ಅವರ ನಮಸ್ಕಾರ ಸ್ವೀಕರಿಸಿದೆ.

"ನಿಮ್ಮ ಪರಿಚಯವಾದದ್ದು ಬಹಳ ಸಂತೋಷ," ಎಂದರವರು. ಅವರ ಕಣ್ಣುಗಳೆರಡೂ ನನ್ನ ಮೇಲೆಯೇ ನೆಲಸಿದ್ದುವು.

ತುಟಿಗಳಲ್ಲಿ ವ್ಯಂಗ್ಯನಗು ತುಳುಕಿಸುತ್ತಾ ನಮ್ಮಿಬ್ಬರನ್ನೂ ದಿಟ್ಟಿಸುತ್ತಿದ್ದಳು ಸುಶೀಲಾ. ಥಿಯೇಟರಿನ ಅಂಗಳದಲ್ಲಿ ನೆರೆದಿದ್ದ ಜನರೂ ನಮ್ಮನ್ನೇ ಕುತೂಹಲದಿಂದ ನಿರೀಕ್ಷಿಸುತ್ತಿದ್ದರು.

"ನೀವ್ಯಾಕೆ ಟಿಕೀಟು ತೆಗೆಸಿದಿರಿ? ನಾನಾಗಲೇ ರಿಜರ್ವ್ ಮಾಡಿಸಿದ್ದೆನಲ್ಲಾ!" ಎಂದರು ಆ ಸೂಟ್‌ವಾಲ.

"ರಿಜರ್ವ್ ಜಾಗಕ್ಕೇ ಹೋಗೋಣವೇನು ಗಿರಿಜಕ್ಕಾ?" ಎಂದಳು ಸುಶೀಲಾ. ಅವಳ ತುಟಿಗಳ ಮೇಲಿನ ಆ ವಿಚಿತ್ರ ನಗು ಇನ್ನು ಇತ್ತು ಅಲ್ಲಿಯೇ.

"ಬರ್‍ರಿ, ಬರ್‍ರಿ," ಎಂದು ಒತ್ತಾಯಮಾಡಿದರು ಸೂಟ್‌ವಾಲ.

ಅವರೊಟ್ಟಿಗೆ ಕುಳಿತು ಸಿನಿಮಾ ನೋಡುವಷ್ಟು ಧೈರ್ಯ ಮಾತ್ರ ನನ್ನಲ್ಲಿರಲಿಲ್ಲ. ಯಾರಾದರೂ ನೋಡಿದರೇನು ಗತಿ? ನಮ್ಮವರಿಗೆ ಗೊತ್ತಾದರೆ? ಛೆ. ಛೆ. ಇಂಥ ಸಾಹಸ ಒಳ್ಳೆಯದಲ್ಲ.

"ಏನೂ ಬ್ಯಾಡ. ನಾವು ಹೆಂಗಸರ ಜಾಗದಲ್ಲೇ ಕೂಡುತೀವಿ," ಎಂದು ಹೇಳಿದವಳೇ ಅಲ್ಲಿ ನಿಲ್ಲದೆ ಥಿಯೇಟರಿನಲ್ಲಿ ಪ್ರವೇಶಿಸಿದೆ. ಎ. ಓ. ಸಾಹೇಬರು ತುಟಿ ಕಚ್ಚಿಕೊಳ್ಳುತ್ತಾ ರಿಜರ್ವ್‌ಸ್ಥಳಕ್ಕೆ ಹೊರಟು ಹೋದರು. ಸುಶೀಲೆಯೊಬ್ಬಳನ್ನೇ ಅವರು ಕರೆಯುವಂತಿರಲಿಲ್ಲ. ಪಾಪ! ಅಂದು ಅವರು ತುಂಬಾ ಪೇಚಾಡಿರಲು ಸಾಕು. ಥಿಯೆಟರಿನಲ್ಲಾದರೂ ಹೆಚ್ಚು ಹೊತ್ತು ಕುಳಿತಿದ್ಧರೋ ಇಲ್ಲವೋ. ನನ್ನನ್ನು ಮನಸ್ಸಿನಲ್ಲಿಯೇ ಶಪಿಸಿಕೊಳ್ಳುತ್ತಾ ಎದ್ದು ಹೊರಟು ಹೋಗಿರಬಹುದು.

"ಸಾಹೇಬರ ಸಂಗಡ ಬಹಳ ಸಲಿಗೆ ಬೆಳೆದ ಹಾಗೆ ಕಾಣುತದಲ್ಲ ಸುಶೀಲಾ?" ಎಂಬ ನನ್ನ ಪ್ರಶ್ನೆಗೆ ಅವಳು ಕೊಂಚವೂ ಸಂಕೋಚಪಟ್ಟುಕೊಳ್ಳದೆ ಉತ್ತರವಿತ್ತಳು.

" ಹೌದು. ನೀನೇ ನೋಡಿದಿಯಲ್ಲ!"

" ನಿಮ್ಮ ತಂದೆಯವರಿಗೂ ಗೊತ್ತೇನು ಈ ಸಂಗತಿ ?"

" ಇಲ್ಲ. ಅವರಿಗೆ ಹ್ಯಾಗೆ ಗೊತ್ತಾದೀತು ?"

" ಯಾರಾದರೂ ನೋಡಿದವರು ಹೇಳಿದರೆ ?"

" ಹೇಳಿದರೆ ಗೊತ್ತಾಗಬಹುದು. ಅವರೂ ಏನೂ ಅನ್ನುವದಿಲ್ಲ."

" ಅದೇನೇ, ಹೀಗನ್ನುತೀ ? ಮಗಳು ಹೀಗೆಲ್ಲ ಗಂಡಸರೊಡನೆ ತಿರುಗಿದರೆ ಸುಮ್ಮನಿರ್ತಾರೇ ಅವರು ?"

" ಮತ್ತೇನು ಮಾಡಬೇಕು ಅವರಾದರೂ ? ನನಗೊಂದು ಮದುವೆ ಮಾಡುವದಕ್ಕೂ ಅವರಿಂದ ಶಕ್ಯವಾಗಲಿಲ್ಲ. ನಾನೇ ವರ ಹುಡುಕಿಕೊಂಡು ಮದುವೆಯಾಗಿ ಅವರ ಭಾರ ತಪ್ಪಿಸಿದರೆ ಸಾಕಾಗಿದೆ ಅವರಿಗೆ."

" ಈ ಸಾಹೇಬರಿಗಿನ್ನು ಮದುವೆಯಾಗಿಲ್ಲೇನು ?"

" ಅಂದರೆ ? ನಾನೇನು ಅವರನ್ನ ಮದುವೆಯಾಗುತೀನಂತ ತಿಳಿದೀಯಾ ?"

" ಮತ್ತೆ ?"

" ಅವರು ಬ್ರಾಹ್ಮಣರೂ ಅಲ್ಲ. ಅವಿವಾಹಿತರೂ ಅಲ್ಲ. ನಾಲ್ಕು ಮಕ್ಕಳಿವೆ ಅವರಿಗೆ ಮನೆಯಲ್ಲಿ. ಹೆಂಡತಿಯೂ ಇದಾಳೆ."

" ಆದರೂ...."

" ಆದರೂ ಚಪಲ ತಪ್ಪಿಲ್ಲ. ಅಧಿಕಾರ ಬ್ಯಾರೆ ಅದೆಯಲ್ಲ ಅವರ ಕೈಯಲ್ಲಿ. ನಮ್ಮಂಥ ಎಷ್ಟೋ ಹೆಂಗಸರನ್ನ ಆಟವಾಡಿಸುವ ಶಕ್ತಿ ಅದೆಯಲ್ಲ."

" ನಿನಗೆ ನೌಕರಿಯನ್ನಾದರೂ ಕೊಡುತೀನಂತ ಹೇಳಿದ್ದಾರೇನೇ ?"

" ಅದೇ ಮಾತು ನಡೆದದೆ ಇಲ್ಲಿಯವರೆಗೆ. ನೌಕರಿಯೇನೋ ಕೊಡುತಾರೆ, ನಾನೂ ಅವರಿಗೆ ಕೊಟ್ಟರೆ. ಗೊತ್ತಾಯಿತೇನು ?"

" ನೀನೇನು ಹೇಳಿದ್ದೀ ?"

" ಇನ್ನು ಏನೂ ಹೇಳಿಲ್ಲ."

ಒಂದೆರಡು ನಿಮಿಷ ಸುಮ್ಮನಿದ್ದು ನಾನು ಮತ್ತೆ ಕೇಳಿದೆ :

" ಈ ಎ. ಓ. ಸಾಹೇಬರೆಲ್ಲಾ ಇಂಥವರೇ ಏನೇ ಸುಶೀಲಾ ?"

" ನೂರಕ್ಕೆ ತೊಂಭತ್ತು ಮಂದಿ ಇಂಥವರೇ ಅನ್ನಬೇಕು. ಎಂಟು ಹತ್ತು ವರ್ಷಗಳ ಹಿಂದೆ ಇವರನ್ನ ಕೇಳುವವರೇ ಇರಲಿಲ್ಲ. ಬಡವರಾದ ಶಿಕ್ಷಕಿಯರ ಮೇಲೆಲ್ಲ ಇವರು ಕೃಷ್ಣನಂತೆ ದರಬಾರು ನಡಸುತ್ತಿದ್ದರು. ಇವರಿಗೆ ವಶಳಾಗದ ಶಿಕ್ಷಕಿಯ ನೌಕರಿ ಹೋಯಿತೆಂದೇ ತಿಳಿಯಬೇಕು. ಕಳ್ಳೇಕಾಯಿ ಜಿಲ್ಲೆಯೊಳಗೆ ಇಂಥ ಒಬ್ಬ ಪ್ರಸಿದ್ಧ ಎ. ಓ. ಕೃಷ್ಣನಿದ್ದ. ನೂರಾರು ಶಿಕ್ಷಕಿಯರನ್ನ ಕೆಡಿಸಿ ಕಲಿಯುಗದ ಕೃಷ್ಣನಾಗಿ ಮೆರೆಯುತಿದ್ದ. ಒಬ್ಬ ಶಿಕ್ಷಕಿ ಮಾತ್ರ ಅವನ ಬಲೆಗೆ ಬೀಳದೆ, ನೌಕರಿ ಕಳಕೊಳ್ಳುವದಕ್ಕೂ ತಯಾರಾಗಿ ಅವನ ಲಫಂಗತನವನ್ನ ಬಯಲಿಗೆಳೆದಳಂತೆ. ಆಗ ಜಿಲ್ಲೆಯ ಎಲ್ಲಾ ಶಿಕ್ಷಕಿಯರೂ ಸಂಪು ಹೂಡಲಿಕ್ಕೆ ತಯಾರಾದರು. ಆ ಕಲಿಯುಗದ ಕೃಷ್ಣ ಹೆದರಿ ನೌಕರಿಗೆ ರಾಜೀನಾಮೆ ಕೊಟ್ಟು ಜಿಲ್ಲೆಯನ್ನೇ ಬಿಟ್ಟು ಓಡಿಹೋದನಂತೆ. ಇತ್ತಿತ್ತಲಾಗಿ ಈ ಎ. ಓ. ಗಳು ಮೊದಲಿನಂತೆ ಸ್ವೈರಾಚಾರ ಮಾಡುವದನ್ನ ಸ್ವಲ್ಪ ಕಡಿಮೆ ಮಾಡಿದಾರೆ. ಆದರೂ ನೌಕರಿಗಾಗಿ ಹಾತೊರೆಯುವ ನಮ್ಮಂಥವರು ಮಾತ್ರ ಇವರ ಬಲೆಗೆ ಬಿದ್ದೇ ಬೀಳಬೇಕಾಗುತದೆ."

" ಯಾಕೆ ? ಬ್ಯಾರೆ ನೌಕರಿ ಸಿಗುವದಿಲ್ಲೇನು ?"

" ಹೆಂಗಸರಿಗೆ ನೌಕರಿ ಅಂದರೆ ಬ್ಯಾರೆ ಎಂಥಾವು ? ಯಾವದಾದರೊಂದು ಆಫೀಸಿನೊಳಗೆ ಟೈಪಿಸ್ಟ್ ಆಗಿಯೋ ಕ್ಲಾರ್ಕ್ ಆಗಿಯೋ ದುಡಿಯಬಹುದು. ಆ ನೌಕರಿ ಸಿಗಬೇಕಾದರೂ ಕೂಡಾ ನಾವು ನಮ್ಮ ಶೀಲದ ಲಂಚ ಕೊಟ್ಟೇ ಕೊಡಬೇಕಾಗುತದೆ. ಈ ಊರಲ್ಲೊಂದು ದೊಡ್ಡ ಲೈಬ್ರರಿ ಅದೆಯಲ್ಲ – ಅಲ್ಲಿ ಒಂದು ಜಾಗಾ ಖಾಲಿಯಿತ್ತು, ನೂರು ರೂಪಾಯಿ ಸಂಬಳ. ಕೆಲಸವೂ ಅಷ್ಟು ಕಷ್ಟದ್ದಲ್ಲ. ಲೈಬ್ರರಿಯ ಅಧ್ಯಕ್ಷನಾಗಿ ಒಬ್ಬ ದೊಡ್ಡ ಸಾಹಿತಿ ಇದ್ದಾನೆ – ಊರೊಳಗೆಲ್ಲಾ ದೊಡ್ಡ ಮನುಷ್ಯ ಅಂತ ಹೆಸರೂ ಅದೆ ಅವನಗೆ. ಭಾರತದ ಸಂಸ್ಕೃತಿ, ಜೀವನದ ಮೌಲ್ಯಗಳು, ಉದಾತ್ತ ವಿಚಾರ, ಶ್ರೇಷ್ಠ ಪರಂಪರೆ ಅಂತ ಭಾಷಣ ಹೊಡೆಯುವದರಲ್ಲೂ ಲೇಖ ಬರೆಯುವದರಲ್ಲೂ ಬಹಳ ಪ್ರಸಿದ್ಧ – ಅಂಥವನೂ ನನಗೆ ನೌಕರಿ ಕೊಡಬೇಕಾದರೆ ನನ್ನ ಸಹವಾಸದ

ಲಂಚ ಬೇಕೇಬೇಕೆಂದು ಹೇಳಿದ. "ರಾತ್ರಿ ಒಂಭತ್ತು ಗಂಟೆಗೆ ನಮ್ಮ ಮನೆಗೆ ಬರ್ರಿ. ವಿಚಾರ ಮಾಡೋಣ," ಅಂತ ಹೇಳಿದ."

ಉಕ್ಕಿ ಬರುತ್ತಿದ್ದ ನಗೆಯನ್ನು ತಡೆಹಿಡಿಯಲಾಗಲಿಲ್ಲ. ನಗುನಗುತ್ತಲೇ ನಾನೆಂದೆ :

"ಹೆಣ್ಣು ಅಂದರೆ, ಅದರಲ್ಲೂ ಹರಯದ ಹುಡುಗಿಯರೆಂದರೆ ಇವೆಲ್ಲಾ ಹೀಗೇ ಬಾಯಿ ಬಾಯಿ ಬಿಡುತಾವೆ, ಮ್ಯಾಲ ಮ್ಯಾಲ ಸಂಭಾವಿತತನದ ಸೋಗು. ಈ ಗಂಡಸರ ಜಾತೀನೇ ಹೀಗೆ."

"ನೀನು ಹೇಳುವದು ನೂರಕ್ಕೆ ನೂರರಷ್ಟು ಬರಾಬರಿ. ನನಗೂ ಅದೇ ಅನುಭವ. ನೌಕರಿ ಕೇಳುವದಕ್ಕೆ ಹೋದಲ್ಲೆಲ್ಲಾ ನನ್ನನ್ನು ಕಾಮದ ಕಣ್ಣಿಂದ ನೋಡುವವರೇ. ಇದುವರೆಗೂ ಒಬ್ಬನೇ ಒಬ್ಬ ಸಂಭಾವಿತನನ್ನು ನಾ ನೋಡಲಿಲ್ಲ."

ಅಷ್ಟು ಹೇಳಿ, ಸ್ವಲ್ಪ ಹೊತ್ತು ಸುಮ್ಮನೆ ಸಿನಿಮಾನೋಡುತ್ತಿದ್ದು ಮತ್ತೆ ಅವಳೆಂದಳು :

"ಜಗತ್ತಿನಾಗಿನ ಮಂದಿಯೆಲ್ಲಾ ಹೀಗೇ ಢೋಂಗಿಗಳಾಗಿರುವಾಗ ನಮ್ಮಂಥ ಬಡವರು ಮರ್ಯಾದೆಯಿಂದ ಬದುಕುವದು ಶಕ್ಯವೇ ಇಲ್ಲಂತ ನನ ಗನಿಸಿತು ಗಿರಿಜಕ್ಕಾ. ಮದುವೆಯಾಗುವದಕ್ಕೆ ರೊಕ್ಕ ಬೇಕು. ಮದುವೆ ಯಾಗದೆ ಹಾಗೇ ಇರೋಣ ಅಂದರೂ ರೊಕ್ಕ ಬೇಕು. ನೌಕರಿ ಹುಡುಕಲಿಕ್ಕೆ ಹೋದರೆ ಇಂಥಾ ಅನುಭವ. ನನಗನಿಸುತದೆ...."

ಮತ್ತೊಂದು ಕ್ಷಣ ಸುಮ್ಮನಿದ್ದು ಅವಳೆಂದಳು :

"ನಿನಗೆ ಶರಚ್ಚಂದ್ರರ ಕಾದಂಬರಿಗಳನ್ನ ಓದಲಿಕ್ಕೆ ತಂದುಕೊಟ್ಟಿದ್ದೆನಲ್ಲ. ನೆನಪಿದೆಯೇ ಗಿರಿಜಕ್ಕ ?"

"ಯಾವವು ? ಪರಿಣೀತಾನೇ ?"

"ಹೂಂ. ಪರಿಣೀತಾ....ದೇವದಾಸ್....ಚಂದ್ರನಾಥ...."

"ಹೌದೌದು ಓದಿದ್ದೀನಲ್ಲ. ಬಹಳ ಚಂದ ಚಂದ ಕಥೆಗಳು...."

"ಚಂದ ಕಥೆಗಳು ಅನ್ನುವದೇನೋ ನಿಜ. ಅಲ್ಲಿ ಕಾಣುವ ಜನರೂ

ಬಹಳ ಒಳ್ಳೆಯವರು. ಕಾಮುಕರೂ ಢೋಂಗಿಗಳು ಬಹಳ ಕಡಿಮೆ ಅವರಲ್ಲಿ. ಆ ಕಥೆಗಳನೋದುತ್ತಿದ್ದ ಹಾಗೆ ನಮ್ಮ ಮನಸ್ಸು ಅದಕ್ಕೆ ಸೋಲುತದೆ. ಅಲ್ಲಿಯ ನಾಯಕಿಯರ ಹಾಗೇ ನಾವೂ ಇರಬೇಕು ಅಂತನಿಸುತದೆ. ಆದರೆ, ಇಂದಿನ ಈ ಸಮಾಜದಲ್ಲಿ ನಾವು ಹಾಗೆ ಇರುವದೇ ಸಾಧ್ಯವಿಲ್ಲ. ಒಂದೋ – ನಮ್ಮ ಶೀಲ ಉಳಿಸಿಕೊಂಡು ಈ ಜಗತ್ತನ್ನೇ ಬಿಟ್ಟು ಹೋಗಬೇಕು, ಇಲ್ಲಾಂದರೆ ಈ ಢೋಂಗಿಗಳ ಹಾಗೇ ನಾವೂ ಢೋಂಗಿಗಳಾಗಿ, ಶೀಲ, ಪಾವಿತ್ರ್ಯಗಳಿಗೆ ಬಾಯಿಯ ಬೆಲೆ ಕೊಡುತ್ತಾ ಬದುಕಬೇಕು. ಏನು, ಏನಂತೀ ನೀನು ?"

"ಹೇಳುವದು ಬರಾಬರಿ."

ತೆರೆಯ ಮೇಲೆ ನರ್ತಕಿಯೊಬ್ಬಳು ಸ್ತನಗಳನ್ನು ಹಾರಿಸುತ್ತ ಕುಣಿಯುತ್ತಿದ್ದಳು. ಆ ಕುಣಿತವನ್ನು ಈಕ್ಷಿಸುತ್ತಿದ್ದ ಹಾಗೇ ಸುಶೀಲೆಯೆಂದಳು :

"ಹೀಗೆ ಕುಣಿಯುವದರಲ್ಲಿ ಈ ನರ್ತಕಿಗೆ ಏನು ಸುಖ ಇದ್ದೀತು ಗಿರಿಜಕ್ಕಾ ? ಲೈಬ್ರರಿಯ ಚೇರ್ಮನರಂಥ ದೊಡ್ಡ ಮನುಷ್ಯರು ಇಂಥ ಕುಣಿತಕ್ಕೆ ಅಶ್ಲೀಲ ಅಂತ ಟೀಕೆ ಮಾಡುತಾರೆ, ಇಂಥಾ ಚಿತ್ರ ನೋಡುವದರಿಂದ ಹುಡುಗರು ಕೆಡುವರೆಂತಲೂ ಹೇಳುತಾರೆ. ಇದೇ ನರ್ತಕಿಯೇ ಇವರ ಕೈಯಲ್ಲಿ ಸಿಗುವ ಪ್ರಸಂಗ ಬಂದರೆ ಮಾತ್ರ ಇವರು ಬಿಡುವದಿಲ್ಲ ಅವಳನ್ನ. ಇಂಥಾ ಡಾಂಭಿಕ ಪ್ರಪಂಚದೊಳಗೆ ಶರಚ್ಚಂದ್ರರ ನಾಯಕಿಯರು ಹ್ಯಾಗೆ ಬದುಕಿಯಾರು ಹೇಳು...."

ಸುಶೀಲೆ ಮತ್ತೆ ತಡೆದು, ಉಗುಳು ನುಂಗಿ ಮುಂದುವರಿಸಿದಳು :

"ಶರಚ್ಚಂದ್ರರ ನಾಯಕಿಯ ಹಾಗೇ ಆಗಬೇಕೆಂತ ನಾನೂ ಸಂಕಲ್ಪಿಸಿಕೊಂಡಿದ್ದೆ, ಗಿರಿಜಕ್ಕಾ. ಯೋಗ್ಯ ತರುಣನೊಬ್ಬನನ್ನ ಪ್ರೀತಿಸಿ ನನ್ನದೆಲ್ಲವನ್ನು ಅವನಿಗರ್ಪಿಸಬೇಕೆಂತ ನಿಶ್ಚಯಿಸಿಕೊಂಡಿದ್ದೆ. ನನ್ನ ಆಸೆ, ಬಯಕೆ ಎಲ್ಲಾ ಮಣ್ಣುಪಾಲಾಗಿ ಹೋದವು. ಯೋಗ್ಯವಾದ ತರುಣನೊಬ್ಬನನ್ನು ನಾನು ನೋಡಲಿಲ್ಲ. ಎಲ್ಲರಿಗೂ ನನ್ನ ದೇಹ ಬೇಕು, ಒಂದೆರಡು ಸಲದ ಮಟ್ಟಿಗೆ. ಮದುವೆಯ ಮಾತೆತ್ತಿದರೆ ಮಾತ್ರ, ವರದಕ್ಷಿಣೆಯ ವಿಷಯ ಬಂದದ್ದೇ...."

"ಯಾರನ್ನಾದರೂ ಪ್ರೀತಿಸಿದ್ದಿಯಾ ಸುಶೀಲಾ ?"

"ಪ್ರೀತಿ? ಪ್ರೀತಿ?" ಸುಶೀಲೆ ಕ್ಷೀಣವಾಗಿ ನಕ್ಕು ಹೇಳಿದಳು: "ಇನ್ನೂ ಬುದ್ಧಿ ಬಂದಿರದಾಗ ಯಾರನ್ನೋ ನಾನು ಪ್ರೀತಿಸುತ್ತಿದ್ದೆನೆಂತ ತಿಳಿದಿದ್ದೆ. ಅವನೂ ನನ್ನ ಪ್ರೀತಿಸುತಾನೆ, ನನ್ನನ್ನಲ್ಲದೆ ಇನ್ನಾರನ್ನು ಮದುವೆಯಾಗುವ ದಿಲ್ಲ–ಎಂದೆಲ್ಲಾ ತಿಳಿದಿದ್ದೆ. ಎಂಥ ಮೂರ್ಖರು ನಾವು ಹುಡುಗಿಯರು ಗಿರಿಜಕ್ಕಾ. ಗಂಡಸರ ನಟನೆಗೆ ಸುಲಭವಾಗಿ ಮೋಸಹೋಗುತೀವಿ. ನನ್ನನ್ನ ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುವದಾಗಿ ಕೊಚ್ಚುತ್ತಿದ್ದ ಆ ಮೋಸಗಾರ ಒಂದು ದಿನ ಇನ್ನೊಬ್ಬಳ ಕೈ ಹಿಡಿದು ನನಗೆ ಕೈ ಕೊಟ್ಟುಬಿಟ್ಟ...."

"ಅಂದರೆ?"

"ನನ್ನ ತಂದೆಯಿಂದ ಹಣ ಸಿಕ್ಕುವಂತಿಲ್ಲವೆನ್ನುವದಂತೂ ಗೊತ್ತೇ ಇತ್ತಲ್ಲ ಅವಗೆ! ಒಂದೆರಡುಸಲ ನನ್ನ ಸಹವಾಸ ಸುಖ ಆದರೂ ಹೊಡೆದು ಕೊಳ್ಳುವ ವಿಚಾರ ಇತ್ತು. ನಾನು ಅದಕ್ಕೊಪ್ಪಲಿಲ್ಲ. ಅದೇ ವೇಳೆಗೆ ಶ್ರೀಮಂತ ರೊಬ್ಬರು ಅವನಿಗೆ ಹೆಣ್ಣು ಕೊಡಲು ತಯಾರಾದರು. ರೊಕ್ಕದ ವಾಸನೆ ಬಡಿದ ಕೂಡಲೆ ಅತ್ತ ಓಡಿಬಿಟ್ಟ ಅವನು ಹಂದಿಯ ಹಾಗೆ....ಈಗ ನನಗೆನ್ನಿಸುತದೆ.... ಅವನ ಬಗ್ಗೆ ನನಗೆನ್ನಿಸಿದ್ದು ಪ್ರೀತಿಯೇನೂ ಅಲ್ಲ–ಕ್ಷಣಿಕವಾದ ಆಸೆ. ಹಣ್ಣು ಹಂಪಲು, ಉಂಡೆ ಕಂಡರೆ ಆಸೆಯಾಗುತ್ತದಲ್ಲ–ಹಾಗೇ ಇದೂ...."

ಚಿತ್ರ ಪ್ರದರ್ಶನ ಮುಗಿದು, ಮನೆಗೆ ಹಿಂತಿರುಗುತ್ತಿದ್ದಾಗಲೂ ಸುಶೀಲಾ ಮಾತನಾಡುತ್ತಲೇ ಇದ್ದಳು:

"ಒಂದೊಂದು ಸಲ ನನಗನ್ನಿಸುತದೆ....ಈ ಗಂಡಸರನ್ನೆಲ್ಲಾ ಒಂದು ನಡುಗಡ್ಡೆಯಲ್ಲಿ ಕೂಡಿ ಹಾಕಿ ದೊಡ್ಡದೊಂದು ಬಾಂಬ್ ಒಗೆದು ಇವರನ್ನು ಒಂದೇಟಿಗೇ ತೀರಿಸಿಬಿಡಬೇಕು ಅಂತನಿಸುತದೆ. ಇವರ ಹಾವಳಿಯಲ್ಲಿ ಹೆಣ್ಣು ಬದುಕುವದಕ್ಕೇ ಅಸಾಧ್ಯವಾಯಿತು. ದುಡಿದುಕೊಂಡು ತಿನ್ನುವದಕ್ಕೂ ಬಿಡರು, ಮರ್ಯಾದೆಯಾಗಿ ಬಾಳುವದಕ್ಕೂ ಬಿಡರು. ನಮ್ಮ ಶೀಲವನ್ನ ತಾವೇ ಸೂರೆಗೊಂಡು ಮತ್ತೆ ನಮ್ಮನ್ನೇ ಬಾಯಿಗೆ ಬಂದ ಹಾಗೆ ಹಳಿಯುತ್ತಾರೆ. ನಾವು ವ್ಯಭಿಚಾರಿಣಿಯರು, ಸ್ವೈರಾಚಾರಿಣಿಯರು, ಪಾತರಗಿತ್ತಿಗಳು, ಹಾಗೆ ಹೀಗೆ ಅಂತ. ಈ ನೀಚ ಗಂಡಸರು ನಮ್ಮನ್ನ ಕೆಡಿಸದಿದ್ದರೆ ನಾವು ವ್ಯಭಿ

ಚಾರಿಣಿಯರೇಕಾಗುತಿದ್ದೆವು? ಆ ಲುಚ್ಚಾ ಎ. ಓ! ಅವನ ಮೋರಿಯ ಮ್ಯಾಲ ಉಗುಳಿ, ಚಪ್ಪಲಿಯಿಂದ ಅವನ ಕಪಾಳಿಗೆ ಹೊಡೆದು ಬುದ್ಧಿ ಕಲಿಸಬೇಕು ಅಂತನಿಸುತದೆ. ಹೊಟ್ಟೆಯೊಳಗಿನ ಸಿಟ್ಟು ರಟ್ಟೆಯೊಳಗಿಲ್ಲ. ಸುಮ್ಮನಿರಬೇಕಾಗು ತದೆ. ಏನು ಮಾಡೂದು....ಗಿರಿಜಕ್ಕಾ, ಏನು ಮಾಡೂದು?"

ಸುಶೀಲೆಯ ಭಾವ ಪರವಶತೆಯನ್ನು ಕಂಡು ನನಗೆ ಹೇಗೆ ಹೇಗೋ ಅನ್ನಿಸಿತು. ಅವಳೆಂದೂ ಅಷ್ಟೊಂದು ಮಾತಾಡಿದವಳಲ್ಲ. ಅವಳ ಬಗೆಗೆ ನಾನು ಅದುವರೆಗೂ ತಿಳಿದುಕೊಂಡುದುದೆಲ್ಲವೂ ತಪ್ಪೆಂದೇ ತೋರತೊಡಗಿತು. ಮೇಲೆ ಮೇಲೆ ಪಾತರಗಿತ್ತಿಯಂತೆ ಕಾಣುತ್ತಿದ್ದ ಸುಶೀಲೆಯ ಅಂತರಂಗದಲ್ಲಿ ಇಂಥ ವಿಚಾರಗಳು ಅವಿತಿರಬಹುದೆಂದು ನನಗೆಲ್ಲಿ ತಿಳಿದಿತ್ತು?

"ಎಂಟು ಹತ್ತು ದಿನಗಳ ತರುವಾಯ ಅವಳೇ ನನ್ನನ್ನು ಹುಡುಕಿಕೊಂಡು ಮನೆಗೆ ಬಂದಳು. ಅವಳ ಮುಖದ ಮೇಲೆ ವಿಚಿತ್ರವಾದ ಕಳೆ ಕಾಣುತ್ತಿತ್ತು.

"ಬಾ ಸುಶೀಲಾ, ಕೂಡು. ಯಾಕೆ, ಮೈಯಲ್ಲಿ ನೆಟ್ಟಗಿಲ್ಲೇನು?"

"ಏನೂ ಧಾಡಿಯಾಗಿಲ್ಲ. ಆಗಿದ್ದರೂ ಚಿಂತೆಯಿರಲಿಲ್ಲ."

ಒಂದು ನಿಮಿಷ ಬಿಟ್ಟು ಅವಳು ಹೇಳಿದಳು:

"ನನಗೆ ನೌಕರಿ ಸಿಕ್ಕಿತು ಗಿರಿಜಕ್ಕಾ—"

"ಹೌದೇನು? ಚಲೋ ಆಯಿತಲ್ಲ ಹಾಗಾದರೆ! ನೌಕರಿ ಸಿಕ್ಕಿತಂತ ಸಂತೋಷದಿಂದ ನಗುನಗುತಾ ಇರೂದು ಬಿಟ್ಟು ಹೀಗ್ಯಾಕೆ ಮೋರಿ ಒಣಗಿಸಿ ಕೊಂಡಿದ್ದೀ?"

ಸುಶೀಲೆ ಒಡನೆಯೆ ಮಾತಾಡಲಿಲ್ಲ. ವಿಮಲೆಯನ್ನು ಕೈಗೆತ್ತಿಕೊಂಡು ತೊಡೆಯಮೇಲೆ ಕೂಡಿಸಿಕೊಂಡು, ಮಗುವಿನ ತಲೆಗೂದಲನ್ನು ತೀಡುತ್ತಾ ನಿಧಾನವಾಗಿ ಹೇಳಿದಳು:

"ನೌಕರಿ ಅಂದರೆ ಕಾಯಂ ನೌಕರಿಯಲ್ಲ ಗಿರಿಜಕ್ಕಾ. ಎರಡು ತಿಂಗಳ ಟೆಂಪರರಿ ನೌಕರಿ ಅಷ್ಟೆ."

"ಮುಂದೆ ಮತ್ತೆ ಸಿಗಬಹುದಲ್ಲ?"

"ಸಿಗುವದೂ ಬಿಡುವದೂ ಎ. ಓ. ಸಾಹೇಬರ ಮರ್ಜಿಯ ಮಾತು."

ನನಗೆ ಎಲ್ಲವೂ ಅರ್ಥವಾಯಿತು.

"ಹೀಗೇನು ! ಅಂತೂ ಆ ಸಾಹೇಬನೇ ಗೆದ್ದ ಅನ್ನು."

"ಈ ಕಾಲದಲ್ಲಿ ಹೆಂಗಸರಾದ ನಾವು ಗೆಲ್ಲುವದು ಸಾಧ್ಯವಿಲ್ಲ ಅಂತ ಆವೊತ್ತೇ ಹೇಳಿದ್ದೆನಲ್ಲ ನಿನಗೆ ಗಿರಿಜಕ್ಕಾ ?"

"ಹೋಗಲಿ ಬಿಡೇ. ಇದನ್ನೇನು ಮನಸಿಗೆ ಹಚ್ಚಿಕೋಬ್ಯಾಡ. ಇಂಥಾದ್ದು ಎಷ್ಟೋ ನಡೀತದೆ ಪ್ರಪಂಚದಾಗ. ಇದಕ್ಕೇನು ಮಹತ್ವ ಉಳಿದಿಲ್ಲ," ಎಂದು ಹೇಳಿ ಅವಳನ್ನು ಸಂತೈಸಲು ಯತ್ನಿಸಿದೆ.

ನನ್ನ ಸಾಂತ್ವನಪರ ನುಡಿಗಳ ಆವಶ್ಯಕತೆಯೇ ಇದ್ದ ಹಾಗಿರಲಿಲ್ಲ. ಸುಶೀಲೆ ವ್ಯಂಗ್ಯವಾಗಿ ನಗುತ್ತಾ ಹೇಳಿದಳು :

"ನಿಜ. ಇದಕ್ಕೇನೂ ಮಹತ್ವವುಳಿದಿಲ್ಲ."

ಇದ್ದಕ್ಕಿದ್ದ ಹಾಗೇ ಅವಳು ಹಾಗೆ ನಗಲು ಕಾರಣವೇನೆಂಬುದು ನನಗೆ ತಿಳಿಯಲಿಲ್ಲ. ನನ್ನನ್ನುದ್ದೇಶಿಯೇ ಇದ್ದಿತೇನೋ ಆ ಅಣಕ ?

"ನೌಕರಿ ಕಾಯಂ ಮಾಡುವದಕ್ಕೆ ಇನ್ನೊಂದು ಕರಾರು ಹಾಕಿದ್ದಾನೆ ಎ. ಓ.," ಎಂದಳಾಕೆ.

"ಇನ್ನೊಂದು ಕರಾರು ? ಏನು ?"

"ಅವೊತ್ತು ನನ್ನ ಸಂಗಡ ನೀನು ಸಿನಿಮಾಕ್ಕೆ ಬಂದದ್ದೇ ತಪ್ಪಾಯಿತೇನೊ. ನಿನ್ನ ನೋಡಿದಂದಿನಿಂದ ನಿನಗಾಗಿ ಹುಚ್ಚನಂತಾಗಿದಾನೆ ಆತ," ಎಂದು ಹೇಳಿ ಅವಳು ಮತ್ತೆ ನಕ್ಕಳು.

ನನಗೂ ನಗುವುಕ್ಕಿ ಬಂತು. ಅದೆಂಥ ನಗೆ? ಸಂತೋಷದ ನಗೆಯೇ? ಅಣಕದ ನಗೆಯೆ ? ಹೇಳಲಾರೆ. ಅವನು ಹುಚ್ಚನಾಗಬಹುದೆಂದು ನನಗಾಗಲೇ ಅನ್ನಿಸಿತ್ತು. ಸೀರೆಯ ಸೆರಗು ನೋಡುತ್ತಲೂ ಕರಗಿಹೋಗುವ ಗಂಡುಗಳು ಅವು !

ಸುಶೀಲೆ ಮುಂದುವರಿಸಿದಳು :

"ನನಗೂ ನಿನಗೂ ಬಹಳ ಗೆಳೆತನ ಅಂತ ಗೊತ್ತಾಗುತ್ತಲೂ ಏನಾದರೂ ಮಾಡಿ ನಿನ್ನನ್ನ ದೊರಕಿಸಿಕೊಡಬೇಕಂತ ಗಂಟು ಬಿದ್ದಿದಾನೆ. ಈ ಕೆಲಸ ಸಾಧಿಸಿಕೊಟ್ಟರೆ ನನ್ನ ನೌಕರಿ ಕಾಯಂ ಮಾಡುವನಂತೆ."

ಒಂದೆರಡು ಗಳಿಗೆ ಯೋಚಿಸುತ್ತಿದ್ದು ಅನಂತರ ನಾನು ಹೇಳಿದೆ;

" ನೋಡು ಸುಶೀಲಾ. ಹೆಣ್ಣನ್ನ, ಅದರಲ್ಲೂ ನನ್ನಂಥವಳನ್ನೂ ಗಂಡಸರು ಆಸೆಮಾಡುವದು ಸಹಜ. ನಿನಗೇನೋ ನೌಕರಿ ಬೇಕಾಗಿತ್ತು ಅಂತ ಅವನವ ಳಾದೆ. ಅದೊಂದು ರೀತಿಯ ವ್ಯಾಪಾರ ಆದರೆ, ಅವನಿಂದ ನನಗಾಗ ಬೇಕಾದ್ದೇನೂ ಇಲ್ಲ. ಅಂದಮ್ಯಾಲ ಅವನ್ಯಾತಕ್ಕೆ ಬೇಕು ನನಗೆ? ಅದೊಂದು ಹುಚ್ಚ ಮುಂಡೇಗಂಡ ಅಂತ ಕಾಣುತದೆ. ನಿನ್ನ ನೌಕರಿಯನ್ನು ಕಾಯಂ ಮಾಡುವದಲ್ಲದೆ ನನಗೇನು ಕೊಟ್ಟಾನು ಅವ?"

ನನ್ನ ಮಾತಿನಿಂದಾಗಿ ಸುಶೀಲೆಗೆ ಸ್ವಲ್ಪವೂ ಆಶ್ಚರ್ಯವಾಗಲಿಲ್ಲ. ನಾನು ಅಂಥ ಮಾತು ಆಡಬಹುದೆಂದು ಅವಳು ನಿರೀಕ್ಷಿಸಿಯೇ ಇದ್ದ ಹಾಗಿತ್ತು. ಶಾಂತವಾದ ಸ್ವರದಲ್ಲಿಯೇ ಹೇಳಿದಳು:

" ನೀನು ಬೇಡಿದಷ್ಟು ಹಣ ಕೊಡುತಾನಂತೆ."

" ಬೇಡಿದಷ್ಟು ಹಣ? ಅವನ ತಲೆ ಕೊಟ್ಟಾನು, ತಲೆ! ನಿಮ್ಮಂಥ ಬಡವರನ್ನ ಮಾಸ್ತರತಿಯರ ನೌಕರಿಗೆ ನೇಮಿಸುವಾಗ ಆಗಲಿ, ನಿಮಗೆ ಬೇಡಾದ ಊರುಗಳಿಗೆ ವರ್ಗಾಯಿಸಿ ಅದನ್ನು ರದ್ದುಮಾಡುವಾಗ ಆಗಲಿ ನಿಮ್ಮ ಇಪ್ಪತ್ತೈದೋ ಐವತ್ತೋ ರೂಪಾಯಿ ಕಸಿದುಕೊಂಡು ನಿಮ್ಮ ಶೀಲವನ್ನು ಕೆಡಿಸುವ ಆ ಮೂಳ ನನ್ನ ಬೆಲೆ ಎಷ್ಟೆಂತ ತಿಳಿದಾನೆ? ನೂರೋ ಇನ್ನೂರೋ ಅಂತ ತಿಳಿಧಿದ್ದಾನು. ಅವನ ಕಿಮ್ಮತ್ತೇ ಅಷ್ಟು. ಕೇಳು ಸುಶೀಲಾ, ಅವ ನನಗೆ ಐದು ಸಾವಿರ ರೂಪಾಯಿ ಕೊಡಬಹುದೋ ಹ್ಯಾಗೆ, ಕೇಳು. ಅವನ ತಾಕತ್ತು ಎಷ್ಟದೆಯೋ ನೋಡೋಣ. ಊರೊಳಗಿನ ಹೆಣ್ಣುಗಳೆಲ್ಲಾ ಇವಗೆ ಬೇಕು. ನೌಕರಿಗಳನ್ನೂ ದುಡ್ಡನ್ನೂ ಕೊಡುವ ಆಸೆ ತೋರಿಸಿ ತಾನೂ ಕೃಷ್ಣನ ಮೊಮ್ಮಗನಾಗಬೇಕಂತ ಮಾಡಿದಾನೆ. ಸುಶೀಲಾ, ನೀನೇನೋ ಹಾಳಾದೆ. ಬ್ಯಾರೆಯವರನ್ನೂ ಆ ಬದ್ಮಾಷಗೆ ಬಲಿಕೊಡಬ್ಯಾಡ. ನನ್ನ ಮಾತು ಬ್ಯಾರೆ. ನನಗೆ ಗಂಡನಿದಾನೆ. ನಾನೇನೋ ಯಾರಿಗೂ ಗೊತ್ತಾಗದಂತೆ ಅವನೊಡನೆ ಮಲಗಬಹುದು. ನಿನ್ನಂಥ ಬೆಳೆದು ನಿಂತ, ಮದುವೆಯಾಗದ ಹುಡುಗಿಯರು ಅವನ ಸಹವಾಸದಿಂದ ಬಸಿರಾದರೆ ಏನು ಮಾಡ್ತೀರಿ? ಆಮ್ಯಾಲ ಬಸಿರು

ಕಳಕೊಳ್ಳುವ ಕೆಲಸ. ಅದೇನು ಸಾಧಾರಣ ಮಾತೇ! ಕೂಸು ನೀವು ಕೂಡೇ ಸತ್ತುಹೋಗಬಹುದು. ಈಗ ಆದದ್ದಾಯಿತು, ಮೊದಲು ಏನಾದರೂ ಮಾಡಿ ಮದುವೆಯಾಗಿಬಿಡು. ಹೆಸರಿಗೊಬ್ಬ ಗಂಡನಿದ್ದರೆ ನೀನು ಏನು ಮಾಡಿದರೂ ನಡೆದೀತು. ತಪ್ಪು ತಿಳೀಬ್ಯಾಡವ್ವ. ನೀ ನನ್ನ ತಂಗಿಯಿದ್ದ ಹಾಗೆ."

"ನಾನ್ಯಾಕೆ ತಪ್ಪು ತಿಳಿಯಲಿ ಗಿರಿಜಕ್ಕಾ? ನೀನು ಹೇಳುವದೆಲ್ಲಾ ಬರಾಬರಿ. ನಮ್ಮ ಸಾಲೆಯೊಳಗೇ ಗೌರವ್ವ ಅಂತ ಒಬ್ಬ ಮಾಸ್ತರತಿಯಿದಾಳೆ· ಅವಳ ತಾಯಿಯೂ ಮಾಸ್ತರತಿಯೇ. ಒಳ್ಳೆಯವರೇ. ಗೌರವ್ವ ಹರೆಯಕ್ಕೆ ಬಂದಾಗ ಕಲಿತ ತರುಣನೊಬ್ಬನಿಗೆ ಕೊಟ್ಟು ಮದುವೆಮಾಡಿದರು. ಅವಳ ದುರ್ದೈವ. ಪ್ಲೇಗಿನಲ್ಲಿ ಅವ ಸತ್ತು ಹೋದ. ಇವಳಿನ್ನೂ ಗಂಡನಮನೆಗೂ ಹೋಗಿರಲಿಲ್ಲ. ವಿಧವೆಯಾದ ಬಳಿಕ ಮತ್ತೆ ಸಾಲೆಗೆ ಹೋಗಿ ಪರೀಕ್ಷೆ ಪಾಸಾಗಿ ನೌಕರಿಗೆ ಅರ್ಜಿ ಹಾಕಿದಳು. ಮೊದಲನೇ ವರ್ಗದಲ್ಲಿ ಪಾಸಾಗಿದ್ದ ಅವಳಿಗೆ ನೌಕರಿ ಕೊಡದೆ ಗತಿಯಿರಲಿಲ್ಲ. ಆದರೆ, ಈ ಸಾಹೇಬರ ಬುದ್ಧಿಯೇನು ಸಣ್ಣದಲ್ಲ. ಅವಳಿಗಿನ್ನೂ ವಯಸ್ಸಾಗಿಲ್ಲ ಅಂತ ನೆಪ ಹೇಳಿದರು. ಗೌರವ್ವ ಮನೆಯಲ್ಲೇ ಉಳಿದಳು. ಬೆಳೆದು ಚಂದಾಗಿ ಕಾಣುವ ಹುಡುಗಿ ಓಣಿಯಲ್ಲಿದ್ದರೆ ಎಲ್ಲರ ಕಣ್ಣು ಅವಳ ಮ್ಯಾಲೇ ಬೀಳುತ್ತವೆ, ಹೌದಲ್ಲೋ? ಸಾಹೇಬರು ಅವಳನ್ನು ಬಲೆಗೆ ಹಾಕುವ ಹೊಂಚು ಹಾಕುತ್ತಲೇ ಇದ್ದರು. ಇಲ್ಲೇ ಒಬ್ಬ ಹರಿಜನ ಮಾಸ್ತರತಿಯಿದಾಳೆ. ಅವಳನ್ನ ಬಸವಿಯಾಗಿ ಬಿಟ್ಟಾರಂತೆ. ನಮ್ಮ ಸಾಹೇಬರ ಬಲಗೈ ಹಾಗಿದಾಳೆ ಅವಳು. ಅವಳ ಮೂಲಕ ಸೂಚನೆ ಕೊಟ್ಟು ಗೌರವ್ವನ ವಯಸ್ಸು ಸಾಲೆಯೊಳಗೆ ತಪ್ಪಾಗಿ ಬಿದ್ದಿತ್ತೆಂದು ಕೋರ್ಟಿನೊಳಗೆ ಅಫಿಡೆವಿಟ್ ಕೊಡಿಸಿ ನೌಕರಿಗೆ ಸರಿಹೋಗುವಂತೆ ಮಾಡಿದರು. ಗೌರವ್ವ ಸಾಹೇಬರ ದರ್ಶನ ಪಡೆದ ಬಳಿಕ ಅವಳಿಗೆ ನೌಕರಿ ಸಿಕ್ಕಿತು. ಆರೇಳು ತಿಂಗಳು ಚೆಲ್ಲಾಟ ನಡಸಿದಮ್ಯಾಲ ಹೊಟ್ಟೆ ಮುಂದೆ ಬಂತು. ಎಂಟು ಹತ್ತು ದಿನ ರಜಾ ತಗೊಂಡು ಮನೆಯಲ್ಲಿ ಕೂತು ಗರ್ಭ ಇಳಿದಮ್ಯಾಲ ಹೊರಗೆ ಹಂದಳು. 'ಎಮ್ಮೆ ಕಂದಾ ಹಾಕಿತು' ಅಂತ ಆಡಿಕೊಂಡು ನಕ್ಕರು ಓಣಿಯ ಮಂದಿ. ಪಾಪ! ನಿಂಬೇಹಣ್ಣಿನಂಥಾ ಬಣ್ಣದ ಹುಡುಗಿಯ ಕಳೆಯೆಲ್ಲಾ

ಇಳಿದುಹೋಗಿತ್ತು. ಅವಳ ತಾಯಿಗೂ ಅವಳಿಗೂ ಜಗಳ ಆಗಿ ಈಗ ಗೌರವ್ವ ಬ್ಯಾರೆ ಮನೆ ಮಾಡಿಕೊಂಡು ಇದಾಳೆ."

"ಮದುವೆ ಆಯಿತೋ ಇಲ್ಲೋ?"

"ಊರಿಗೆಲ್ಲಾ ಅವಳ ಕಥೆ ತಿಳಿದಮ್ಯಾಲ ಅವಳನ್ನ ಮದುವೆಯಾಗುವವರಾದರೂ ಯಾರು ಗಿರಿಜಕ್ಕಾ? ಆ ಹರಿಜನ ಮಾಸ್ತರತಿಯೇ ಒಬ್ಬ ವ್ಯಾಪಾರಿಯನ್ನ ಗಂಟುಹಾಕಿದಾಳೆ ಗೌರವ್ವಗೆ."

"ಎಲ್ಲರಿಗೂ ಇಂಥಾ ಗತಿ ಬರಬಾರದು ಸುಶೀಲಾ."

"ನಾನೂ ಇನ್ನು ಮ್ಯಾಲ ಆ ಸಾಹೇಬನಿಂದ ದೂರವೇ ಇರುತೀನಿ. ಆದರೆ ಅವ ನನ್ನ ಹಾಗೇ ಬಿಡಲಿಕ್ಕಿಲ್ಲ. ಈಗ ಎರಡುತಿಂಗಳ ಕೆಲಸ ಸಿಕ್ಕಿದೆ. ಆಮ್ಯಾಲ ಮತ್ತೆ ಅವ ನನ್ನ ಕಾಡಿಸುವವನೇ. ನಿನ್ನನ್ನೂ ತಂದು ಕೊಡು ಅಂತ ಕಾಡಿಸುತಾ ಇದಾನೆ."

"ಇರಲಿರಲಿ. ನೋಡಿಕೊಳ್ಳೋಣ. ನೀನೇನೂ ಅಂಜಬ್ಯಾಡ ಸುಶೀಲಾ. ಹ್ಯಾಗೂ ಕಾಲು ಜಾರಿದ್ದೀ. ಈಗ ನಿನಗೆ ಎರಡು ತಿಂಗಳ ಕೆಲಸ ಕೊಟ್ಟದಾನೆ. ಅದಕ್ಕಾಗಿ ನಿನ್ನ ಸಹವಾಸ. ಮುಂದೆ ನಿನಗೆ ಕಾಯಂ ಕೆಲಸ ಕೊಟ್ಟರೆ ಮೊದಲು ನನ್ನ ಸಹವಾಸ. ಆಮ್ಯಾಲ ನಿನ್ನ ಸುಂದರ ಗೆಳತಿಯರು. ನಿನ್ನ ತಾಯಿ ಹರಯದಾಕೆ ಇದ್ದರೆ ಅವಳನ್ನೂ ಬೇಡುತ್ತಿದ್ದನೋ ಏನೋ. ನಿನ್ನ ಅಕ್ಕತಂಗಿ, ತಮ್ಮಂದಿರ ಹೆಂಡರು ಯಾರಾದರೂ ಬೇಕು ಅವನಿಗೆ ಅಲ್ಲೇನು? ನೀನು ಅವರನ್ನು ಒಯ್ದು ಕೊಡದಿದ್ದರೆ ನಿನ್ನ ನೌಕರಿ ಉಳಿಯುವ ಹಾಗಿಲ್ಲ. ಪುಣ್ಯಕ್ಕೆ ಅವನಲ್ಲೇ ಎಲ್ಲಾ ಅಧಿಕಾರ ಇದಾವೆ. ಒಂದೊಂದು ಅಧಿಕಾರ ಒಬ್ಬೊಬ್ಬ ಸಾಹೇಬನಿಗಿದ್ದಿದ್ದರೆ ಅವರೆಲ್ಲಾ ಕೂಡಿ ನಿನ್ನ ಶರೀರವನ್ನ ಹದ್ದುಕಾಗೆಗಳ ಹಾಗೆ ಹರಿದು ತಿನ್ನುತ್ತಿದ್ದರು."

"ನನ್ನನ್ನೊಬ್ಬಳನ್ನೇ ಅಲ್ಲ ಗಿರಿಜಕ್ಕಾ. ನನ್ನ ಗೆಳತಿಯರನ್ನ, ನನ್ನ ಸಂಬಂಧಿಕರನ್ನ...."

"ಹೌದೌದು. ಹಾಗೇ ಆಗುತ್ತಿತ್ತು. ಮಾಸ್ತರತಿಯರನ್ನೆಲ್ಲಾ ದುರ್ಯೋಧನ ದುಶ್ಶಾಸನರ ಹಾಗೆ ಕಾಡಿಸುವ ಈ ಗಂಡಸರ ಬದಲು ಹೆಂಗಸ

ರನ್ನೇ ನಿಮ್ಮ ಮೇಲಾಧಿಕಾರಿಗಳನ್ನಾಗಿ ನೇಮಿಸುವವರೆಗೂ ಈ ಫಜೀತಿ ತಪ್ಪುವಂತಿಲ್ಲ. ವಿದ್ಯಾಖಾತೆಯ ಮಂತ್ರಿ ಕೂಡಾ ಹೆಂಗಸೇ ಇರಬೇಕು."

"ಆ ಕಾಲ ಯಾವಾಗ ಬರುತದೋ!"

"ಬಂದೀತು. ಅದೂ ಬಂದೀತು. ಸಮಾಧಾನವಿರಲಿ ಸುಶೀಲಾ. ಈ ಸಾಹೇಬರೆಲ್ಲರ ಪಾಪದ ಕೊಡ ತುಂಬುತ್ತಾ ಬಂದದೆ. ಇಂಥಾ ಅಧಿಕಾರಿಗಳಿದಾರೆ ಎಂದು ಎಲ್ಲರಿಗೂ ಗೊತ್ತಾಗಿದೆ. ಈಗೇನೋ ಜನ ಸುಮ್ಮನಿದಾರೆ. ಹೀಗೇ ಎಷ್ಟು ದಿನ ಸುಮ್ಮನಿರಲಿಕ್ಕಾದೀತು? ಇರಲಿ. ನಿನ್ನ ಸಾಹೇಬ ನನ್ನ ತಂದು ಕೊಡಲಿಕ್ಕೆ ಮತ್ತೆ ಕೇಳಬಹದು. ಅವಗೆ ಹಾಗೇ ಆಸೆ ಹಚ್ಚಿ ಕುಣಿಸುತ್ತಾ ಇರು. ಎರಡು ಮೂರು ತಿಂಗಳ ಮ್ಯಾಲ ನನ್ನ ಗಂಡ ಊರಿಗೆ ಹೋಗಬಹುದು, ಆಗ ನಾನು ಭೆಟ್ಟಿಯಾಗಬಹುದು ಅಂತ ಹೇಳು. ನನಗೆ ಹಣವನ್ನು ಕೊಡಬೇಕಾಗುವದಂತ ಹೇಳಿಡು. ಅಷ್ಟರಲ್ಲಿ ನಿನ್ನ ನೌಕರಿ ಕಾಯಂ ಆಗಲಿ. ನಾನು ಅವನಿಗೆ ಸಿಕ್ಕ ಮ್ಯಾಲೇ ನಿನಗೆ ಕಾಯಂ ಆಗುವದೆಂತ ಅವ ಹಟ ಹಿಡಿದರೆ ನೋಡಿಕೊಳ್ಳೋಣ. ಅವನ ನೀರಾದರೂ ಎಷ್ಟದೆಯೋ ನೋಡುತೀನಂತೆ. ಅವನು ಈ ಊರೇ ಬಿಟ್ಟು ಓಡಿಹೋಗುವಂತೆ ಮಾಡೋಣ."

ನನ್ನ ಮಾತುಗಳನ್ನು ಸುಶೀಲೆ ಎಷ್ಟು ನಂಬಿದಳೋ. ಹದಿನೈದು ದಿನ ಕಳೆದ ಬಳಿಕ ಅವಳು ಹೇಳಿದಳು:

"ಸಾಹೇಬ ತನ್ನ ಹಟ ಬಿಡುವ ಹಾಗೆ ಕಾಣುವದಿಲ್ಲ ಗಿರಿಜಕ್ಕಾ."

"ಏನಂದ?"

"ನಿನ್ನ ಭೆಟ್ಟಿಯಾದ ಮ್ಯಾಲೇ ನನಗೆ ಕಾಯಂ ಮಾಡುವನಂತೆ."

ಸ್ವಲ್ಪ ಹೊತ್ತು ವಿಚಾರಮಾಡಿ ನಾನು ಹೇಳಿದೆ:

"ಅವಗೆ ಹೇಳು – ಅಷ್ಟ್ಯಾಕೆ ಆತುರನಾಗಿದಾನೆ? ಈಗ ನಾನು ಅವನ್ನ ಭೆಟ್ಟಿಯಾಗಲು ಬಂದರೆ ನನ್ನ ಗಂಡಗೆ ಗೊತ್ತಾಗಿ ಕೆಲಸ ಕೆಟ್ಟೀತು. ಅದಕ್ಕೇ ಇನ್ನೆರಡು ತಿಂಗಳು ತಡೀಲಿಕ್ಕೆ ಬೇಕು. ನಾನೊಬ್ಬಳೇ ಯಾಕೆ, ನನ್ನ ಹತ್ತು ಮಂದಿ ಗೆಳತಿಯರೂ ಸಿಗಬಹುದು ಅಂತ ಹೇಳು. ನಿನ್ನ ನೌಕರಿ ಕಾಯಂ ಮಾಡಿದ ಮ್ಯಾಲೇ ಮುಂದಿನ ಮಾತು ಅಂತಲೂ ಹೇಳು."

ಆ ಮಾತಿನಿಂದಾಗಿ ಎ. ಓ. ಥಾದಿಗೆ ಬಂದ. ಅದಕ್ಕೇ ನಾನೆನ್ನುವುದು: ಗಂಡಸರು ಮೂರ್ಖರೂ ಹೌದು, ನಾಚಿಕೆಗೇಡಿಗಳೂ ಹೌದು – ಎಂದು.

ಸುಶೀಲೆಯ ನೌಕರಿ ಕಾಯಂ ಆಯಿತು. ಅದರೊಡನೆಯೇ ಸಾಹೇಬನ ತಗಾದೆಯೂ ಹೆಚ್ಚಿತು. ಸುಶೀಲೆ ಗಾಬರಿಗೊಂಡು ನನ್ನನ್ನು ಪೀಡಿಸತೊಡಗಿದಳು. ಆ ಸಾಹೇಬನ ಜೊತೆಗೆ ಮಲಗಿಕೊಳ್ಳುವ ಬಯಕೆ ನನಗೇನೂ ಇರಲಿಲ್ಲ. ಸುಶೀಲೆಗೆ ಕಲ್ಯಾಣವಾಗಲೆಂದು ಹಾಗೆ ಅವನ ಮೂಗಿಗೆ ತುಪ್ಪ ಹಚ್ಚಿ ಕೂಡಿಸಿದ್ದೆನಷ್ಟೆ. ಐದು ಸಾವಿರ ರೂಪಾಯಿಗಳ ಕರಾರು ಹಾಕಿದ್ದುದೂ ಅದಕ್ಕಾಗಿಯೇ. ಸಾಹೇಬ ಅಷ್ಟು ಹಣ ಕೊಡಲಾರ, ತನ್ನ ನೌಕರಿ ಉಳಿಯಲಾರದು ಎಂದು ಸುಶೀಲೆ ಚಡಪಡಿಸುತ್ತಿದ್ದಳು.

"ಅಂಜಬ್ಯಾಡ ಸುಶೀಲಾ. ಇನ್ನುಮ್ಯಾಲ ನಿನ್ನ ನೌಕರಿಗೆ ಅವನೇನೂ ಮಾಡಲಾರ. ಈಗ ಅವ ನನ್ನ ಉಸಾಬರಿಗೆ ಬಿದ್ದಿದಾನೆ. ನಾನು ಮದುವೆಯಾದ ಹೆಂಗಸು. ಪ್ರಸಂಗ ಬಂದರೆ ಅವನ್ನ ಬಯಲಿಗೆಳೆಯೋಣವಂತೆ. ನೀನು ಸಾಕ್ಷಿ ಹೇಳುವಿಯಂತೆ....ಅವನ ಚಣ್ಣ ಸಡಲಾಗುವಂತೆ ಮಾಡೋಣ," ಎಂದು ಹೇಳಿ ನಾನು ಅವಳನ್ನು ಸಂತೈಸಿದೆ.

ಐದು ಸಾವಿರ ರೂಪಾಯಿ ಕೊಡುವ ಮೊಸಡಿಯೇ ಅದು! ತನ್ನ ಅಧಿಕಾರದ ದುರುಪಯೋಗ ಮಾಡುತ್ತ, ತೊಂದರೆಯಲ್ಲಿರುವ ಬಡ ಹೆಂಗಸರಿಗೆ ನೌಕರಿಯ ಆಸೆ ಹಚ್ಚಿ ಕಾರ್ಯ ಸಾಧಿಸಿಕೊಳ್ಳುವ ಭಂಟನವನು. ಒಬ್ಬಾಕೆಯ ದೇಹ ಅವನಿಗೆ ಬೇಡವಾದರೆ ಅವಳಿಂದ ಹಣವನ್ನಾದರೂ ಕೀಳುವುದು, ಇನ್ನೊಬ್ಬ ಹೆಂಗಸನ್ನಾದರೂ ದೊರಕಿಸುವುದು. ಇಂಥವನು ಐದುಸಾವಿರ ರೂಪಾಯಿ ಕೊಡುವುದಾದರೂ ಹೇಗೆ? ಅವನ ಹತ್ತಿರ ಅಷ್ಟು ಹಣವಾದರೂ ಎಲ್ಲಿಂದ ಬರಬೇಕು?

"ನೀನು ಹೇಳಿದ್ದು ಕೇಳಿ ಸಾಹೇಬ ಬಹಳ ಸಿಟ್ಟಾಗಿದಾನೆ. ಏನು ಮಾಡುತಾನೋ ಏನೊ," ಎಂದು ಹೇಳಿದಳು ಸುಶೀಲೆ.

"ಏನು ಮಾಡುತಾನೋ ಮಾಡಲಿ. ನಾನೂ ಎಲ್ಲದಕ್ಕೂ ತಯಾರಾಗಿದೀನಿ. ಒಂದು ಕೈ ನೋಡೇ ಬಿಡೋಣ," ಎಂದೆ.

ನಾನು ಸಿಗುವುದಿಲ್ಲವೆಂದು ಮನವರಿಕೆಯಾಗುತ್ತಲೂ ಅವನು ನನ್ನ ಮೇಲೆ ಸೇಡು ತೀರಿಸಿಕೊಳ್ಳುವ ಹವ್ಯಾಸಕ್ಕೆ ಬಿದ್ದು, ನಮ್ಮವರು ಲಂಚ ತಿನ್ನುತ್ತಿದ್ದ ಸಂಗತಿಯನ್ನು ನಗರ ಸಭಾಧ್ಯಕ್ಷರಿಗೆ ಹೇಳಿ, ಲಾಭದಾಯಕವಾಗಿದ್ದ ಸುಂಕದ ಕಟ್ಟೆಯಿಂದ ಅವರನ್ನು ಬೇರೆಡೆಗೆ ವರ್ಗಮಾಡಿಸಿದ.

ಒಮ್ಮಿಂದೊಮ್ಮೆಲೆ ವರ್ಗವಾಗಲು ಕಾರಣವೇನೆಂಬುದು ಇವರಿಗೆ ಗೊತ್ತಾಗಲಿಲ್ಲ. ನಾನೂ ಆ ವಿಚಾರವಾಗಿ ಅವರೆದುರಿಗೆ ಮಾತಾಡಲಿಲ್ಲ. ಆ ಸಾಹೇಬನನ್ನು ಫಜೀತಿಮಾಡಿಯೇ ಬಿಡುವುದೆಂದು ನಿರ್ಧರಿಸಿ ಕಾಶಪ್ಪನೆದುರಿಗೆ ಎಲ್ಲ ಸಂಗತಿಯನ್ನು ವಿವರಿಸಿ ಹೇಳಿದೆ.

"ಆ ಸಾಹೇಬಗೆ ಇಷ್ಟು ಸೊಕ್ಕೇನು! ನೀನು ನನಗೆ ಮೊದಲೇ ಯಾಕೆ ಹೇಳಲಿಲ್ಲ?" ಎಂದ ಕಾಶಪ್ಪ. ಸಾಹೇಬ ನನ್ನನ್ನು ಬಲೆಗೆ ಹಾಕಿಕೊಳ್ಳಲು ಯತ್ನಿಸಿದ್ದುದನ್ನು ತಿಳಿದು ಕಾಶಪ್ಪನಿಗೆ ಸಹಜವಾಗಿಯೆ ರೇಗಿಹೋಗಿತ್ತು.

"ಹೇಳುವ ವೇಳೆ ಬಂದಾಗ ಹೇಳಿದರಾಯಿತಂತ ಸುಮ್ಮನಿದ್ದೆ. ಅವಗೆ ಮಂದಿಯ ಕಿಮ್ಮತ್ತೇ ಇದ್ದ ಹಾಗೆ ಕಾಣೂದಿಲ್ಲ. ತೋರಿಸಬೇಕು ಅವಗೆ ಕೈ!"

"ಅಧ್ಯಕ್ಷರಿಗೆ ಹೇಳಿ ರಾಚಪ್ಪಗೆ ಮೊದಲಿನ ಜಾಗಕ್ಕೇ ಹಾಕಿಸುತೀನಿ, ಸುಮ್ಮನಿರು."

"ಅವರಿಗಾದರೂ ಯಾಕೆ ಬಾಯಿತೆಗೆಯೂದು ಮ್ಯಾಲಿಂದ ಮ್ಯಾಲ? ನೀವೇನು ಕಡಮೆ ಇದೀರಿ ಅವರಿಗೆ? ನೀವೇ ಯಾಕೆ ಮುನಿಸಿಪಾಲ್ಟಿ ಅಧ್ಯಕ್ಷ ರಾಗಬಾರದು?" ಎಂದು ನಾನು ಅವನನ್ನು ಪುಸಲಾಯಿಸಿದೆ.

ಹೆಂಗಸರು ಸ್ವಲ್ಪ ಪ್ರಶಂಸಿಸಿದರೆ ಸಾಕು, ಈ ಗಂಡಸರು ಬುಟ್ಟಿಗೆ ಬಿದ್ದು ಬಿಡುತ್ತಾರೆ. ಆಗಲೂ ಹಾಗೆಯೇ ಆಯಿತು.

"ಹೌದೌದು. ನಾನೂ ಯಾಕಾಗಬಾರದು?" ಎಂದ ಕಾಶಪ್ಪ.

ಸರಿ. ಅವನ ತಲೆಯಲ್ಲಿ ಒಂದು ವಿಚಾರ ಹೊಕ್ಕರಾಯಿತು, ಅದರಂತೆ ಕೆಲಸವಾಗುವವರೆಗೂ ವಿರಮಿಸುವವನಲ್ಲ ಕಾಶಪ್ಪ.

"ನಿಮ್ಮ ಹತ್ತರ ದುಡ್ಡಿಗಾದರೂ ಏನು ಕಡಿಮೆ? ನೀವು ಸಹಜ ಆರಿಸಿ ಬರಬಹುದು. ನಾನು ಸುಶೀಲಾ ಇಬ್ಬರೂ ಕೂಡಿ ಹೆಂಗಸರ ವೋಟು ನಿಮಗೇ ಬೀಳುವಂತೆ ಮಾಡುತೀವಿ," ಎಂದು ನಾನು ಅವನನ್ನು ಹುರಿದುಂಬಿಸಿದೆ.

"ಹಾಗಾದರೆ ನಿಂತೇ ಬಿಡುತೀನಿ," ಎಂದ ಕಾಶಪ್ಪ.

## ೨೪

ಕಾಶಪ್ಪ ಚುನಾವಣೆಗೆ ನಿಂತುಕೊಳ್ಳುವ ವಿಚಾರವನ್ನು ಸುಶೀಲೆಯ ಹತ್ತಿರ ಹೇಳಿದಾಗ ಅವಳು ಅರ್ಥಪೂರ್ಣವಾಗಿ ನಕ್ಕು ನುಡಿದಳು :

" ನೀನೇ ಯಾಕೆ ನಿಲ್ಲಬಾರದು ಗಿರಿಜಕ್ಕಾ ?"

ಅವಳ ಇಂಗಿತವೇನೆಂಬುದು ನನಗೆ ಸರಿಯಾಗಿ ಗೊತ್ತಾಗಲಿಲ್ಲ. ಅವಳೇಕೆ ಹಾಗೆ ನಕ್ಕಳು ? ಅದೂ ತಿಳಿಯಲಿಲ್ಲ. ನಗೆ ಬರುವಂಥ ವಿಷಯವಾದರೂ ಏನಿತ್ತು ? ನಾನು ಯೋಚಿಸಿದೆ : ನಿಜ. ನಾನೂ ಯಾಕೆ ನಿಂತುಕೊಳ್ಳಬಾರದು ಚುನಾವಣೆಗೆ ? ಕಾಶಪ್ಪನಿಗಿಂತ ಬುದ್ಧಿಯಲ್ಲಿ ಕಡಮೆಯವಳೇನೂ ಅಲ್ಲ ನಾನು. ನಗರಸಭಾಸದಸ್ಯರೆಲ್ಲರಿಗಿಂತಲೂ ನಾನು ಬುದ್ಧಿವಂತೆ. ಭಾಷಣ ಮಾಡುವ ಅಭ್ಯಾಸವಿಲ್ಲ, ಅಷ್ಟೆ. ಅದೂ ಕೂಡ ಅಂಥ ಮಹತ್ವದ ವಿಷಯವಲ್ಲ – ಸ್ವಲ್ಪ ಕಲಿತುಕೊಂಡರೆ ಬಂದುಬಿಡಬಹುದು. ಓದುವುದನ್ನೂ ಬರೆಯುವುದನ್ನೂ ಇಷ್ಟು ಬೇಗ ಸಾಧಿಸಿದ ನನಗೆ ಸಭೆಯಲ್ಲಿ ಮಾತಾಡುವುದೊಂದು ಕಠಿಣ ಸಮಸ್ಯೆಯಾಗಲಾರದು.

" ಹ್ಯಾಗೂ ಮುನಿಸಿಪಾಲ್ಟಿಯೊಳಗೆ ಹೆಂಗಸರ ಎರಡು ಸೀಟು ಇದಾವೆ. ಒಂದಕ್ಕೆ ನೀನೇ ನಿಂತುಕೊಂಡರೆ ಸುಲಭವಾಗಿ ಆರಿಸಿಬರಬಹುದಲ್ಲ ?" ಎಂದಳು ಸುಶೀಲೆ.

" ಹೌದವ್ವಾ. ನೀನನ್ನುವದೂ ಸರಿ."

" ಈಗ ಮುನಿಸಿಪಾಲ್ಟಿಯೊಳಗ ಇರುವ ಸ್ತ್ರೀ ಸದಸ್ಯರನ್ನ ನಾನೂ ನೋಡಿದೀನಿ. ನೆಟ್ಟಗೆ ನಾಲ್ಕು ಅಕ್ಷರ ಬರೆಯಲಿಕ್ಕೆ ಕೂಡಾ ಬರೂದಿಲ್ಲ

ಅವರಿಗೆ. ಬುದ್ಧಿಯಂತೂ ಏನೇನೂ ಇಲ್ಲ. ಸುಮ್ಮನೆ ಅಲಂಕಾರಕ್ಕಂತ ಹೋಗಿ ಕುರ್ಚಿಯ ಮ್ಯಾಲ ಕೂತು ಬರುತಾರೆ. ಅವರಿಗಿಂತ ನೀನು ಸಾವಿರಪಾಲಿಗೆ ಮೇಲು. ನೀನು ಸದಸ್ಯಳಾದರೆ ಹೆಂಗಸರಿಗೆಲ್ಲಾ ನಿಜವಾಗಿ ಅಭಿಮಾನ ವೆನ್ನಿಸೀತು."

ಅಂದು ಸಂಜೆ ಅವರು ಬರುತ್ತಲೂ ಚುನಾವಣೆಯ ವಿಚಾರವನ್ನೆತ್ತಿ ಎಲ್ಲವನ್ನೂ ವಿವರಿಸಿ ಹೇಳಿದೆ. ನಾನು ಮುಗಿಸುವವರೆಗೂ ಶಾಂತವಾಗಿ ಕೇಳುತ್ತಿದ್ದು ಅನಂತರ ಅವರೆಂದರು :

"ಕಾಶಪ್ಪ ನಿಲ್ಲುವದೇನೋ ಸರಿ. ಅವರ ಹತ್ತಿರ ರೊಕ್ಕ ಅದೆ. ಊರೊಳಗೆ ಹೆಸರೂ ಅದೆ. ಆರಿಸಿ ಬರಬಹುದು. ಆದರೆ, ನೀನು ನಿಲ್ಲುವದು ಮಾತ್ರ...."

"ನಾನು ಆರಿಸಿಬರಲಿಕ್ಕಿಲ್ಲ ಅಂತ ಸಂಶಯ ಏನು ನಿಮಗೆ?"

"ಊ ಹೂಂ. ಹಾಗೇನೂ ಅಲ್ಲ. ಆದರೆ, ನಮ್ಮ ಸ್ಥಿತಿಗತಿಯೇನು ಅನ್ನುವದನ್ನ ನೆನಪಿನಾಗಿಟ್ಟುಕೊಂಡು ನಡಕೋಬೇಕು ಗಿರಿಜಾ. ಕಾಶಪ್ಪ ವ್ಯಾಪಾರಸ್ಥ. ಸಾಹುಕಾರ. ಅವರು ಚುನಾವಣೆಗೆ ನಿಂತರೆ ಚಂದ ಕಾಣ ಬಹುದು. ನಾನೊಬ್ಬ ಸುಂಕದ ಕಟ್ಟೆಯ ಬಡ ಕಾರಕೂನ. ನನ್ನ ಹೆಂಡತಿ ನೀನು. ಈಗ ನೀನು ಚುನಾವಣೆಗೆ ನಿಂತರೆ ಮಂದಿ ನಗದಿರಲಿಕ್ಕಿಲ್ಲ...."

ಆಯಿತು. ಸುಶೀಲೆಯ ಮಾತುಗಳಿಂದ ನನ್ನೆದೆಯಲ್ಲಿ ತುಂಬಿಬಂದಿದ್ದ ಉತ್ಸಾಹವೆಲ್ಲವೂ ಇವರ ಮಾತುಗಳಿಂದ ಮುಸುಳಿಸಿಹೋಯಿತು. ಬಡ ಕಾರಕೂನ....ಅವನ ಹೆಂಡತಿ...ತಿರುಕನ ಮಗಳು....ಮತ್ತೆ ಕೊರೆಯತೊಡಗಿತು ವೇದನೆಯ ಗರಗಸ, ಮನಸ್ಸನ್ನು. ಇವರು ಹೇಳುವುದೂ ನಿಜ. ಜನರು ಖಂಡಿತವಾಗಿಯೂ ನಗುವರು. ಅವರು ನಗುವುದಕ್ಕೆ ಮುಖ್ಯ ಕಾರಣವೆಂದರೆ ನಮ್ಮ ಬಡತನ....

ಅಯ್ಯೋ ಬಡತನವೆ!

ಅಂದು ರಾತ್ರೆ, ಅನಂತರದ ಎಂಟು ಹತ್ತು ದಿನ ನನಗೆ ಊಟವೂ ರುಚಿಸ ಲಿಲ್ಲ. ಬದುಕಿನ ಬಗೆಗೇ ಬೇಸರು ಹುಟ್ಟಿಕೊಂಡ ಹಾಗಾಗಿತ್ತು. ಸುಲೋಚನೆ

ಬಗೆಬಗೆಯ ಪ್ರಶ್ನೆ ಕೇಳುವಳು. ಕುಮಾರ ಎಡೆಬಿಡದೆ ಕಾಡುತ್ತಿದ್ದ, ಎಳೆಯ ಮಗುವಿನ ಕಡೆಗೂ ಲಕ್ಷ್ಯ ಹೊರಳುತ್ತಿರಲಿಲ್ಲ. ಈ ಮನೆ ನನ್ನದಲ್ಲ, ಈ ಮಕ್ಕಳು ನನ್ನ ಮಕ್ಕಳಲ್ಲ, ನಾನು ಈ ಲೋಕದವಳಲ್ಲ – ಎಂದು ಏನೇನೋ ಅನ್ನಿಸುತ್ತಿತ್ತು.

"ಏನು ಗಿರಿಜಕ್ಕಾ, ಏನಾಯ್ತು ನೀನು ನಿಲ್ಲುವದು?" ಎಂದು ಒಂದು ದಿನ ಸುಶೀಲೆ ಕೇಳಿದಾಗ ನಾನು ನಿಟ್ಟುಸಿರು ಬಿಟ್ಟು ಹೇಳಿದೆ:

"ಬಿಡವ್ವಾ. ನಮ್ಮಂಥವರಿಗೆಲ್ಲಾ ಎಲ್ಲಿಯ ಚುನಾವಣೆ? ಯಾರಾದರೂ ನಕ್ಕಾರು."

ಏಕೋ ಏನೋ ತಿಳಿಯದು. ಅವಳೂ ಆ ವಿಷಯ ಬೆಳೆಸಲಿಲ್ಲ.

ಆದರೂ, ನನ್ನ ಮನಸ್ಸಿನಿಂದ ಮಾತ್ರ ತೊಲಗಲಿಲ್ಲ ಆ ವಿಚಾರ.

ನಿಶ್ಚಯಿಸಿದ ಹಾಗೇ ಕಾಶಪ್ಪ ಚುನಾವಣೆಯ ಸಿದ್ಧತೆಗಾರಂಭಿಸಿದ. ರೇಶಿಮೆಯ ಕಳ್ಳ ವ್ಯಾಪಾರದಲ್ಲಿ ಗಳಿಸಿದ ರೂಪಾಯಿಗಳ ಪೈಕಿ ಎಂಟು ಹತ್ತು ಸಾವಿರವನ್ನು ಚುನಾವಣೆಗಾಗಿ ಸೂರೆಮಾಡಲು ಸಿದ್ಧನಾದ. ಹಣವಿದ್ದವರಿಗೆ ಕೆಲಸಗಾರರ ಕೊರತೆಯೂ ಇರುವುದಿಲ್ಲ. ಅವನು ಚುನಾವಣೆಗೆ ನಿಲ್ಲುವ ಸುದ್ದಿ ಹರಡುತ್ತಲೂ ನಿರುದ್ಯೋಗಿಗಳನೇಕರು ತಾವಾಗಿಯೇ ಬಂದು ಅವನ ಹತ್ತಿರ ಸೇರಿದರು. ಪ್ರಚಾರಕಾರ್ಯವೂ ರಭಸದಿಂದ ನಡೆಯತೊಡಗಿತು. ಸುಶೀಲೆಯೂ ನಾನೂ ಕೂಡಿಕೊಂಡು ಮನೆಮನೆಗೆ ಹೋಗಿ ಹೆಂಗಸರಲ್ಲಿ ಪ್ರಚಾರ ಮಾಡಿದೆವು.

ಆಗ ನಗರಸಭಾಧ್ಯಕ್ಷನಾಗಿದ್ದ ಬಸೆಟ್ಟೆಪ್ಪನನ್ನೇ ಎದುರಿಸಿ ನಿಲ್ಲಬೇಕಾಯಿತು ಕಾಶಪ್ಪ. ಬಸೆಟ್ಟೆಪ್ಪನೂ ಸಾಧಾರಣ ವ್ಯಕ್ತಿಯಲ್ಲ. ಹತ್ತಿಪ್ಪತ್ತು ವರ್ಷಗಳವರೆಗೆ ನಗರಸಭಾಸದಸ್ಯನಾಗಿದ್ದು, ಮೂರು ವರ್ಷ ಅಧ್ಯಕ್ಷನೂ ಆಗಿದ್ದು, ಊರಿನಲ್ಲಿ ಪ್ರತಿಷ್ಠೆ ಬೆಳೆಸಿಕೊಂಡವನು, ಓಣಿ ಓಣಿಗಳಲ್ಲಿನ ಮುಖಂಡರನ್ನು ಉಪಾಯಾಂತರಗಳಿಂದ ಕೈಲಿ ಹಿಡಿದುಕೊಂಡವನು, ನಗರಸಭೆಯ ಹಣ ಎತ್ತಿ ಹಾಕಿ ಸಾಕಷ್ಟು ಗಂಟನ್ನೂ ಮಾಡಿಕೊಂಡವನು. ನಮ್ಮ ವಾರ್ಡಿನಿಂದ ಅವಿರೋಧವಾಗಿ ಆರಿಸಿ ಹೋಗಿ ಚುನಾವಣೆಯ ವೆಚ್ಚವನ್ನುಳಿಸಿಕೊಳ್ಳಬೇಕೆಂದು ಅವನು ಯೋಚಿಸಿಕೊಂಡಿದ್ದನಂತೆ. ಕಾಶಪ್ಪ ತನಗೆ ಎದುರಾಳಿಯಾಗಿ

ನಿಲ್ಲಬಹುದೆಂದು ಅವನಿಗೆಂದೂ ಅನ್ನಿಸಿರಲಿಲ್ಲ. ಹಲವರು ಮುಖಂಡರ ಮೂಲಕ ಸಂಧಾನ ನಡಸಿ ಕಾಶಪ್ಪ ತನ್ನ ಉಮೇದುವಾರಿಕೆಯನ್ನು ಹಿಂತೆಗೆದು ಕೊಳ್ಳುವಂತೆ ಮಾಡಲೂ ಯತ್ನಿಸಿದ ಬಸೆಟ್ಟೆಪ್ಪ. ಅರ್ಥಾತ್ ಆ ಯತ್ನ ಫಲಿಸಲಿಲ್ಲ.

"ಹತ್ತಿಪ್ಪತ್ತು ವರ್ಷಗಳ ತನಕ ಮೆಂಬರಾಗಿ ಬೇಕಾದಷ್ಟು ಅಧಿಕಾರ ನಡಸಿದಾನೆ ಬಸೆಟ್ಟೆಪ್ಪ. ಇದೊಂದು ಸಲ ತಾನು ಹಿಂದೆ ಸರಿದು ನನಗೇ ಯಾಕೆ ಚಾನ್ಸ್ ಕೊಡಭಾರದು?" ಎಂದು ವಾದಿಸಿದ ಕಾಶಪ್ಪ.

ನಗರಸಭೆಯ ಸದಸ್ಯತ್ವವೇ ತನ್ನ ಉದ್ಯೋಗವೆಂದು ನಂಬಿದ್ದ ಬಸೆಟ್ಟೆಪ್ಪ ಅದನ್ನು ಬಿಟ್ಟುಕೊಡಲು ಒಪ್ಪುವನೇ?

"ಯಾರು ಕೇಳುತಾರೆ ಈ ಕಾಶಪ್ಪನ್ನ! ಮುನಿಸಿಪಾಲ್ಟಿ ಅಂದರೇನು ಅನ್ನೂದಾದರೂ ಗೊತ್ತದೇನು ಅವಗೆ? ರೇಶಿಮೆಯ ಬ್ಲಾಕ್‌ಮಾರ್ಕೆಟ್ ಮಾಡಿದಷ್ಟು ಸುಲಭ ಅಲ್ಲ ಮುನ್ಸಿಪಾಲ್ಟಿ ಕೆಲಸ. ಇವನ ಮಾರೀ ನೋಡಿ ಯಾರು ಕೊಡುತಾರೆ ವೋಟು!" ಎಂದು ಹೀಯಾಳಿಸಿದ ಬಸೆಟ್ಟೆಪ್ಪ.

ತ್ರಯಸ್ಥರ ಮುಖಾಂತರ ಆ ಮಾತು ಕಾಶಪ್ಪನ ಕಿವಿಗೆ ಬರಲು ವಿಲಂಬ ವಾಗಲಿಲ್ಲ. ಅವನು ವಿಪರೀತವಾಗಿ ಕೆರಳಿ ಹೇಳಿದ:

"ಆ ಮಗ ಮುನ್ಸಿಪಾಲ್ಟಿಗೆ ಹೋಗಿ ಮಾಡಿದ ಕೆಲಸ ಏನು ಅನ್ನೂದು ಊರಿಗೆಲ್ಲಾ ಗೊತ್ತದೆ. ಅವ ಯಾವ್ಯಾವ ಪ್ರಸಂಗದಲ್ಲಿ ಯಾರ್‍ಯಾರಿಂದ ಎಷ್ಟೆಷ್ಟು ರೊಕ್ಕ ತಿಂದಾನ ಅನ್ನೂದನ್ನ ಪಬ್ಲಿಕ್ ಮೀಟಿಂಗಿನಾಗ ಹೇಳುತೀನಿ."

ಆ ಮಾತು ಬಸೆಟ್ಟೆಪ್ಪನ ಕಿವಿಗೆ ಹೋಗುವುದಕ್ಕೂ ವಿಲಂಬವಾಗಲಿಲ್ಲ. ಅವನು ಸ್ವಲ್ಪ ಬೆದರಿಕೊಂಡನಾದರೂ ಅದನ್ನು ವ್ಯಕ್ತಗೊಳಿಸದೆ ಹೇಳಿದ:

"ಸಾಕ್ಷಿ ಪುರಾವೆ ಇಲ್ಲದೆ ಬಾಯಿಗೆ ಬಂದ ಹಾಗೆ ನನ್ನ ಮ್ಯಾಲ ಆರೋಪ ಹೊರಿಸೂದೇನು ಹುಡುಗಾಟ ಅಲ್ಲ. ಮಾನ ಹಾನಿಯ ಖಟ್ಲೆ ಹಾಕಿ ಅವನ್ನ ಫಜೀತಿ ಮಾಡುತೀನಿ."

ಅದಕ್ಕೆ ಕಾಶಪ್ಪನೇನು ಹೇಳಿದನೆಂಬುದು ನನಗೆ ಗೊತ್ತಾಗಲಿಲ್ಲ. ಅಂದಿ ನಿಂದ ಸ್ಪರ್ಧೆ ಬಲು ಬಿರುಸಾಗಿ ಸಾಗಿತು. ಸಭೆ ನಡೆದುವು, ಭಾಷಣಗಳಾದುವು,

ಕೀರ್ತನೆಗಳೂ ನಡೆದುವು. ಹೆಸರಾದ ಕೀರ್ತನಕಾರ ಚೆನ್ನಯ್ಯ ಶಾಸ್ತ್ರಿಯನ್ನು ಕರೆಯಿಸಿಕೊಂಡು, ಬಸೆಟ್ಟೆಪ್ಪನ ಚರಿತ್ರೆಗೆ ಹೋಲುವಂಥ ಹೊಸದೊಂದು ಕೀರ್ತನೆ ತಯಾರುಮಾಡಿಸಿ ಓಣಿ ಓಣಿಗಳಲ್ಲೆಲ್ಲ ಹೇಳಿಸಿ ಗದ್ದಲವೆಬ್ಬಿಸಿದ ಕಾಶಪ್ಪ. ಅದು ಕಾಲ್ಪನಿಕ ಕಥೆಯಾದುದರಿಂದ ಬಸೆಟ್ಟೆಪ್ಪ ಕಾನೂನಿನ ಪ್ರಕಾರ ಕ್ರಮ ತೆಗೆದುಕೊಳ್ಳುವಂತಿರಲಿಲ್ಲ. ಅವನು ಕೈ ಕೈ ಹಿಸುಕಿಕೊಂಡು ಸುಮ್ಮನಾದ.

ಮತದಾರರ ಮನಸ್ಸು ನಿಧಾನವಾಗಿ ಕಾಶಪ್ಪನತ್ತ ಒಲಿಯುತ್ತಿತ್ತು. ನಗರಸಭೆಯ ಹಣವನ್ನು ಬಸೆಟ್ಟೆಪ್ಪ ಎತ್ತಿ ಹಾಕಿದ್ದುದೂ, ಟೆಂಡರುಗಳನ್ನು ಸ್ವೀಕರಿಸಿ ಕಂಟ್ರಾಕ್ಟುಗಳನ್ನು ಕೊಡುವಾಗ ಸಾವಿರಾರು ರೂಪಾಯಿ ಲಂಚ ತಿಂದಿದ್ದುದೂ ಎಲ್ಲರಿಗೂ ತಿಳಿದ ವಿಷಯವೇ ಆಗಿತ್ತು. ಕಾಶಪ್ಪ ವ್ಯಾಪಾರಿ; ದುಡ್ಡಿನ ಕೊರತೆಯೇನೂ ಅವನಿಗಿಲ್ಲವಾದುದರಿಂದ ನಗರಸಭೆಯ ಹಣ ಎತ್ತಿ ಹಾಕುವ ಹೀನ ಕೃತ್ಯ ಅವನಿಂದಾಗದು; ಆದ್ದರಿಂದ, ಬಸೆಟ್ಟೆಪ್ಪನಿಗಿಂತ ಕಾಶಪ್ಪನೇ ಮೇಲು ಎಂದು ಜನ ತೀರ್ಮಾನಿಸಿತು. ಬಸೆಟ್ಟೆಪ್ಪನಿಗೇ ಮತ ಹಾಕುವುದಾಗಿ ಹೇಳಿ ಅವನಿಂದ ಹಣ ತೆಗೆದುಕೊಂಡ ಮತದಾರರೂ ಕೂಡ ಮತದಾನದ ದಿನ ಕಾಶಪ್ಪನಿಗೇ ಮತ ಕೊಟ್ಟುಬಂದರು. ಫಲಿತಾಂಶವೂ ಪ್ರಕಟವಾಗಿ ಕಾಶಪ್ಪ ಪ್ರಚಂಡ ಬಹುಮತದಿಂದ ವಿಜಯಿಯಾದುದು ತಿಳಿಯಿತು. ಅಂದು ಇಡಿಯ ವಾರ್ಡಿಗೆಲ್ಲ ಮಿಠಾಯಿ ಹಂಚಿ ವಿಜಯೋತ್ಸವ ನಡಸಿದ ಕಾಶಪ್ಪ. ಬ್ಯಾಂಡು ಬಜಂತ್ರಿಗಳ ಸಮೇತವಾಗಿ ಅವನ ಮೆರವಣಿಗೆಯೂ ನಡೆಯಿತು.

ಸದಸ್ಯನಾದುದಂತೂ ಆಯಿತು – ಇನ್ನು ಮುಂದಿನ ಕೆಲಸ – ಅಧ್ಯಕ್ಷ ಸ್ಥಾನ ದೊರಕಿಸುವುದು. ಅದೂ ಸಹ ಅಷ್ಟು ದುಸ್ತರವಾದುದೇನೂ ಆಗಿರಲಿಲ್ಲ. ಸದಸ್ಯರಲ್ಲಿ ಹೆಚ್ಚು ಮಂದಿ ಕಾಶಪ್ಪನ ಜಾತಿಯವರೇ – ಅಂದರೆ ಲಿಂಗವಂತರೇ – ಇದ್ದರು. ಕೆಲವರಿಗೆ ಜಾತಿಯ ಅಭಿಮಾನವನ್ನು ಇನ್ನು ಕೆಲವರಿಗೆ ಹಣದ ಆಮಿಷವನ್ನು ತೋರಿಸಿ ಅವರನ್ನು ತನ್ನ ಕಡೆಗೆ ಒಲಿಸಿಕೊಳ್ಳುವುದು ಅಷ್ಟು ಕಷ್ಟದ ಕೆಲಸವೇನೂ ಆಗಲಿಲ್ಲ ಕಾಶಪ್ಪನಿಗೆ. ಸರಿ. ನಗರಸಭಾಧ್ಯಕ್ಷರ ಕುರ್ಚಿ

ಯನ್ನೂ ಕೈವಶಪಡಿಸಿಕೊಂಡ ಕಾಶಪ್ಪ. ನಗರದಲ್ಲಿ ಅನೇಕರಿಗೆ ಅದೊಂದು ಕೌತುಕದ ವಿಷಯವಾಗಿ ಪರಿಣಮಿಸಿತು. ಮೊತ್ತ ಮೊದಲನೆಯ ಬಾರಿ ಸದಸ್ಯನಾದವನು ಅಧ್ಯಕ್ಷನೂ ಆಗುವುದೆಂದರೆ ಸಾಧಾರಣ ಸಂಗತಿಯೇ? ಅಂತೂ ಚುನಾವಣೆಯ ಕೋಲಾಹಲ ಕೊನೆಗೊಮ್ಮೆ ನಿಂತುಹೋಯಿತು.

ಅಧ್ಯಕ್ಷಪದದ ಅಧಿಕಾರ ಸ್ವೀಕರಿಸಿದ ಬಳಿಕ ಕಾಶಪ್ಪ ಮಾಡಿದ ಮೊತ್ತ ಮೊದಲನೆಯ ಕೆಲಸವೆಂದರೆ ಆ ಎ. ಓ. ಸಾಹೇಬನನ್ನು ಕರೆಯಿಸಿದುದು. ತನಗೆ ಏನೋ ಕಾದಿದೆಯೆಂದು ಭಾವಿಸಿದ ಸಾಹೇಬ ಅಂಜುತ್ತಂಜುತ್ತಲೇ ಬಂದನಂತೆ. ಆಗ ನಡೆದುದನ್ನು ಅಂದು ಸಾಯಂಕಾಲ ನನ್ನೆದುರಿಗೆ ನಗು ನಗುತ್ತಾ ವಿವರಿಸಿ ಹೇಳಿದ ಕಾಶಪ್ಪ.

"ನನ್ನ ಆಫೀಸಿನಲ್ಲಿ ಅವನು ಬಂದಾಗ ಅವನ ಮೋರೆಯ ಮ್ಯಾಲಿನ ಕಳೆಯೇ ಇಳಿದುಹೋಗಿತ್ತು. ನಾನು ಅವನನ್ನೇ ದಿಟ್ಟಿಸುತ್ತಾ ಇದ್ದೆ. ಕೂತುಕೋ ಅಂತಲೂ ಹೇಳಲಿಲ್ಲ ಸಾಹೇಬ ನಿಂತುಕೊಂಡೇ ಇದ್ದ.

"'ನಿಮ್ಮ ಬಗ್ಗೆ ಬಹಳ ತಕರಾರು ಬಂದಿದಾವೆ ನಮ್ಮ ಕಡೆಗೆ' ಅಂತ ಹೇಳುತ್ತಲೂ ಅವನು ಇನ್ನಷ್ಟೂ ಹೆದರಿದ.

"'ಸ್ಕೂಲ್ ಬೋರ್ಡಿನ ಕಾರಭಾರ ನೋಡಿಕೊಳ್ಳಲಿಕ್ಕಂತ ನಿಮ್ಮನ್ನು ನೇಮಿಸಿದಾರೆ. ಶಿಕ್ಷಕ ಶಿಕ್ಷಕಿಯರಿಗೆಲ್ಲಾ ನೀವು ಮೇಲಾಧಿಕಾರಿ. ಅವರನ್ನೆಲ್ಲಾ ನಿಮ್ಮ ಮಕ್ಕಳಂತೆ ನೋಡಿಕೊಳ್ಳಬೇಕೋ ಬ್ಯಾಡವೋ?' ಅಂದೆ.

"'ಹೌದು ಸ್ವಾಮಿ' ಅಂದನಾತ.

"'ತಂದೆಯ ಹಾಗೆ ಇರಬೇಕಾದ ನೀವು ನಿಜವಾಗಿ ಇರೂದು ಯಾರ ಹ್ಯಾಗೆ? ಶಿಕ್ಷಕಿಯರ ಬಡತನದ ದುರುಪಯೋಗ ಮಾಡಿಕೊಂಡು ಎಂಥೆಂಥಾ ಹೊಲಸು ಕೆಲಸ ನಡಸಿದ್ದೀರಿ!'

"'ನಿಮಗೆ ಯಾರೋ ತಪ್ಪು ಕಲ್ಪನೆ ಮಾಡಿಕೊಟ್ಟಿರಬೇಕು ನನ್ನ ಬಗ್ಗೆ.'

"'ತಪ್ಪು ಕಲ್ಪನೆಯೇನೂ ಇಲ್ಲ. ನಿಮ್ಮಿಂದ ತೊಂದರೆಪಟ್ಟುಕೊಂಡವರಿಂದಲೇ ನನಗೆಲ್ಲಾ ಗೊತ್ತಾದದ್ದು. ಅವರನ್ನ ಬೇಕಾದರೆ ನಿಮ್ಮೆದುರಿಗೇ ಕರೆಯಿಸುತೀನಿ.'

"ಎ. ಓ. ತಣ್ಣಗಾದ. ತಲೆ ತಗ್ಗಿಸಿಕೊಂಡು ನಿಂತುಕೊಂಡಿದ್ದವನು ಹಾಗೇ ನಿಂತೇ ಇದ್ದ. ನಾನು ಕೇಳಿದೆ:

"'ಸುಶೀಲಾ ಅಂತ ಹೊಸದಾಗಿ ಒಬ್ಬ ಮಾಸ್ತರತಿಯನ್ನ ನೇಮಿಸಿ ಕೊಂಡಿದ್ದೀರಲ್ಲ. ಅವರಿಗೂ ನಿಮಗೂ ಏನು ಸಂಬಂಧ?'

"'ಏನೂ ಇಲ್ಲರೀ.'

"'ಇಲ್ಲ ಯಾಕೆ? ಆ ಸುಶೀಲಾಬಾಯಿಯವರೇ ನನ್ನ ಹತ್ತರ ತಕರಾರು ಮಾಡಿದಾರೆ. ಅವರಿಗೆ ಎರಡು ತಿಂಗಳ ಟೆಂಪರರಿ ನೌಕರಿ ಕೊಟ್ಟು ಅವರನ್ನ ಕೆಡಿಸಿದಿರಲ್ಲವೇನು?'

"ಎ. ಓ. ಮಿಸುಕಾಡಲಿಲ್ಲ. ನಾನೇ ಮುಂದೆ ಹೇಳಿದೆ:

"'ಮುಂದೆ ಅವರ ನೌಕರಿ ಕಾಯಂ ಮಾಡಬೇಕಾದರೆ ನೀವು ಹಾಕಿದ ಕರಾರು ಕೇಳಿಯಂತೂ ನನ್ನ ಎದೆಗೆ ಆಘಾತವಾದಂತಾಯಿತು. ಸುಶೀಲಾಬಾಯಿ ತನ್ನ ಗೆಳತಿ ಗಿರಿಜಮ್ಮನವರನ್ನು ತಂದುಕೊಡಬೇಕಾಗಿತ್ತಲ್ಲವೇನು ನಿಮಗೆ? ಊರೊಳಗಿನ ಮನೆತನಸ್ಥ ಹೆಣ್ಣುಗಳೆಲ್ಲಾ ನಿಮಗೆ ಬೇಕಲ್ಲವೇನು? ನೀವೇನು ವಿದ್ಯಾ ಇಲಾಖೆಯ ಅಧಿಕಾರಿಗಳೋ, ಊರನ್ನೆಲ್ಲಾ ಸೂಳೆಗೇರಿ ಮಾಡುವ ವಿಟಸಾರ್ವಭೌಮರೋ? ಆ ಗಿರಿಜಮ್ಮ ನಿಮ್ಮ ಬಲೆಗೆ ಬೀಳಲಿಲ್ಲ ಅಂತ ರೇಗಿ ಅವರ ಗಂಡನ್ನ ಬ್ಯಾರೆ ಕಡೆ ವರ್ಗಮಾಡಿಸಿ ಸೇಡು ತೀರಿಸಿಕೊಂಡಿರಿ. ಗೌರವ್ವ ಎಂಬ ಮಾಸ್ತರತಿಯ ಪ್ರಕರಣದಲ್ಲಿ ಏನೇನು ಕಾರಭಾರ ಮಾಡಿದಿರಿ? ಆ 'ಹರಿಜನ ಮಾಸ್ತರತಿ ಅಂದರೆ ನಿಮ್ಮ ಕುಂಟಲಗಿತ್ತಿಯಲ್ಲವೇನು? ಅವಳ ಮೂಲಕ ಇನ್ನೂ ಎಷ್ಟು ಮಂದಿ ಬಡ ಮಾಸ್ತರತಿಯರನ್ನ ಕೆಡಿಸಿದ್ದೀರಿ?'

"ಇವೆಲ್ಲಾ ಸುಳ್ಳು ಅಂತ ಸಾಧಿಸುವ ಧೈರ್ಯ ಎಲ್ಲಿಂದ ಬರಬೇಕು ಅವನಿಗೆ? ಅವನ ಮಾರಿಗೆ ಚಪ್ಪಲಿಯಿಂದ ಥಡ ಥಡಾ ಅಂತ ಹೊಡೆ ದಂತಾಗಿತ್ತು. ಥಟ್ಟನೆ ನನ್ನ ಕಾಲು ಹಿಡಿದುಕೊಂಡು, 'ಮಕ್ಕಳೊಂದಿಗನಿದೀನಿ. ನನ್ನ ನೌಕರಿಗೆ ಧಕ್ಕೆ ತರಬಾರದು. ಇದೊಂದು ಸಾರಿ ಕ್ಷಮಿಸಿ ಬಿಟ್ಟುಬಿಡಬೇಕು' ಅಂತ ಬೇಡಿಕೊಳ್ಳಹತ್ತಿದ. ಅವನ್ನ ಹಾಗೇ ಬಿಡಲು ನನಗೇನು ಇಚ್ಛೆ ಯಿರಲಿಲ್ಲ. ಅವನ್ನ ನೆಟ್ಟಗೆ ಮನೆಗೇ ಕಳಿಸಬೇಕಂತ ನಿಶ್ಚಯ ಮಾಡಿಕೊಂಡಿದ್ದೆ.

ಆದರವ ನನ್ನ ಕಾಲೇ ಬಿಡಲಿಲ್ಲ. ಇನ್ನೊಮ್ಮೆ ಇಂಥಾ ಕೆಲಸ ಮಾಡುವದಿಲ್ಲಂತ ಗಲ್ಲ ಗಲ್ಲ ಬಡಕೊಂಡು ಹೇಳಿದ. ಹಾಳಾಗಿಹೋಗಲಿ ಅಂತ ಬಿಟ್ಟುಬಿಟ್ಟೆ."

"ಸೊಕ್ಕು ಇಳಿಸಿದಿರಿ ಆ ಮಂಗನದು!" ಎಂದು ನಾನು ಕಾಶಪ್ಪನನ್ನು ಹೊಗಳಿದೆ.

ಅಂದಿನಿಂದ ಆ ಸಾಹೇಬನ ಅಬ್ಬರ ತಗ್ಗಿತು. ಶಿಕ್ಷಕಿಯರಿಗೆ ಆ ಸಂಗತಿ ಗೊತ್ತಾಗುತ್ತಲೂ ಅವರು ಕಾಶಪ್ಪನನ್ನು ಹಾಡಿ ಹರಸಿದರು. ಅವನು ಅಧ್ಯಕ್ಷನಾಗಿರುವವರೆಗೂ ಶಿಕ್ಷಕವರ್ಗಕ್ಕೆ ಯಾವ ತೊಂದರೆಗಳೂ ಉಂಟಾಗಲಿಲ್ಲ. ಕೊನೆಯವರೆಗೂ ಅವನೇ ಅಧ್ಯಕ್ಷನಾಗಿರಬೇಕೆಂದು ಅವರೆಲ್ಲರೂ ದೇವರನ್ನು ಬೇಡಿಕೊಳ್ಳುತ್ತಿದ್ದರು. ನಗರಸುಧಾರಣೆಯ ಕಡೆಗೂ ಲಕ್ಷ್ಯ ಕೊಟ್ಟು, ಚರಂಡಿಗಳನ್ನೂ, ಕೆಲವು ಒಳ್ಳೆಯ ರಸ್ತೆಗಳನ್ನೂ ಮಾಡಿಸಿ ನಾಗರಿಕರ ಮೆಚ್ಚಿಗೆಗೂ ಪಾತ್ರನಾದ ಕಾಶಪ್ಪ. ಅವನ ಅಧಿಕಾರದ ಅವಧಿಯಲ್ಲಿಯೇ ಈ ಊರಿಗೊಂದು ಧರ್ಮಶಾಲೆಯೂ ಆಯಿತು. ಅವನ ವ್ಯಾಪಾರವೂ ಭರದಿಂದ ಸಾಗಿದ್ದುದರಿಂದ ಅವನಿಗೆ ದುಡ್ಡಿನ ಕೊರತೆಯೂ ಇರಲಿಲ್ಲ. ಹಿಂದಿನ ಅಧ್ಯಕ್ಷರಂತೆ ನಗರಸಭೆಯ ಹಣ ಹಾರಿಸುವ ಹೀನಕೃತ್ಯಕ್ಕೆ ಕಾಶಪ್ಪ ಎಂದೂ ಮನಸ್ಸು ಮಾಡಲಿಲ್ಲ. "ಇದ್ದರೆ ಇರಬೇಕಪ್ಪಾ ಇಂಥಾ ಅಧ್ಯಕ್ಷ!" ಎಂದು ಎಲ್ಲರೂ ಅವನನ್ನು ಕೊಂಡಾಡುವರೇ.

ಆದರೆ, ಅದೇ ಸ್ಥಿತಿ ಬಹುಕಾಲ ಬಾಳಲಿಲ್ಲ.

ಕಾಶಪ್ಪನ ಅಧ್ಯಕ್ಷಪದದ ಮೂರನೆಯ ವರ್ಷದಲ್ಲಿ ಒಂದಾದ ಮೇಲೊಂದರಂತೆ ಅವನಿಗೆ ಅನೇಕ ಏಟು ಬಿದ್ದುವು. ಅವನು ಸಾಗಿಸುತ್ತಿದ್ದ ರೇಶಿಮೆಯ ಲಾರಿಗಳನ್ನು ಪೋಲೀಸ್ ಇನ್ಸ್‌ಪೆಕ್ಟರೊಬ್ಬರು ಹಿಡಿದು, ರೇಶಿಮೆಯನ್ನು ಜಪ್ತು ಮಾಡಿದರು. ಐವತ್ತು ಸಾವಿರ ರೂಪಾಯಿಗಳಷ್ಟು ಹಾನಿಯಾಯಿತು ಕಾಶಪ್ಪನಿಗೆ. ಲಾರಿಗಳನ್ನು ಸಾಗಿಸಿಕೊಂಡು ಬಂದ ಡ್ರೈವರು, ಕಾಶಪ್ಪನನ್ನು ಆ ಪ್ರಕರಣದಲ್ಲಿ ಸಿಲುಕಿಸಬಾರದೆಂದು, ಆ ರೇಶಿಮೆ ತಮ್ಮದೆಂದೇ ಹೇಳಿಕೆ ಕೊಟ್ಟುದುದರಿಂದ ಅವನು ಖಟ್ಲೆಯಿಂದ ತಪ್ಪಿಸಿಕೊಂಡ. ಮುಂದೆ ಆ ಡ್ರೈವರರ ಖಟ್ಲೆಯ ಖರ್ಚು, ಅವನಿಗಾದ ದಂಡದ ಖರ್ಚು ಎಲ್ಲವನ್ನು

ಕಾಶಪ್ಪನೇ ನೋಡಿಕೊಳ್ಳಬೇಕಾಯಿತು. ಹಾಗೆ ಅವನಿಗೆ ಭಾರಿ ನಷ್ಟವಾಯಿತು. ಅಂಗಡಿಯಲ್ಲಿ ವಿಶೇಷ ಬಂಡವಾಳವಿರಲಿಲ್ಲವಾದುದರಿಂದ ಅದರ ವ್ಯಾಪಾರವೂ ಕುಗ್ಗುತ್ತ ಬಂತು. ಇವನ ಬಗೆಗೆ ದ್ವೇಷವಿಟ್ಟುಕೊಂಡಿದ್ದ ಆ ಎ. ಓ. ಸಾಹೇಬನೇ ಪೋಲೀಸ್ ಇನ್ಸ್‌ಪೆಕ್ಟರರಿಗೆ ವರ್ತಮಾನ ಕೊಟ್ಟು ಲಾರಿಗಳನ್ನು ಹಿಡಿಸಿರಬೇಕೆಂದು ತರ್ಕಿಸುತ್ತಿದ್ದ ಕಾಶಪ್ಪ.

" ಹಾಗಾದರೆ ಅವನನ್ನ್ಯಾಕೆ ಇಲ್ಲಿಂದ ವರ್ಗ ಮಾಡಿಸಬಾರದು ?" ಎಂದು ನಾನು ಕೇಳಿದೆ.

" ತನ್ನ ಕೆಲಸದಲ್ಲಿ ಯಾವ ತಪ್ಪನ್ನೂ ಮಾಡುವದಿಲ್ಲ ಆ ಕಳ್ಳ. ಹಾಗೆಲ್ಲ ಸುಮ್ಮಸುಮ್ಮನೆ ವರ್ಗ ಮಾಡಿಸುವದಕ್ಕೂ ಬರುವದಿಲ್ಲ," ಎಂದ ಕಾಶಪ್ಪ.

ಅವನ ಅಧಿಕಾರದ ಅವಧಿಯ ಕೊನೆಯ ವರ್ಷವೂ ಕಳೆದುಹೋಯಿತು. ಮತ್ತೆ ಚುನಾವಣೆಗೆ ನಿಂತುಕೊಳ್ಳುವ ಉತ್ಸಾಹ ಅವನಲ್ಲಿರಲಿಲ್ಲ ; ಅದಕ್ಕೆ ಅವಶ್ಯವಾಗಿದ್ದ ಹಣವೂ ಇರಲಿಲ್ಲ.

ಅವನ ಅಧ್ಯಕ್ಷಪದ ಹೋಗುತ್ತಲೂ ನಮ್ಮವರು ಮತ್ತೆ, ಲಾಭವಿಲ್ಲದ ಸುಂಕದಕಟ್ಟೆ ಸೇರಬೇಕಾಯಿತು.

## ೨೫

ಮತ್ತೆ ಹಲವು ವರ್ಷ ಸಂದುವು. ಸುಲೋಚನೆ ಈಗ ದೊಡ್ಡವಳಾಗಿದ್ದಳು, ಕನ್ನಡಶಾಲೆಯ ಕೊನೆಯ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಹೈಸ್ಕೂಲಿಗೆ ಹೋಗುತ್ತಿದ್ದಳು. ವಯಸ್ಸು ಬೆಳೆದ ಹಾಗೆಲ್ಲ ಅವಳ ಆವಶ್ಯಕತೆಗಳೂ ಬೆಳೆಯುತ್ತಿದ್ದುವು. ತಾಯಿಯಂತೆ ಮಗಳಲ್ಲವೆ? ಚಿಕ್ಕಂದಿನಿಂದಲೂ ನನ್ನ ರೀತಿನೀತಿ ನಡವಳಿಕೆಗಳನ್ನು ಅವಳೂ ಅನುಸರಿಸುತ್ತ ಬಂದಿದ್ದಳು. ಸಾಧಾರಣ ತರದ ವಾಯಲ್ ಸೀರೆಗಳೆಂದರೆ ಅವಳಿಗಾಗುತ್ತಿರಲಿಲ್ಲ. ನುಣ್ಣನೆಯ, ಬಣ್ಣಬಣ್ಣಗಳ ರೇಶಿಮೆಯ ಮತ್ತು ಜಾರ್ಜೆಟ್ ಸೀರೆಗಳೇ ಬೇಕು. ಅವೂ ಒಂದೆರಡಾದರೆ ಸಾಲದು. ಎಂಟು ಹತ್ತು ತಂದುಕೊಟ್ಟರೂ ಸಮಾಧಾನವಾಗದು. ಬೇಕು. ಇನ್ನೂ ಬೇಕು. ಅವಳ ರವಿಕೆ ಮತ್ತು ಬ್ಲೌಜುಗಳನ್ನಂತೂ ಲೆಕ್ಕ ಮಾಡುವುದೇ ಅಶಕ್ಯವಾಗಿತ್ತು. ಮೂರು ತಿಂಗಳಿಗೊಂದು ರವಿಕೆಯನ್ನು ಹರಿದು ಯಾರಿಗಾದರೂ ಕೊಟ್ಟುಬಿಡುತ್ತಿದ್ದಳು. ಹಾಗೇ ಕೆಲವು ಸೀರೆಗಳೂ ಅವಳ ಕೈಬಿಟ್ಟು ಹೋಗಿದ್ದುವು. ಅವಳ ಈ ಧಾರಾಳ ಸ್ವಭಾವವನ್ನು ನಿರೀಕ್ಷಿಸಿದ ಹಾಗೆಲ್ಲ ನನಗೆ ದಿಗಿಲಾಗದಿರುತ್ತಿರಲಿಲ್ಲ.

ಸುಲೋಚನೆಯ ಮೈಬಣ್ಣ ಸ್ವಲ್ಪ ಕಪ್ಪು. ಅದನ್ನು ಬೆಳ್ಳಗಾಗಿಸಲು ಏನೆಲ್ಲ ಪ್ರಯತ್ನ ಅವಳದು! ಮಾರುಕಟ್ಟೆಯಲ್ಲಿ ದೊರೆಯುವ ಒಂದು ಸೋಪನ್ನೂ ಅವಳು ಉಪಯೋಗಿಸದೆ ಬಿಡಲಿಲ್ಲ. ಬೆಳಗಿನಿಂದ ಸಂಜೆಯವರೆಗೂ ಮುಖಕ್ಕೆ ಸೋಪು ಹಚ್ಚಿ ತಿಕ್ಕಿದ್ದೇ ತಿಕ್ಕಿದ್ದು. ಸ್ನೋ-ಪೌಡರು ಬಳಿಯುವುದಂತೂ ಎಷ್ಟು ಸಲವೋ! ಅವಳ ಕೈ ವಸ್ತ್ರಗಳೆಷ್ಟು! ಕೈ ಬಳೆಗಳೆಷ್ಟು! ಅವುಗಳ

ವೈವಿಧ್ಯವೆಷ್ಟು! ಅಲಂಕಾರ ಮಾಡಿಕೊಳ್ಳುವುದರಲ್ಲಿ ಯಾರಿಗೂ ಹಿಂದುಳಿಯ ದಿದ್ದ ನಾನೇ ದಿಗ್ಭ್ರಾಂತಳಾಗಿ ಹೋಗುತ್ತಿದ್ದೆ, ಸುಲೋಚನೆಯ ಸಿಂಗಾರ ಕಂಡು. 'ಇವರು' ಮಾತ್ರ ಅವಳ ಷೋಕಿಯನ್ನು ಒಂದು ಸಲವೂ ಗಮನಿಸಲಿಲ್ಲ.

ಸುಲೋಚನೆಗೆ ದೇವದತ್ತವಾಗಿ ಲಭಿಸಿದ ಏಕಮಾತ್ರ ಸೌಂದರ್ಯ ವೆಂದರೆ ಅವಳ ಕೇಶರಾಶಿಯದು. ಅವಳಿಗೂ ಅದರ ಅರಿವು ಇದ್ದೇ ಇರಬೇಕು. ತನ್ನ ಇನ್ನಿತರ ಕುಂದುಕೊರತೆಗಳನ್ನು ಮರೆಮಾಡಲು ಆ ಸುಂದರ ಕೇಶರಾಶಿ ಯನ್ನು ಆಕೆ ಕೌಶಲ್ಯದಿಂದ ಉಪಯೋಗಿಸುತ್ತಿದ್ದಳು. ನಿತ್ಯವೂ ಎಂಟು ಹತ್ತು ಬಾರಿಯಾದರೂ ಬಾಚಿಕೊಂಡು ಕೂದಲು ನಯವಾಗಿ ರೇಶಿಮೆಯ ಹಾಗಾಗು ವಂತೆ ಶ್ರಮಿಸುತ್ತಿದ್ದಳು. ಕೂದಲನ್ನೆಲ್ಲ ಬಿಚ್ಚಿ ಹಾಗೇ ಇಳಿಬಿಡುವುದೊಮ್ಮೆ; ತಲೆಯ ಹಿಂದೆ ಎರಡು ಜಡೆ ಇಳಿಬಿಡುವುದಿನ್ನೊಮ್ಮೆ; ಅವುಗಳೆರಡನ್ನೂ ಬಿಗಿಯಾಗಿ ಕಟ್ಟಿ ಬಿಡುವುದಿನ್ನೊಮ್ಮೆ. ಮತ್ತೊಮ್ಮೆ ತುರುಬು ಕಟ್ಟಿ ಹೂ ಮುಡಿಯುವುದು. ಇನ್ನೊಮ್ಮೆ, ಎಡಕ್ಕೆ ಓರೆಬೈತಲೆ ತೆಗೆದು ತುರುಬು ಸಡಿಲು ಗೊಳಿಸುವುದು. ಅವಳ ಆ ಕೂದಲಿನ ಗೋಳು ಕಂಡ ಹಾಗೆಲ್ಲ ನನಗೆ ಮೋಜೆನ್ನಿಸುತ್ತಿತ್ತು. ಇಂಥ ಆಡಂಬರದ ಹುಚ್ಚಿಗೆ ಬಿದ್ದು ಹುಡುಗಿ ಈ ವಯಸ್ಸಿನಲ್ಲಿಯೇ ಅಡ್ಡಹಾದಿ ಹಿಡಿದು ಕೆಟ್ಟುಹೋಗಬಹುದೆಂದೂ ಒಂದೊಂದು ಬಾರಿ ಅನ್ನಿಸಿ ಬಹಳ ಆತಂಕವಾಗುತ್ತಿತ್ತು.

ನಮ್ಮ ಸಂಸಾರ ತಕ್ಕಮಟ್ಟಿಗೆ ಹಾಯಾಗಿಯೇ ನಡೆದಿತ್ತು. ಮೊದಲಿನ ಹಾಗೆ ಅವರಿಗೆ ಮೇಲುಸಂಪಾದನೆಯಿರಲಿಲ್ಲ. ಕಾಶಪ್ಪನೂ ತೊಂದರೆಯಲ್ಲಿದ್ದ ನಾದುದರಿಂದ ಅವನಿಂದ ಹಣ ಬರುವುದೂ ನಿಂತುಹೋಗಿತ್ತು. ಸುಲೋಚನೆಯ ಮತ್ತು ಕುಮಾರನ ಶಾಲಾ ಫೀಜು, ಮನೆಯ ಖರ್ಚ, ಬಟ್ಟೆ ಬರೆ ಸಿನಿಮಾ ನಾಟಕಾದಿಗಳ ಖರ್ಚು, ಸುಲೋಚನೆಯ ಸ್ನೋ - ಪೌಡರು - ಸುಗಂಧದೆಣ್ಣೆ ಗಳ ಖರ್ಚು - ಇದೆಲ್ಲವೂ ಅವರ ಸಂಬಳದಲ್ಲೇ ಸಾಗಬೇಕಾದರೆ ಬಹಳ ಕಷ್ಟ ವಾಗುತ್ತಿತ್ತು. ಅನಾವಶ್ಯಕ ಖರ್ಚು ನಿಲ್ಲಿಸಿಬಿಡಬೇಕೆಂದು ಎಷ್ಟು ಯತ್ನಿಸಿದರೂ ಸಾಧ್ಯವಾಗಲಿಲ್ಲ. ಮಿತವ್ಯಯದ ರೀತಿಯನ್ನೇ ನಾನು ಮರೆತುಬಿಟ್ಟ ಹಾಗಿತ್ತು. ಸಿನಿಮಾ ಮತ್ತು ಷೋಕಿಯಿಲ್ಲದೆ ಸೊಗಸೇ ಅನ್ನಿಸುತ್ತಿರಲಿಲ್ಲ. ಕಾಶಪ್ಪನನ್ನು

ಸುಲಿದು ಕೂಡಿಸಿದ್ದ ಗಂಟನ್ನು ಆಗ ಬಿಚ್ಚಲೇಬೇಕಾದ ಪ್ರಸಂಗ ಬಂತು. ಆ ಹಣವನ್ನು ವ್ಯಯಿಸಬೇಕಾದರೆ ನನ್ನ ಜೀವದ ಮೇಲೆ ಬಂದ ಹಾಗಾಗುತ್ತಿದ್ದಿತಾದರೂ ಬೇರೆ ಉಪಾಯವಿರಲಿಲ್ಲ.

"ಇದೇ ಕಾಲ ಬಹಳ ದಿನ ಇರುವದಿಲ್ಲ. ಮತ್ತೆ ಕಾಶಪ್ಪಗೆ ಚಲೋ ದಿನ ಬಂದಾವು. ಮತ್ತೆ ಗಳಿಸಿಯೇನು," ಎಂದು ನನಗೆ ನಾನೇ ಸಮಾಧಾನ ಮಾಡಿಕೊಳ್ಳುತ್ತಿದ್ದೆ.

ಅದೇ ವೇಳೆಗೆ ಸುಲೋಚನೆ ಋತುಮತಿಯಾದಳು. ಸುಖದಲ್ಲಿ ಸ್ವೇಚ್ಛೆಯಿಂದ ಬೆಳೆದ ಹುಡುಗಿ ಅಷ್ಟು ಬೇಗ ಮೈ ನೆರೆದುದರಲ್ಲಿ ಸೋಜಿಗ ವೇನೂ ಇರಲಿಲ್ಲ. ಸರಿ. ಸಂಪ್ರದಾಯದ ಪ್ರಕಾರ ನಡೆಯಬೇಕಾದ ವಿಧಿಗಳು ನಡೆದುವು. ಅತ್ತೆ–ಮಾವ, ನೀಲಕ್ಕ, ಅವಳ ಮಕ್ಕಳು ಎಲ್ಲರೂ ಬಂದು ಊಟಮಾಡಿಹೋದರು. ನೀಲಕ್ಕನ ಮಗ ಕಲ್ಯಾಣ ಈಗ ಯುವಕ. ಮ್ಯಾಟ್ರಿಕ್ ಪರೀಕ್ಷೆಗೆ ಎರಡು ವರ್ಷ ಕುಳಿತು ತೇರ್ಗಡೆಯಾಗದೆ ಮೂರನೆಯ ಬಾರಿ ಕೂಡಲು ಸಿದ್ಧತೆ ನಡಸುತ್ತಿದ್ದ.

ಊಟ ಮುಗಿಯುತ್ತಲೂ ಅತ್ತೆ–ಮಾವ, ಕಲ್ಯಾಣ ಮೂವರೂ ಹೊರಟುಹೋದರು. ಸಾಯಂಕಾಲ ಬರುವುದಾಗಿ ಹೇಳಿ ನೀಲಕ್ಕ ತನ್ನ ಮಗಳ ಸಮೇತ ಇಲ್ಲೇ ಉಳಿದಳು. ಹಾಗೆ ಎಂದೂ ನಿಂತುಕೊಂಡಾಕೆಯಲ್ಲ ನೀಲಕ್ಕ. ಅವಳದೇನೋ ಉದ್ದೇಶವಿದ್ದುದಂತೂ ಎದ್ದುಕಾಣುತ್ತಿತ್ತು.

'ಇವರನ್ನು' ಎದುರಿಗೆ ಕೂಡಿಸಿಕೊಂಡು ಅವಳು ಮೆಲ್ಲನೆ ಮಾತಿಗಾರಂಭಿಸಿದಳು:

"ಸುಲೋಚನೆ ದೊಡ್ಡಾಕೆಯಾದಳಲ್ಲ ರಾಚಣ್ಣಾ. ಇವಳ ಮದುವೆಯ ವಿಚಾರ ಏನು ಮಾಡಿದ್ದೀ?"

"ಈಗಲೇ ಯಾಕೆ ಅವಸರ ಅಕ್ಕಾ? ಇವಳ ಮ್ಯಾಟ್ರಿಕ್ ಒಂದು ಆಗಲಿ ಅಂತ ಇದೀನಿ."

"ಮದುವೆಯನ್ನ ಆಮ್ಯಾಲ ಮಾಡಿದರೂ ಬಂದೀತು. ಈಗ ನಿಶ್ಚಯ ಆದರೂ ಮಾಡಿಬಿಟ್ಟರ ಚಲೋದು ರಾಚಣ್ಣಾ."

ಇವರು ಸ್ವಲ್ಪವೂ ವಿಚಾರಮಾಡಲಿಲ್ಲ. "ಹೌದೌದು," ಎಂದು ತಲೆ ದೂಗಿದರು.

"ಸುಲೋಚನಾ ಹುಟ್ಟಿದಾಗಲೇ ನಾ ನಿನ್ನ ಕೇಳಿದ್ದೀನಿ – ಕಲ್ಯಾಣನಿಗೇ ಅವಳನ್ನ ಕೊಡಬೇಕು ಅಂತ. ನೀನೂ ಒಪ್ಪಿಕೊಂಡಿದ್ದೀ. ಈಗ ನೀನು ಆ ಮಾತು ಮುರಿಯದೆ ನಡೆಸಿಕೊಡಬೇಕಪ್ಪಾ."

"ಹಾಗೇ ಮಾಡೋಣ ನೀಲಕ್ಕಾ," ಎಂದು ಬಿಟ್ಟರು ಇವರು.

ಸ್ವಲ್ಪ ದೂರದಲ್ಲಿ ಕುಳಿತು ಅವರ ಮಾತುಕತೆಗಳನ್ನಾಲಿಸುತ್ತಿದ್ದ ನನ್ನ ಮೈಯೆಲ್ಲಾ ಬೆಂಕಿಯಂತಾಯಿತು. ನನ್ನನ್ನೊಂದು ಮಾತೂ ಕೇಳದೆ ಇವರು 'ಆಗಲಿ' ಎಂದು ಬಿಟ್ಟರಲ್ಲ? ಸುಲೋಚನೆಯೇನು ಇವರೊಬ್ಬರ ಮಗಳೇ? ನಾನು ಅವಳನ್ನು ಹೊತ್ತು ಹೆತ್ತು ಬೆಳಸಲಿಲ್ಲವೆ? ನನ್ನನ್ನು ವಿಚಾರಿಸದೆ ಅವಳ ಮದುವೆಯನ್ನು ಗೊತ್ತುಮಾಡಲು ಇವರಿಗೇನು ಅಧಿಕಾರ?

"ಊ ಹೂಂ. ಅದೆಲ್ಲಾ ಆಗುವ ಹಾಗಿಲ್ಲ," ಎಂದು ನಾನು ಸಾಕಷ್ಟು ಧೃಡವಾದ ಧ್ವನಿಯಲ್ಲೇ ಹೇಳಿದೆ.

ನೀಲಕ್ಕ ಬೆಚ್ಚಿ ಥಟ್ಟನೆ ನನ್ನ ಕಡೆ ಮುಖ ತಿರುಗಿಸಿದಳು. ಪೀಕಲಾಟ ಬಂದಿತೆಂಬುದು ಗೊತ್ತಾಗುತ್ತಲೂ ಇವರು ತಲೆ ತಗ್ಗಿಸಿ ಮೌನವಾಗಿ ಕುಳಿತು ಕೊಂಡರು.

"ಏನೇ, ಏನದು ನೀನು ಹೇಳೂದು?" ಎಂದಳು ನೀಲಕ್ಕ.

"ನಾನು ತಿರುಕರ ಮಗಳು! ನನ್ನ ಮಗಳನ್ನ ನಿಮ್ಮಂಥ ಶ್ರೀಮಂತರ ಮಗನಿಗೆ ಕೊಡೂದು ಅಂದರೆ ಯಾರಾದರೂ ನಕ್ಕಾರು!"

"ನೀನಾರೇ ಹೇಳುವಾಕಿ? ನನ್ನ ತಮ್ಮನ ಮಗಳನ್ನ ನನ್ನ ಮಗನಿಗೆ ಕೇಳುವ ಹಕ್ಕು ಅದೆ ನನಗೆ. ನಿನ್ನದೇನು ಸಂಬಂಧ ಇದರಲ್ಲಿ?"

"ನಿನ್ನ ತಮ್ಮನ ಮಗಳೂ ಹೌದು. ನನ್ನ ಮಗಳೂ ಹೌದು. ನನ್ನ ಒಪ್ಪಿಗೆ ಇಲ್ಲದೆ ಅವಳನ್ನ ಅವರು ಹ್ಯಾಗೆ ಕೊಡುತಾರೆ? ಅದೆಂದಿಗೂ ಶಕ್ಯ ಇಲ್ಲ. ನನ್ನ ಜೀವ ಹೋದರೂ ಚಿಂತೆಯಿಲ್ಲ, ನಿನ್ನ ಕೈಗೆ ನನ್ನ ಮಗಳನ್ನ ಕೊಡುವದಿಲ್ಲ.

ತಿಳೀತೇನು? ಅವಳ ಮ್ಯಾಟ್ರಿಕ್ ಮುಗಿದ ಬಳಿಕ ಒಬ್ಬ ತಿರುಕರ ಮಗನನ್ನೇ ನೋಡಿ ಅವನಿಗೆ ಕೊಟ್ಟು ಮದುವೆ ಮಾಡುತೀನಿ—"

"ಅಯ್ಯ! ನೋಡೀನಿ ಬಿಡು!" ಎಂದಳು ನೀಲಕ್ಕ.

"ನೋಡೇ ನೋಡುತೀ ಚಲೋದಾಗಿ!" ಎಂದೆ ನಾನು.

"ಈ ಹುಡುಗಿಯನ್ನ ನನ್ನ ಮಗನಿಗೆ ಕೊಡದಿದ್ದರೆ ನಾನು ಜೀವ ಇಟ್ಟುಕೊಳ್ಳೂದೇ ಇಲ್ಲ. ತಿಳಕೊಂಡಿರು ರಾಚಣ್ಣಾ," ಎಂದಳು ನೀಲಕ್ಕ.

"ನನ್ನ ಮಗಳನ್ನ ಇವಳ ಮಗನಿಗೆ ಕೊಟ್ಟರೆ ನಾನು ಅಂದೇ ಬಾವಿ ಹಾರಿಕೊಂಡು ಪ್ರಾಣ ಬಿಡುತೀನಿ, ತಿಳಕೊಂಡಿರಿ," ಎಂದೆ ನಾನು.

ಅವರು ಹಣೆ ಚಚ್ಚಿಕೊಳ್ಳುತ್ತ ಹೇಳಿದರು:

"ಅಂತೂ ನಿಮ್ಮಿಬ್ಬರಲ್ಲಿ ಒಬ್ಬರು ಸಾಯುವದಂತೂ ನಿಶ್ಚಯ ಅಂತ ಕಾಣುತದೆ. ಸುಮ್ಮನಾಗುತೀರೋ ಇಲ್ಲೋ?"

ನೀಲಕ್ಕ ಎದ್ದು, ಕಾಲುಗಳನ್ನಪ್ಪಳಿಸುತ್ತಲೇ ಹೊರಟು ನಡೆದಳು.

ನಾನು ಸುಶೀಲೆಯ ಮನೆಗೆ ಹೋಗಿ ಕುಳಿತೆ.

ಸುಶೀಲೆ ಶಾಲೆಗೆ ಹೊರಡಲು ಅಣಿಯಾಗುತ್ತಿದ್ದವಳು ನನ್ನನ್ನು ಕಂಡು, "ಏನು ಗಿರಿಜಕ್ಕಾ, ಏನು ವಿಶೇಷ?" ಎಂದಳು.

ಮನೆಯಲ್ಲಿ ನಡೆದುದೆಲ್ಲವನ್ನು ನಾನು ಹೇಳಿ ಮುಗಿಸುತ್ತಲೂ ಅವಳೆಂದಳು:

"ನೀನು ಅನ್ನುವದೇ ಸರಿ. ನಿನ್ನ ಮನಸ್ಸಿಲ್ಲದಿರುವಾಗ ನಿನ್ನ ಮಗಳನ್ನ ಹ್ಯಾಗೆ ಮಾಡಿಕೊಳ್ತಾರೆ ಅವರು?"

ಈಚೆಗೆ ಕೆಲದಿನಗಳಿಂದ ಸುಶೀಲೆಯ ವಿವಾಹದ ಮಾತೂ ಕೇಳಿ ಬರುತ್ತಿತ್ತು. ಪ್ರಾಥಮಿಕ ಶಾಲೆಯ ಶಿಕ್ಷಕನೊಬ್ಬನೊಡನೆ ಸ್ನೇಹ ಬೆಳೆದು ಪ್ರೇಮವೂ ಕೂಡಿದ್ದಿತಂತೆ. ಅವಳ ಪೂರ್ವ ಚರಿತ್ರೆಯನ್ನೆಲ್ಲ ತಿಳಿದೂ ಅವನು ಅವಳನ್ನು ಮದುವೆಯಾಗಲು ಸಿದ್ಧನಾಗಿದ್ದನಂತೆ.

"ಈ ವರ್ಷ ಸುಶೀಲೆಯದೂ ಮದುವೆಯಾದೀತು," ಎಂದು ಕಮಲಾ ಬಾಯಿ ಹೇಳಿದಳು.

ಸುಶೀಲೆ ಶಾಲೆಗೆ ಹೋದಳು. ನಾನು ಮತ್ತೆ ಮನೆಗೆ ಬಂದೆ. ಕುಮಾರ ನೊಬ್ಬನೇ ಓದುತ್ತ ಕುಳಿತುಕೊಂಡಿದ್ದ.

“ ಅವರೆಲ್ಲಿ ಹೋದರು ಕುಮಾರಾ ?”

“ ಇದೇ ಈಗ ಎಲ್ಲೋ ಹೋದ, ಹೊರಗೆ.”

“ ಸುಲೋಚನೆ ?”

“ ಅವಳೂ ಹೋದಳು – ಇದೇ ಈಗ. ಸಿನಿಮಾಕ್ಕೆ ಹೋಗಿರಬೇಕು.”

ಆ ದಿನ ಊಟದ ಸಮಯದಲ್ಲೂ ಗಂಭೀರ ಮೌನ ನೆಲಸಿತು. ರಾತ್ರಿಯೂ ಅವರು ತುಟಿ ತೆರೆಯಲಿಲ್ಲ. ನಾನೂ ಬಿಗುವಿನಿಂದಲೇ ಇದ್ದೆ. ರಾತ್ರಿ ಹೋಗಿ ಬೆಳಗಾಗುತ್ತಲೂ ನಿನ್ನೆಯದೆಲ್ಲ ಮರೆತುಹೋಗಿ ನಿತ್ಯದ ಕೆಲಸ ಮೊದಲಾಯಿತು. ಅವರೂ ಮತ್ತೆ ಆ ಮಾತು ಎತ್ತಲಿಲ್ಲ. ನಾನೂ ಸುಮ್ಮನಾದೆ. ಆದರೂ, ಇಬ್ಬರ ಮನಸ್ಸಿನಲ್ಲೂ ಆ ವಿಷಯವನ್ನು ಕುರಿತೇ ಮಥನ ನಡೆದ ಹಾಗಿತ್ತು.

ಅವರಿಗೆ ಗೊಂದಲಕ್ಕಿಟ್ಟುಕೊಂಡಿದ್ದ ಹಾಗಿತ್ತು. ಅವರ ತಾಯಿ ನನ್ನನ್ನು ವಿನಾ ಕಾರಣವಾಗಿ ದೂಷಿಸಿದ್ದಳೆಂದೇ ನಾವು ಆ ಮನೆ ಬಿಟ್ಟು ಬಂದು ಹೊಸ ಸಂಸಾರ ಹೂಡಿದುದಾಗಿತ್ತು. ನಮ್ಮ ಪ್ರಪಂಚವೂ ತಕ್ಕಮಟ್ಟಿಗೆ ಸುಖ ವಾಗಿಯೇ ಸಾಗಿತ್ತು. ಮೂವರು ಮಕ್ಕಳು, ಕೈಯಲ್ಲಿ ಸ್ವಲ್ಪ ಹಣ, ಕೆಲವು ಬಂಗಾರದ ಆಭರಣಗಳು, ಮನೆತುಂಬಾ ಸಾಮಾನು. ಯಾವುದಕ್ಕೂ ಏನೂ ಕೊರತೆಯಿರಲಿಲ್ಲ. ನೌಕರಿಯೂ ತೊಂದರೆಯಿಲ್ಲದೆ ಸಾಗಿತ್ತು. ಆದರೆ, ಅವರ ತಂದೆತಾಯಿಗಳಿಗೆ ವಯಸ್ಸಾಯಿತು, ಇನ್ನು ಅವರನ್ನು ಬಿಟ್ಟು ಇರುವುದು ಉಚಿತವಲ್ಲವೆಂದೇ ಅವರಿಗೆನ್ನಿಸುತ್ತಿತ್ತು. ಇಷ್ಟು ದಿನ ತಂದೆತಾಯಿಗಳು ಗಟ್ಟಿ ಮುಟ್ಟಾಗಿದ್ದು ತಮ್ಮದನ್ನು ತಾವು ನೋಡಿಕೊಳ್ಳಲು ಶಕ್ತರಾಗಿದ್ದರು. ಈಗ ಅವರಲ್ಲಿ ಶಕ್ತಿಯುಳಿದಿಲ್ಲ. ಇದ್ದೊಬ್ಬ ಮಗನಾದ ತಾನು ಅವರನ್ನು ಹಾಗೆ ಬಿಡುವುದು ಪಾಪವೆಂದೇ ಅವರಿಗೆನ್ನಿಸಿರಬೇಕು. ಅಂತೆಯೇ, ಅನೇಕ ಬಾರಿ ನನ್ನ ಹತ್ತಿರ ಆ ವಿಚಾರ ಪ್ರಸ್ತಾಪಿಸಿ, ಪುನಃ ಎಲ್ಲರೂ ಏಕತ್ರವಾಗಿರೋಣವೆಂದು ಹೇಳಿದರು.

ಆದರೆ, ನಾನು ಮಹಾ ಹಟವಾದಿ. ಅತ್ತೆ ಮಾಡಿದ ಅಪಮಾನವನ್ನು ನಾನಿನ್ನು ಮರೆತಿರಲಿಲ್ಲ.

" ಉಟ್ಟ ಸೀರೆಯ ಮ್ಯಾಲ ನನ್ನನ್ನ ಹೊರಗೆ ಹಾಕಿದಾರೆ ಅವರು. ನಿಮಗೆ ನೆನಪಿದೆಯೋ ಇಲ್ಲೋ. ನಾನು ಮಾತ್ರ ಅದನ್ನೆಂದೂ ಮರೆಯಲಿಕ್ಕಿಲ್ಲ. ಒಂದು ಪಾತ್ರೆಯನ್ನ ಕೂಡಾ ಅವರು ಕೊಟ್ಟಿರಲಿಲ್ಲ. ಅಂದೇ ಎರಡು ಗಡಿಗೆ ತಂದು ಅಡಿಗೆ ಮಾಡಿ ಇಲ್ಲಿ ಬಾಳ್ವೆ ನಡಸಿದ್ದೀನಿ. ಜೀವ ಇರುವತನಕ ನಾನು ಈ ಮನೆ ಬಿಟ್ಟ ಅಲ್ಲಿಗೆ ಬರಲಿಕ್ಕಿಲ್ಲ," ಎಂದು ಖಡಾಖಂಡಿತವಾಗಿ ಹೇಳಿದೆ.

ಇವರು, ನನ್ನ ಕೈ ಹಿಡಿದವರು, ನನ್ನನ್ನು ಬಿಟ್ಟು ತಾವೊಬ್ಬರೇ ಆ ಮನೆಗೆ ಹೋಗುವುದು ಅಸಂಭವವೆಂದೇ ನಾನು ಭಾವಿಸಿದ್ದೆ. ಹೆಂಡತಿಯನ್ನು ಮಕ್ಕಳನ್ನು ಬಿಟ್ಟು ಅವರಾದರೂ ಹೇಗೆ ಹೋದಾರು? ಜನ ಏನೆಂದಾರು? ಹೆಂಡತಿ ಕೂಡಾ ಇವನ ಮಾತು ಕೇಳುವುದಿಲ್ಲ, ತಾನೊಬ್ಬನೇ ಬಂದಿದಾನೆ ಅನ್ನದಿರಲಾರರೇ?

ನಾನು ತಿಳಿದಿದ್ದಂತೆಯೇ ಆಯಿತು. ಅವರು ಹೋಗಲಿಲ್ಲ. ಆದರೂ ಆಗಾಗ ಆ ವಿಷಯವೆತ್ತಿ ನನ್ನನ್ನು ಬಲವಂತಕ್ಕೊಳಗುಮಾಡುವುದನ್ನು ತ್ಯಜಿಸ ಲಿಲ್ಲ. ನಾನು ರೇಗಿ ಕೂಗಾಡಲಾರಂಭಿಸುತ್ತಲೂ ಅವರು ವಾದ ನಿಲ್ಲಿಸಿ,

" ಬಾಯಿ ಮಾಡಬ್ಯಾಡ ಮಹಾರಾಯಿತಿ. ಇಲ್ಲೇ ಸಾಯಿ," ಎಂದು ಹೇಳಿ ಹೊರಗೆ ಹೊರಡುತ್ತಿದ್ದರು.

ಇನ್ನೇನು ಮಾಡಬೇಕು? ಅಡಕೊತ್ತಿನಲ್ಲಿ ಸಿಕ್ಕ ಅಡಕೆಯಂತಾಗಿತ್ತು ಅವರ ಸ್ಥಿತಿ. ಅದರಿಂದಾಗಿ ಅವರು ಬಹಳವಾಗಿ ನೊಂದುಕೊಂಡಿದ್ದುದಂತೂ ಸ್ಪಷ್ಟವಾಗಿ ಗೊತ್ತಾಗುತ್ತಿತು. ತಮ್ಮ ಮನೆತನ ಮತ್ತೆ ಒಂದಾಗಲಾರದೆಂದೇ ಅವರಿಗೆನ್ನಿಸಿರಬೇಕು. ಈ ಕಲಹದ ಪರಿಣಾಮವೇನಾಗುವುದೋ ಎಂದು ಚಿಂತಿಸುತ್ತಿರಬೇಕು.

ಅವರ ಮನಸ್ಸಿನಲ್ಲಿ ನಡೆದಿರಬಹುದಾದ ದ್ವಂದ್ವದ ಕಲ್ಪನೆ ನನಗಿದ್ದಿ ತಾದರೂ ನಾನು ಅದಕ್ಕೆ ಅಷ್ಟು ಗಮನವೀಯಲೇ ಇಲ್ಲ. ನನ್ನ ಹಟವನ್ನೇ ನಾನು ಸಾಧಿಸುತ್ತಿದ್ದೆ. ಅವರ ಸಂಪಾದನೆ ಕಡಮೆಯಾಗಿ, ನಾನು ನನ್ನ

ಕೂಡಿಟ್ಟ ನಿಧಿಯನ್ನು ಕರಗಿಸುವ ಸಂದರ್ಭ ಬರುತ್ತಲೂ ಬಹಳ ಬೇಸರ ವಾಗತೊಡಗಿತು. ಅಂಥ ಸಮಯದಲ್ಲಿ ಅವರು ಮಾತನಾಡಿದರೂ ಸಾಕು, ನಾನು ಸಿಟ್ಟು ಬೆಂಕಿಯಾಗುತ್ತಿದ್ದೆ. ಕಡ್ಡಿಯನ್ನು ಗುಡ್ಡವನ್ನಾಗಿ ಮಾಡಿ ಅವರ ಮೇಲೆ ಹರಿಹಾಯುತ್ತಿದ್ದೆ. ಅದಕ್ಕೆ ಮೊದಲು ನಮ್ಮ ಮನೆಯಲ್ಲಿ ಒಂದು ದಿನವೂ ತಂಟೆಯಿರಲಿಲ್ಲ. ಈಗ ದಿನವೂ ಏನಾದರೂ ಇದ್ದುದೇ. ಗದ್ದಲವಿಲ್ಲದೆ ಒಂದು ದಿನವೂ ಕಳೆಯದಂತಾಯಿತು. ಅವರೇ ಹಿಂದೆ ಸರಿವರೆಂದು ಹೇಳ ಬೇಕು. ಗದ್ದಲಕ್ಕಿಟ್ಟುಕೊಳ್ಳುವಂಥ ಮಾತನ್ನೇ ಅವರು ಆಡುತ್ತಿರಲಿಲ್ಲ. ಎಷ್ಟು ಬೇಕೋ ಅಷ್ಟೇ ಮಾತು. ಮನೆಯಲ್ಲಿ ಮೊದಲಿನ ನೆಮ್ಮದಿಯುಳಿಯಲಿಲ್ಲ. ಎಲ್ಲವೂ ಒಂದು ಯಂತ್ರದಂತೆ ನಡೆಯತೊಡಗಿತು. ಹುಡುಗರು ಅಭ್ಯಾಸದಲ್ಲಿ, ನಾನು ಅಡುಗೆಮನೆಯ ಕೆಲಸದಲ್ಲಿ, ಅವರು ತಮ್ಮ ನೌಕರಿಯಲ್ಲಿ.

ಈಚೆಗೆ ಕಾಶಪ್ಪನೂ ನನ್ನ ಹತ್ತಿರ ಬರುವುದು ಅಪರೂಪವಾಗಿತ್ತು. ಅವನ ಸಮಸ್ಯೆಗಳೇ ಅವನಿಗೆ ಸಾಕಷ್ಟಿದ್ದುವು. ವಿಲಾಸೀ ಜೀವನಕ್ಕೆ ಅಗತ್ಯವಾದ ಪುರಸೊತ್ತು ಅವನಿಗಿರಲಿಲ್ಲ. ಅವನ ಸಹವಾಸದ ಬಗೆಗೆ ನನಗಾದರೂ ಎಲ್ಲಿ ಆತುರತೆಯಿತ್ತು. ಹಣಕ್ಕಾಗಿ ತಾನೇ ನಾನು ಅವನ ಸ್ನೇಹ ಕಟ್ಟಿಕೊಂಡದ್ದು ? ಸರಿ. ಮತ್ತೆ ಕೈಯಲ್ಲಿ ಹಣ ಬಂದಾಗ ಬಂದಾನು ಎಂದುಕೊಂಡು ನಾನು ತಟಸ್ಥಳಾಗಿದ್ದೆ.

## ೨೬

ಈಗ ಹೊತ್ತು ಮುಳುಗುತ್ತಿದೆ.

ಮನೆಯಲ್ಲೆಲ್ಲ ಕತ್ತಲೆ ತುಂಬಿದೆ.

ಇಂಥ ಕತ್ತಲಲ್ಲಿ ಮುಖ ಕಾಣಿಸುವುದೂ ಸಾಧ್ಯವೇ, ಕನ್ನಡಿಯಲ್ಲಿ?

ಅಸಾಧ್ಯವಾದುದೂ ಕೂಡ ಸಾಧ್ಯವಾಗಿದೆಯಲ್ಲ ಈದಿನ?

ಕತ್ತಲಾಯಿತೆಂದು, ಕುರ್ಚಿಯನ್ನು ಬಿಟ್ಟು ಎದ್ದು ದೀಪ ಅಂಟಿಸಲೂ ಮನಸ್ಸು ಬರಲೊಲ್ಲದು.

ಏನಾಯಿತು ನನ್ನ ಮನಸ್ಸಿಗೆ? ಏಕೆ ನಾನು ಹೀಗಾದೆ?

ಕತ್ತಲಲ್ಲೇ ಕನ್ನಡಿಯಲ್ಲಿ ಮುಖ ಕಾಣಿಸುತ್ತಿದೆಯಲ್ಲ!

ಇದೆಂಥ ವೈಚಿತ್ರ್ಯ!

ವೈಚಿತ್ರ್ಯವೂ ಇರಲಾರದು. ಬೆಳಗಿನಿಂದ ಕನ್ನಡಿಯನ್ನೇ ನೋಡುತ್ತ ಕುಳಿತರೆ ರಾತ್ರಿಯಲ್ಲೂ ನನ್ನ ಮುಖ ಕಾಣುವುದು ಸಹಜವೆಂದೇ ತೋರುತ್ತದೆ.

ನನ್ನ ಮನಸ್ಸೋ, ಸಿನಿಮಾ ತೋರಿಸುವ ಬಿಳಿಯ ಪರದೆಯಂತಾಗಿದೆ. ನನ್ನ ಜೀವನದ ದೃಶ್ಯಗಳೆಲ್ಲ ಒಂದರ ಹಿಂದೊಂದರಂತೆ ಮೂಡುತ್ತಿವೆ ಈ ಪರದೆಯ ಮೇಲೆ.

ನನ್ನ ಜೀವನದ ಸಿನಿಮಾ.....ನಾನು ನಾಯಿಕೆ; ನಮ್ಮವರು ನಾಯಕರು (?); ಕಾಶಪ್ಪ, ಮಲಕಾಜ ಮತ್ತು ಅಬ್ದುಲ್‌ಖಾನರು ಉಪ ನಾಯಕರು; ನೀಲಕ್ಕ, ಅತ್ತೆ, ಸುಶೀಲಾ, ಈರವ್ವ ಮೊದಲಾದವರು ಉಪ ಪಾತ್ರಗಳು. ಒಳ್ಳೇ ಸಿನಿಮಾ....

ನನ್ನ ಜೀವನದ ನೆನಪುಗಳು....ಸಂಬಂಧವಿದ್ದವರ ಇಲ್ಲದವರ ನೆನಪು. ನನ್ನ ನೆನತಿನ ಶಕ್ತಿಯಾದರೂ ಎಷ್ಟು ಪ್ರಚಂಡವಾದದ್ದು! ಸ್ವಲ್ಪವನ್ನೂ ಮರೆತಿಲ್ಲವಲ್ಲ....ಮರೆತುಬಿಡುವಂಥ ಕ್ಷುಲ್ಲಪಿ ಸಂಗತಿಗಳೇ ನನ್ನ ಅನುಭವಕ್ಕೆ ಬರಲಿಲ್ಲವೆಂದು ಕಾಣುತ್ತದೆ. ನಾನು ಹುಟ್ಟಿದಂದಿನಿಂದ ಇದುವರೆಗೆ ನಡೆದ ಘಟನೆಗಳೆಲ್ಲ ನನ್ನ ಬಾಳಿಗೆ ಹೊಂದಿಕೊಂಡಿವೆ. ಅವುಗಳಲ್ಲಿ ಒಂದನ್ನೂ ಬಿಡುವ ಹಾಗಿಲ್ಲ. ಸರಪಳಿಯ ಕೊಂಡಿಗಳಂತೆ ಅವು ಒಂದನ್ನೊಂದು ಬಿಗಿದುಕೊಂಡಿವೆ.

....ಆ ದಿನ ಅವರು ಬಹಳ ಹುರುಪಿನಿಂದ ಮನೆಗೆ ಬಂದರು. ಅನೇಕ ದಿನಗಳವರೆಗೆ ಇಲ್ಲದಾಗಿದ್ದ ಆ ಹುರುಪನ್ನು ಕಂಡೊಡನೆ, ಲಂಚ ಸಿಗುವ ಸುಂಕದಕಟ್ಟೆಯ ಕೆಲಸವೇ ಅವರಿಗೆ ಮತ್ತೆ ಲಭಿಸಿರಬಹುದೆಂದು ನನಗೆನ್ನಿಸಿತು.

"ಗಿರಿಜಾ, ನಿನ್ನ ಹತ್ತರ ಎಂಭತ್ತು ರೂಪಾಯಿ ಇದಾವೇನು?" ಅವರು ತಡೆತಡೆಯುತ್ತ ಕೇಳಿದರು.

ನಾನು ಹುಬ್ಬುಗಳನ್ನೇರಿಸಿ ಕೇಳಿದೆ.

"ಯಾಕೆ? ಯಾರದಾದರೂ ಸಾಲ ಕೊಡಬೇಕೋ ಏನು?"

"ಇಲ್ಲ ಗಿರಿಜಾ. ನಾನು ಯಾರ ಹತ್ತಿರವೂ ಸಾಲ ಮಾಡಿಲ್ಲ ಅನ್ನುವದು ನಿನಗೆ ಗೊತ್ತೇ ಅದೆ. ನಿನ್ನ ಹತ್ತರ ಇದ್ದರೆ ಕೊಟ್ಟಿರು. ನಾಳಿನ ದಿನವೇ ತಿರುಗಿ ಕೊಡುತ್ತೇನಿ. ಕೈಗಡ ಅಂತ ಕೊಡು ಬೇಕಾದರೆ."

"ಯಾತಕ್ಕೆ ಬೇಕು ಅನ್ನುವದಾದರೂ ಹೇಳಬಾರದೇ?"

ಗುಟ್ಟಿನ ಸಂಗತಿಯನ್ನು ಹೇಳುವವರಂತೆ ಅತ್ತಿತ್ತ ದೃಷ್ಟಿ ತಿರುಗಿಸುತ್ತಾ ಅವರು ಹೇಳಿದರು.

"ನೋಡು ಗಿರಿಜಾ, ಈಗ ಬಂಗಾರ ನೂರುರೂಪಾಯಿಗೆ ತೊಲೆ ಯಾಗಿದೆ – ಮಾರ್ಕೆಟ್ಟಿನೊಳಗೆ. ನಾಳೆ ಒಂದು ಕಡೆಯಿಂದ ಗೋವೆಯ ಬಂಗಾರ ಬರುವದದೆ....ನಮ್ಮ ಜಕಾತಿಕಟ್ಟೆಯ ಹತ್ತರ ಕೊಡುತಾರೆ ಒಬ್ಬರು. ನಲವತ್ತು ರೂಪಾಯಿಗೊಂದು ತೊಲೆ. ನನಗೂ ಎರಡು ತೊಲೆ ಕೊಡುತೀನಂತ ಹೇಳಿದಾರೆ. ಅದನ್ನ ತಂದು ಊರಲ್ಲಿ ಮಾರಿದರೆ ಎರಡುನೂರು ರೂಪಾಯಿ

ಅಥವಾ ಎಂಟು ಹತ್ತು ಕಡಮೆ ಬರುತಾವೆ. ಕಡೆಗೆ ಇಪ್ಪತ್ತು ಕಡಿಮೆಯಾದರೂ ನಮಗೆ ಒಂದೇ ದಿನದಲ್ಲಿ ನೂರು ರೂಪಾಯಿ ಲಾಭವಾಗುತದೆ."

ನೂರು ರೂಪಾಯಿ ಲಾಭ ಎನ್ನುತ್ತಲೂ ನನಗೂ ಆಸೆಯಾಗದಿರಲಿಲ್ಲ.

"ರೂಪಾಯಿ ಕೊಡ್ತೀನಿ. ಆದರೆ ಎಚ್ಚರದಿಂದಿರಬೇಕು. ಬಂಗಾರ ಎಂಥಾದ್ದು ನೋಡಿ ಪರೀಕ್ಷೆ ಮಾಡಿ ತಗೊಳ್ಳಿರಿ. ಮೋಸಹೋದೀರಿ," ಎಂದು ಎಚ್ಚರಿಕೆ ಕೊಟ್ಟು ಹಣ ಎಣಿಸಿಕೊಟ್ಟೆ.

ಮಾರನೆಯ ದಿನ ಬೆಳಿಗ್ಗೆ ಅವರು ರೂಪಾಯಿ ತೆಗೆದುಕೊಂಡು ಹೋಗಿ ಸಂಜೆ ಬರುವಾಗ ಎರಡುತೊಲೆ ಬಂಗಾರ ತಂದರು. ಪರೀಕ್ಷಿಸಿನೋಡಿದೆ. ಮೋಸವೇನೂ ಇರಲಿಲ್ಲ. ನಿಜವಾದ ಬಂಗಾರವೇ ಆಗಿತ್ತು.

"ಇದನ್ನೊಯ್ದು ಮಾರುವದು ಮಾತ್ರ ಬಿಗಿಯಾದ ಕೆಲಸ. ಪೋಲೀಸರಿಗೆ ಗೊತ್ತಾದರೆ ಮೈ ಮ್ಯಾಲ ಬರುವ ಪ್ರಸಂಗ."

"ನಾನು ಯಾವಾಗಲೂ ಸಾಮಾನು ಕೊಳ್ಳುತೀನಲ್ಲ – ಆ ಸರಾಫರ ಹತ್ತರ ಒಯ್ದು ಮಾರಿಬಿಡಿರಿ. ಅವರೇನು ಬೊಬ್ಬಾಟ ಮಾಡಲಿಕ್ಕಿಲ್ಲ."

ನಾನು ಹೇಳಿದ ಹಾಗೇ ಅವರು ಆ ಸರಾಫರಲ್ಲಿಗೆ ಹೋಗಿ ಅದನ್ನು ಮಾರಿದರು. ಸರಾಫರು ನಮಗೆ ಬಂಗಾರ ಮಾರುವ ಧಾರಣೆಯೇ ಬೇರೆ; ನಮ್ಮಿಂದ ಖರೀದಿ ಧಾರಣೇ ಬೇರೆ. ಎರಡು ತೊಲೆ ಬಂಗಾರಕ್ಕೆ ಒಟ್ಟು ನೂರಾ ಎಂಭತ್ತು ರೂಪಾಯಿ ಸಿಕ್ಕಿದುವು. ಅವುಗಳಲ್ಲಿ ಐವತ್ತು ರೂಪಾಯಿ ತಮ್ಮ ಹತ್ತಿರ ಇಟ್ಟುಕೊಂಡು ಉಳಿದ ಹಣವನ್ನು ನನ್ನ ಕೈಗೆ ಕೊಟ್ಟರು.

"ಐವತ್ತು ರೂಪಾಯಿ ಏನು ಮಾಡುತೀರಿ?"

"ಈ ವ್ಯಾಪಾರ ನಾನೊಬ್ಬನೇ ಮಾಡಿಲ್ಲ. ಇನ್ನೊಬ್ಬ ಪಾಲುಗಾರ ನಿದಾನೆ. ಅವನಿಗೆ ಕೊಡಬೇಕಲ್ಲ?" ಎಂದರವರು.

ಆ ಮಾತಿನ ಮೇಲೆ ನನಗೇನು ನಂಬಿಕೆ ಹುಟ್ಟಲಿಲ್ಲ.

ಅದೇ ದಿನ ಅವರು ಕುಮಾರನನ್ನು ಜೊತೆಗೆ ಕರೆದುಕೊಂಡು ತಮ್ಮ ತಂದೆಯ ಮನೆಗೆ ಹೋಗಿ ಸ್ವಲ್ಪ ನಾಲ್ವತ್ತು ರೂಪಾಯಿಗಳನ್ನು ಅವರಿಗೆ ಕೊಟ್ಟು ಬಂದರು. ಕುಮಾರನನ್ನು ವಿಚಾರಿಸಿದಾಗ ಆ ಸಂಗತಿ ನನಗೆ ಗೊತ್ತಾಯಿತು.

"ಇವರ ಪಾಲುಗಾರರೆಂದರೆ ಇವರೇ ಇರಬೇಕು!" ಎಂದು ಹೇಳಿಕೊಂಡು ನಾನು ಮತ್ತೆ ಉರಿಯತೊಡಗಿದೆ. ಆ ವಿಚಾರವಾಗಿ ಅವರೊಡನೆ ಜಗಳ ವಾಡಲಿಲ್ಲ, ಅಷ್ಟೆ.

ಒಂದೇ ಒಂದು ದಿನದಲ್ಲಿ ನೂರು ರೂಪಾಯಿ ಸಂಪಾದಿಸಿ ತಂದ ತಾವು ಒಳ್ಳೇ ಜಾಣರೆಂದು ಅವರಿಗೆನ್ನಿಸಿರಬೇಕು. ಒಂದು ವಾರವೆಲ್ಲಾ ಬಹಳ ಸಂತೋಷವಾಗೇ ಇದ್ದರು. ಮುಂದಿನವಾರ ಮತ್ತೆ ಬಂಗಾರ ಬರುವ ಸುದ್ದಿ ಬಂತು.

"ಈ ಸಾರಿ ಒಂದು ನೂರು ತೊಲೆ ಬಂಗಾರ ತರುತಾರಂತೆ ಗಿರಿಜಾ."

"ನೂರು ಅಂದರೆ ಭಯಂಕರ ಆಯ್ತಲ್ಲ. ಇದನ್ನೆಲ್ಲಾ ಎಲ್ಲಿಂದ ತರುತಾರೆ ಅವರು?"

"ಗೋವಾದಿಂದ. ಅಲ್ಲಿ ಬಂಗಾರ ಅಗ್ಗ. ಅದಕ್ಕೆ ಗಡಿದಾಟಿಸಿ ಪೋಲೀಸರ ಕಣ್ಣು ತಪ್ಪಿಸಿ ತರುತಾರೆ. ಅವರೇ ಸ್ವತಃ ಊರೊಳಗೆ ಬಂದು ಮಾರಿದರೆ ಬೇಕಾದಷ್ಟು ಲಾಭವಾಗುತದೆ. ಆದರೆ ಅವರು ಹಾಗೆ ಊರೊಳಗೆ ಬರುವಂತಿಲ್ಲ. ಪೋಲೀಸರು ಅವರ ಮ್ಯಾಲ ಕಣ್ಣಿಟ್ಟುಕೊಂಡಿರುತಾರೆ. ಅದಕ್ಕೇ ಅವರು ಜಕಾತಿ ಕಟ್ಟೆಯ ಹತ್ತರ ನಲವತ್ತು ರೂಪಾಯಿಗೆ ತೊಲೆಯಂತೆ ಯಾರಿಗಾದರೂ ಕೊಟ್ಟು ಸಿಕ್ಕಷ್ಟೇ ಲಾಭ ಅಂತ ತಿಳಕೊಂಡು ಹೋಗುತಾರೆ. ಜಕಾತಿ ಕಟ್ಟೆಯಿಂದ ತಂದು ಮಾರುವವರಿಗೆ ನೂರು ತೊಲೆಗೆ ಐದು ಸಾವಿರ ರೂಪಾಯಿ ಲಾಭ ಬರ್ಥತದೆ."

ಅಷ್ಟು ಹೇಳಿ, ಅವರು ಸುಮ್ಮನಾದರು. ನನ್ನ ಹತ್ತಿರ ಹಣ ಕೇಳಲು ಅವರಿಗೆ ಸಂಕೋಚವೆನ್ನಿಸುವುದು ಸಹಜವಾಗಿತ್ತು.

"ಅದಕ್ಕೆ ಈಗೇನು ಮಾಡಬೇಕು ಅಂತೀರಿ? ಈ ನೂರು ತೊಲೆ ಎಲ್ಲಾ ನೀವೇ ಕೊಂಡು ತರಬೇಕು ಅಂತೀರೋ ಏನು?"

"ನೀನು ರೂಪಾಯಿ ಕೊಟ್ಟರೆ ತರುತೀನಿ."

"ನಾಲ್ಕು ಸಾವಿರ ರೂಪಾಯಿ ನಾನೆಲ್ಲಿಂದ ತರಲಿ?"

"ನೋಡು ಗಿರಿಜಾ. ನಿನ್ನ ಹತ್ತರ ಇದ್ದರೆ ಕೊಡು. ಸಂಜೆಯೊಳಗಾಗಿ

ಈ ನಾಲ್ಕು ಸಾವಿರ ಅಲ್ಲದೆ ಲಾಭದ ಐದು ಸಾವಿರವನ್ನು ತಂದು ಕೊಡ್ತೀನಿ."

ಆ ಐದು ಸಾವಿರದತ್ತ ನನ್ನ ಮನಸ್ಸು ಓಡುತ್ತಿದ್ದಿತಾದರೂ ಅವುಗಳಿಗಾಗಿ, ನನ್ನ ಹತ್ತಿರ ಇದ್ದ ಹಣ ತೆಗೆಯಲು ಮಾತ್ರ ಧೈರ್ಯವಾಗಲಿಲ್ಲ. ಒಂದು ವೇಳೆ ಏನಾದರೂ ಮೋಸ ನಡೆದು ನನ್ನ ನಾಲ್ಕು ಸಾವಿರವೂ ಮುಳುಗಿಹೋಗಿಬಿಟ್ಟರೆ? ಇಷ್ಟು ವರ್ಷ ಕಷ್ಟಪಟ್ಟು, ಮೈಯನ್ನು ಮಾರಿಕೊಂಡು ನಾನು ಕೂಡಿಸಿದ ಗಂಟು ಒಂದೇಟಿಗೇ ಅದೃಶ್ಯವಾದರೆ?. ಛೆ. ಹಣ ಕೊಡುವ ಮಾತೇ ಬೇಡ....

"ನನ್ನ ಹತ್ತರ ಎಲ್ಲಿಂದ ಬರಬೇಕು ಅಷ್ಟು ಹಣ?"

"ಹಾಗಾದರೆ....ಹಾಗಾದರೆ....ಬ್ಯಾರೆಯವರಿಗೆ ಮಾರಿಬಿಡಲಿಕ್ಕೆ ಹೇಳಿ ಬಿಡುತೀನಿ ಅವರಿಗೆ."

"ಅಲ್ಲರೀ, ಎಲ್ಲಾದರೂ ಸಾಲ ಯಾಕೆ ಮಾಡಬಾರದು?"

"ಸಾಲ? ಇಷ್ಟು ಹಣ ಯಾರು ಸಾಲ ಕೊಟ್ಟಾರು ಗಿರಿಜಾ?"

"ಆ ಸರಾಫರೇ ಕೊಡಬಹುದಲ್ಲ? ಸಂಜೆಯೊಳಗಾಗಿ ನೂರು ತೊಲೆ ಬಂಗಾರ ತಂದುಕೊಡುತೀನಂತ ಹೇಳಿದರಾಯಿತು."

"ಅವರು ಕೊಡಬಹುದೋ ಇಲ್ಲೋ!"

"ಕೊಟ್ಟೇ ಕೊಡುತಾರೆ. ಇಷ್ಟು ದಿವಸ ನಾವು ವ್ಯಾಪಾರ ಮಾಡಿಲ್ಲವೇನು ಅವರ ಹತ್ತರ? ನನ್ನ ಹತ್ತರ ಒಡವೆ ಇರುವದೂ ಅವರಿಗೆ ಗೊತ್ತಲ್ಲ?"

"ಒಡವೆ ತಂದಿಟ್ಟು ಒಯ್ಯಿರಿ ಅಂತ ಅಂದರೆ?"

"ನಾನು ಊರಲ್ಲಿಲ್ಲ ಅಂತ ಹೇಳಿರಲ್ಲ. ಇಷ್ಟು ತಿಳಿಯುವದಿಲ್ಲೇನು?"

ಅವರು ಹೋದರು. ಸರಾಫರೂ ಒಪ್ಪಿ ಹಣ ಕೊಟ್ಟರು. ಅವರ ಲೆಕ್ಕದ ಪುಸ್ತಕಗಳಲ್ಲಿ ಸಹಿ ಹಾಕಿ ಹಣ ತೆಗೆದುಕೊಂಡು ಹಾಗೇ ಸುಂಕದ ಕಟ್ಟಿಗೆ ಹೋಗಿ ಆ ಕಳ್ಳವ್ಯಾಪಾರಿಯನ್ನು ಸಂಧಿಸಿ ಹಣ ಕೊಟ್ಟು ಬಂಗಾರದ ಗಟ್ಟಿಯನ್ನು ಚೀಲದಲ್ಲಿಟ್ಟುಕೊಂಡು ಸರಾಫರಲ್ಲಿಗೆ ಒಯ್ದರು.

ಹಾದಿಯುದ್ದಕ್ಕೂ ಅವರು ಯೋಚಿಸಿರಬೇಕು: ಇನ್ನು ತಾಪತ್ರಯವಿಲ್ಲ. ಇಂದು ಬರುವ ಐದು ಸಾವಿರ ರೂಪಾಯಿಗಳಿಂದ ಒಂದು ಅಂಗಡಿಯಿಡಬೇಕು,

ವ್ಯಾಪಾರ ಮಾಡಬೇಕು, ತಂದೆತಾಯಿಗಳಿಗೂ ಸಹಾಯಮಾಡಬೇಕು, ಈಗ ಬಾಡಿಗೆಗಿದ್ದ ಮನೆಯನ್ನೂ ಕೊಂಡುಕೊಳ್ಳಬೇಕು.... ಇತ್ಯಾದಿ – ಇತ್ಯಾದಿ.

ಆದರೆ, ಸರಾಫರ ಅಂಗಡಿಗೆ ಹೋಗಿ ಬಂಗಾರದ ಗಟ್ಟಿಯನ್ನು ತೋರಿಸಿದ ಕೆಲನಿಮಿಷಗಳಲ್ಲಿಯೇ ಅವರ ಯೋಚನೆಗಳೆಲ್ಲವೂ ಕೆಳಗು ಮೇಲಾಗಿದ್ದುವು.

ಬಂಗಾರವನ್ನು ಒಡೆದು ಪರೀಕ್ಷಿಸಿದಾಗ ಅದು ಹಿತ್ತಾಳೆಯೆಂದು ಗೊತ್ತಾಗಿತ್ತು. ಮೇಲ್ಭಾಗಕ್ಕೆ ಮಾತ್ರ ಬಂಗಾರದ ಗಿಲೀಟು ಮಾಡಿದ್ದರಂತೆ!

ನಾಲ್ಕುಸಾವಿರ ರೂಪಾಯಿ ಸಾಲ ಕೊಟ್ಟ ಸರಾಫರು ಸುಮ್ಮನಿರುವರೇ?

ಇವರನ್ನು ಅಂಗಡಿಯಲ್ಲೇ ಕೂಡಿಸಿ ಪೋಲೀಸರಿಗೆ ಹೇಳಿ ಕಳಿಸಿದರು. ಇವರು ದಿಙ್ಮೂಢರಾಗಿ ಕುಳಿತುಕೊಂಡಿದ್ದರು. ಏನನ್ನು ಮಾಡಲು ಹೋಗಿ ಏನಾಯಿತು! ಹೀಗಾಗಬಹುದೆಂದು ಯಾರು ತಿಳಿದಿದ್ದರು? ಪಶ್ಚಾತ್ತಾಪದಲ್ಲಿ ಬೇಯತೊಡಗಿತ್ತು ಅವರ ಮನಸ್ಸು. ಆದರೇನು ಮಾಡುವುದು? ಆಗುವುದು ಆಗಿಹೋಗಿತ್ತು. ಪೋಲೀಸರು ಬಂದು ಅವರನ್ನು ಕಚೇರಿಗೆ ಸಾಗಿಸಿದ್ದರು. ಸರಾಫರ ಫಿರ್ಯಾದು ಪಡೆದುಕೊಂಡು ಇವರನ್ನು ಬಂಧಿಸಿ ಜಾಮೀನಿನ ಮೇಲೆ ಬಿಡುವಾಗ ರಾತ್ರಿ ಹನ್ನೊಂದು ಗಂಟೆಯ ಸಮಯವಾಗಿತ್ತು.

ಮನೆಯಲ್ಲಿದ್ದ ನನಗೆ ಅದುವರೆಗೆ ಈ ವಿಚಾರವಾವುದೂ ತಿಳಿದಿರಲಿಲ್ಲ. ಐದು ಸಾವಿರ ರೂಪಾಯಿ ತೆಗೆದುಕೊಂಡು ಅವರೆಲ್ಲಿಗೆ ಹೋದರು? ತಂದೆಯ ಮನೆಗೆ ಹೋಗಿಬರಬಹುದೋ ಏನೊ. ಎಷ್ಟು ಹಣವನ್ನು ಅಲ್ಲಿ ಕೊಟ್ಟು ಬರುವರೋ! – ಎಂದೆಲ್ಲ ನಾನು ಯೋಚಿಸುತ್ತಿದ್ದೆ. ಊಟದ ನೆನಪೂ ಬಂದಿರ ಲಿಲ್ಲ. ಹುಡುಗರೆಲ್ಲರೂ ಉಂಡು ನಿದ್ರೆಹೋಗಿದ್ದರು. ಅವರ ಆಗಮನವನ್ನೇ ಎದುರುನೋಡುತ್ತ ನಾನೊಬ್ಬಳೇ ವಿರಾಮಕುರ್ಚಿಯಲ್ಲೊರಗಿಕೊಂಡಿದ್ದೆ.

ಬಾಡಿದ ಮುಖ ಹೊತ್ತು ಅವರು ಮನೆಗೆ ಬಂದರು. ಒಂದೆರಡು ತಿಂಗಳುಗಳ ಸಂತತ ಕಾಹಿಲೆಯಿಂದ ಅದೇ ತಾನೆ ಎದ್ದು ಬಂದವರಂತೆ ಅವರು ಕಾಣುತ್ತಿದ್ದರು. ಅವರ ಮುಖವನ್ನು ನೋಡಿದಾಗ ನನಗೂ ಎದೆ ಹೊಡೆದು ಕೊಳ್ಳದಿರಲಿಲ್ಲ. ಅವರು ಒಂದು ಮಾತೂ ಆಡದೆ ಕೋಟು ಟೊಪ್ಪಿಗೆ ತೆಗೆದಿರಿಸಿ, ನಿಟ್ಟುಸಿರು ಬಿಡುತ್ತಾ ಮಂಚದ ಮೇಲೆ ಕುಳಿತುಕೊಂಡರು. ಆ ನಿಟ್ಟುಸಿರಿನಲ್ಲಿ

ಅಗಾಧವಾದ ದುಃಖ ತುಂಬಿತ್ತು. ಏನೋ ಭಾರಿ ಅನಿಷ್ಟವೊದಗಿದಂತೆ ಯಾರಿಗಾದರೂ ಅನ್ನಿಸಬಹುದಾಗಿತ್ತು.

"ಏನಾಯ್ತ್ರೀ ? ಯಾಕೆ ಹೀಗಿದೀರಿ ?" ಎಂದು ನಾನೇ ಮಾತಾಡಿಸಿದೆ.

ಆಗಲೂ ಅವರು ಮೌನವಾಗಿಯೇ ಇದ್ದರು.

ನಾನು ಮತ್ತೆ ಮತ್ತೆ ಕೇಳಿದೆ. ಉತ್ತರ ಬರಲಿಲ್ಲ.

"ಊಟ ಮಾಡೇಳಿರಲ್ಲಾ ?" ಎಂದೆ.

ಅವರು ಏಳಲಿಲ್ಲ.

"ಏನಾಯ್ತು ಹೇಳಬಾರದೇ?" ಎಂದು ನಾನು ಸಂತ್ರಸ್ತ ಸ್ವರದಲ್ಲಿ ಕೇಳಿದೆ.

"ಏನು ಹೇಳಲಿ ಗಿರಿಜಾ, ಸರ್ವನಾಶವಾಯ್ತು. ನಾಳೆ ಜೇಲಿಗೆ ಹೋಗಿ ಬೀಳಬೇಕಾಗುವದು."

ನನ್ನ ಎದೆ ವೇಗದಿಂದ ಬಡಿದುಕೊಳ್ಳತೊಡಗಿತು.

"ಏನಾಯ್ತು? ಜೇಲು ಯಾಕೆ? ನೀವೇನು ಮಾಡಿದಿರಿ?"

ಅವರು ಉಗುಳುನುಂಗಿ ಗಂಟಲು ಸರಿಪಡಿಸಿಕೊಂಡು ನಡೆದುದೆಲ್ಲವನ್ನು ವಿವರವಾಗಿ ಹೇಳಿದರು. ನನಗೆ ಒಮ್ಮಿಂದೊಮ್ಮೆಲೆ ತಲೆ ತಿರುಗಿದಂತಾಯಿತು. ನೆಲಕ್ಕೆ ಕುಸಿದು ಕುಳಿತೆ. ಇಬ್ಬರೂ ಎಷ್ಟೋ ಹೊತ್ತು ಮೌನವಾಗಿದ್ದೆವು. ಊಟದ ನೆನಪೇ ಇಲ್ಲದಂತಾಗಿತ್ತು.

ಕೊನೆಗೆ ನಾನೇ ಧೈರ್ಯ ತಂದುಕೊಂಡು ಈ ಪ್ರಸಂಗದಿಂದ ಪಾರಾಗುವ ಹಂಚಿಕೆ ಹುಡುಕತೊಡಗಿದೆ. ಅವರ ತಂದೆಯ ಮನೆಯನ್ನು ಅಡವಿರಿಸಿ ಸಾಲ ತೆಗೆದರೆ ಒಂದೆರಡು ಸಾವಿರವಾದರೂ ಸಿಗಬಹುದೆಂದು ಅನ್ನಿಸಿತು. ಆ ಯೋಚನೆಯನ್ನು ಕೇಳಿ ಅವರಿಗೇನೂ ಸಮಾಧಾನವಾಗಲಿಲ್ಲ.

"ಆ ಹಳೇ ಮನೆಯನ್ನ ಯಾರು ಅಡವಿರಿಸಿಕೊಳ್ಳುತಾರೆ ಗಿರಿಜಾ? ಅದನ್ನ ಮಾರಾಟಕ್ಕೆ ತೆಗೆದರೂ ಎರಡು ಸಾವಿರ ಬರಲಿಕ್ಕಿಲ್ಲ."

ಸ್ವಲ್ಪ ಹೊತ್ತು ಸುಮ್ಮನಿದ್ದು ಅವರೆಂದರು :

" ಈಗ ಬ್ಯಾರೆ ಉಪಾಯವೇ ಇಲ್ಲ ಗಿರಿಜಾ. ಉಳಿಸಿದರೆ ನೀನೇ ನನ್ನ ಉಳಿಸಬೇಕು."

ನನ್ನ ಹತ್ತಿರ ಇದ್ದ ಹಣ ಮತ್ತು ಒಡವೆಗಳ ಮೇಲೆ ಅವರ ದೃಷ್ಟಿ ಬಿದ್ದುದು ಗೊತ್ತಾಗುತ್ತಲೂ ನನ್ನ ಮೈಯೆಲ್ಲ ಉರಿಯಿತು.

" ಏನಾದದ್ದಾಗಲಿ. ನಾನು ಮಾತ್ರ ನನ್ನ ಬಂಗಾರ ಕೊಡುವದಿಲ್ಲ. ಇದ್ದದ್ದೆಲ್ಲಾ ಒಂದೇ ದಿವಸ ಕಳಕೊಂಡು ಕೂತರೆ ನಾಳೆ ಮಕ್ಕಳುಮರಿಗಳನ್ನ ಕಟ್ಟಿಕೊಂಡು ಭಿಕ್ಷೆಬೇಡಬೇಕಾದೀತು."

ನನ್ನ ನಿಷ್ಠುರ ನುಡಿಗಳನ್ನು ಕೇಳಿ ಅವರು ಹುಚ್ಚರಂತೆ ತೆಪ್ಪಗೆ ಕುಳಿತು ಕೊಂಡರು. ನನಗೆ ಕನಿಕರ ಬರುತ್ತಿರಲಿಲ್ಲವೆಂದೇನೂ ಅಲ್ಲ. ಅವರು ಜೈಲಿಗೆ ಹೋಗಿ ಜೈಲಿಗೆ ಹೋಗಿ ಬಿದ್ದರೆ ನನಗೆ ಸಂತೋಷವೂ ಆಗುವಂತಿರಲಿಲ್ಲ. ಆದರೆ, ನನ್ನ ಹಣ ಮಾತ್ರ ನನ್ನ ಪ್ರಾಣಕ್ಕಿಂತಲೂ ಪ್ರಿಯವಾಗಿತ್ತು ನನಗೆ. ಅದರೆದುರಿಗೆ ಇನ್ನುಳಿದುದೆಲ್ಲ ಕ್ಷುಲ್ಲಕವೆಂದೇ ನನಗೆನ್ನಿಸುತ್ತಿತ್ತು. ನಾನಾದರೂ ಏನು ಮಾಡಲಿ? ನನ್ನ ಮನಸ್ಸಿನ ವಿರುದ್ಧ ವರ್ತಿಸಲು ನಾನು ಸಮರ್ಥಳಾಗಿರಲಿಲ್ಲ.

" ನೀವ್ಯಾಕೆ ಸುಮ್ಮನೆ ಕೂಡುತೀರಿ? ಖೊಟ್ಟಿ ಬಂಗಾರ ಕೊಟ್ಟು ಆ ವ್ಯಾಪಾರಿ ನಿಮಗೆ ಮೋಸ ಮಾಡಿಲ್ಲವೇನು? ಅವನ ವಿರುದ್ಧ ನೀವ್ಯಾಕೆ ಫಿರ್ಯಾದು ಕೊಡಬಾರದು?"

" ಕೊಡಬಹುದು. ಆದರೆ ಅದಕ್ಕೆಲ್ಲಾ ಸಾಕ್ಷಿ ಪುರಾವೆ ಬೇಕಲ್ಲ ಗಿರಿಜಾ?"

" ಯಾರೋ ನಿಮ್ಮ ಪಾಲುಗಾರರಿದಾರೆ ಅಂತಿದ್ದಿರಲ್ಲ? ಅವರು ಸಾಕ್ಷಿ ಹೇಳಬಹುದಲ್ಲ?"

" ಎಲ್ಲಿಯ ಪಾಲುಗಾರರು? ಎಲ್ಲಿಯ ಮಾತು?" ಎಂದು ಹೇಳಿ ಹಣೆ ಹಿಡಿದುಕೊಂಡು ಕುಳಿತರವರು.

" ಹೀಗೇ ಕೂತರೆ ಜೇಲಿಗೇ ಹೋಗಬೇಕಾದೀತು. ಏನಾದರೂ ಹಾದಿ ತೆಗೆಯಿರಿ. ಸಾಕ್ಷಿ ಇಲ್ಲದಿದ್ದರೂ ಚಿಂತೆಯಿಲ್ಲ, ಒಬ್ಬಿಬ್ಬರು ಗೆಳೆಯರನ್ನ ಹಿಡಿದು ಸುಳ್ಳು ಸಾಕ್ಷಿ ತಯಾರುಮಾಡಿರಲ್ಲ?"

" ಅವರು ಸುಳ್ಳು ಹೇಳಲು ತಯಾರಾಗುವರೋ ಇಲ್ಲೋ?"

"ಪ್ರಯತ್ನ ಆದರೂ ಮಾಡಿನೋಡಿರಿ. ಆದರೆ ಆಯ್ತು. ಇಲ್ಲದಿದ್ದರಿಲ್ಲ."

ಅವರು ಪ್ರಯತ್ನ ಮಾಡಿದರು. ಇವರ ಪರವಾಗಿ ಸಾಕ್ಷಿ ಹೇಳಲು ಮುಂದೆ ಬಂದು ಬಂಗಾರದ ಪ್ರಕರಣದಲ್ಲಿ ಸಿಲುಕಿಬೀಳಲು ಯಾರೂ ಸಿದ್ಧರಾಗಲಿಲ್ಲ. ಇವರು ಫಿರ್ಯಾದು ಕೊಟ್ಟರಾದರೂ ಸಾಕ್ಷಿ ಪುರಾವೆಗಳಿರಲಿಲ್ಲವಾದುದರಿಂದ ಅದಕ್ಕೆ ಮಹತ್ವವೇನೂ ಉಳಿಯಲಿಲ್ಲ. ಇವರ ವಿರುದ್ಧವಾಗಿ ಸಾಕಷ್ಟು ಪುರಾವೆಗಳಿದ್ದುವು. ಪೋಲೀಸರ ಸೂಚನೆಯಂತೆ ನಗರಸಭಾಧ್ಯಕ್ಷರು ಇವರನ್ನು ನೌಕರಿಯಿಂದ ಸಸ್ಪೆಂಡ್ ಮಾಡಿದುದೂ ಆಯಿತು.

ಈ ಪ್ರಕರಣ ನಗರದಲ್ಲೆಲ್ಲ ತುಂಬಾ ಕೋಲಾಹಲವೆಬ್ಬಿಸಿತು. ಒಂದೆರಡು ವಾರ ಜನರ ಬಾಯಲ್ಲಿ ಇದೇ ಮಾತು. ನಮ್ಮವರೂ ಆ ಸರಾಫನೂ ಕೂಡಿ ಮಾತಾಡಿಕೊಂಡೇ ಕಳ್ಳಬಂಗಾರದ ವ್ಯವಹಾರವನ್ನು ಎಷ್ಟೋ ದಿನಗಳಿಂದ ನಡಸಿಕೊಂಡು ಬಂದಿರಬೇಕೆಂದು ಜನ ಅಂದುಕೊಂಡರು. ಆ ಸರಾಫನ ಅಂಗಡಿಯಲ್ಲಿ ಒಡವೆಗಳನ್ನು ಕೊಂಡುಕೊಂಡವರೆಲ್ಲ ಗಾಬರಿಗೊಳ್ಳದಿರಲಿಲ್ಲ.... ಅಪ್ಪಟ ಬಂಗಾರವೆಂದು ಹೇಳಿ ಆತ ತಮಗೆ ಖೊಟ್ಟಿ ಬಂಗಾರ ಕೊಟ್ಟು ಮೋಸ ಮಾಡಿರಲಿಕ್ಕಿಲ್ಲವಷ್ಟೆ? ವಾಸ್ತವವಾಗಿ ಆತ ಅಂಥದೇನನ್ನು ಮಾಡಿರಲಿಲ್ಲ. ಆದರೆ, ಈ ಪ್ರಕರಣದಿಂದಾಗಿ ಊರಲ್ಲೆಲ್ಲ ಅವನ ಬಗೆಗೆ ವಿಪರೀತ ಅಪಪ್ರಚಾರ ನಡೆದು ಅವನ ಅಂಗಡಿಗೆ ಯಾರೂ ಹೋಗದಂತಾಗಿ ಅವನ ವ್ಯಾಪಾರವೇ ನಿಂತುಹೋಗುವ ಪ್ರಸಂಗ ಬಂತು.

ನಮ್ಮವರಂತೂ ಆ ಪ್ರಸಂಗದಿಂದ ಭೂಮಿಗಿಳಿದು ಹೋದಂತಾಯಿತು. ಮನೆಯಿಂದ ಹೊರಬೀಳುವುದಕ್ಕೂ ಅವರು ಮನಸ್ಸು ಮಾಡದಾದರು. ಜನರಿಗೆ ಮುಖ ತೋರಿಸುವುದಾದರೂ ಹೇಗೆ? ಇವರಿಂದಾಗಿ ನಾನೂ ಕೂಡ ಹೊರಗೆ ಹೋಗದಂತಾಯಿತು. ಸಂತೆಯ ದಿನ ಮನೆಗೆ ಬೇಕಾದ ಸಾಮಾನು ತರಲು ಹೋಗಿಬರುತ್ತಿದ್ದುದೆಷ್ಟೋ, ಅಷ್ಟೆ.

ನೌಕರಿಯಿಂದ ಸಸ್ಪೆಂಡ್ ಆದ ಬಳಿಕ ಸಂಬಳವಾದರೂ ಎಲ್ಲಿಂದ ಬರಬೇಕು? ಸರಕಾರೀ ನೌಕರಿಯಾದರೂ ಆಗಿದ್ದರೆ ಮಾತು ಬೇರೆ. ಅರ್ಧ ಸಂಬಳವಾದರೂ ಕೈಗೆ ಬರುತ್ತಿತ್ತು. ಹೇಳಿ ಕೇಳಿ ನಗರಸಭೆ. ಯದ್ವಾತದ್ವಾ ಕಾರ

ಭಾರ. ಸಂಬಳವೂ ಇಲ್ಲ, ಭತ್ತೆಯೂ ಇಲ್ಲ. ಆದರೂ ಮನೆಯ ಖರ್ಚು ನಡೆಯಲೇಬೇಕಲ್ಲ? ಅವರ ಹತ್ತಿರವಂತೂ ಒಂದು ಕಾಸೂ ಇರಲಿಲ್ಲ. ಮನಸ್ಸಿಲ್ಲದ ಮನಸ್ಸಿನಿಂದ ನಾನು ನನ್ನ ಗಂಟು ಬಿಚ್ಚಬೇಕಾಯಿತು. ಸಹಜವಾಗಿಯೇ ನಾನು ಅವರ ಮೇಲೆ ಹರಿಹಾಯತೊಡಗಿದೆ. ದಿನವೂ ಜಗಳವಿದ್ದೇ ಇರುತ್ತಿತ್ತು. ಅವರು ಎಲ್ಲವನ್ನೂ ಸಹಿಸಿಕೊಂಡು ಸುಮ್ಮನಿರುತ್ತಿದ್ದರಾದರೂ ಅವರ ಮೌನದಿಂದ ನನಗೆ ಇನ್ನಷ್ಟು ಉತ್ತೇಜನ ದೊರೆತಂತಾಗುತ್ತಿತ್ತು. ಬಾಯಿಗೆ ಬಂದ, ಅಲ್ಲದ ಸಲ್ಲದ ಮಾತುಗಳನ್ನಾಡಲೂ ನಾನು ಹಿಂಜರಿಯಲಿಲ್ಲ. ಅಂದಿನ ನನ್ನ ನಡವಳಿಕೆಯನ್ನು ಇಂದು ನೆನಸಿಕೊಂಡರೆ ಅವರ ಬಗೆಗೆ ಅಯ್ಯೋ ಪಾಪ ಎನ್ನಿಸದಿರುವುದಿಲ್ಲ. ಆದರೆ ಆಗ ಮಾತ್ರ ನನ್ನ ಮೈಯಲ್ಲಿ ರಾಕ್ಷಸ ಸಂಚಾರವಾದ ಹಾಗಿತ್ತು. ನಾನು ಮನೆಗಾಗಿ ಖರ್ಚು ಮಾಡುತ್ತಿದ್ದ ಹಣದಲ್ಲಿ ಅವರು ತಂದು ಕೊಟ್ಟ ಹಣವೂ ಸೇರಿದ್ದಿತೆಂಬ ಅಂಶವನ್ನೇ ನಾನು ಮರೆತುಬಿಟ್ಟೆದ್ದೆ. ನಾನು ಗಳಿಸಿದುದೇ ನನಗೆ ದೊಡ್ಡದಾಗಿ ಕಾಣುತ್ತಿತ್ತು. ಅದನ್ನು ಖರ್ಚು ಮಾಡಬೇಕಾಯಿತಲ್ಲಾ ಎಂಬ ಕಳವಳದಿಂದ ಪ್ರೇರಿತಳಾಗಿ ನಾನು ಮಾನವತೆಯನ್ನೂ ತ್ಯಜಿಸಿ ಶುದ್ಧ ಪಶುವಿನಂತೆ ವರ್ತಿಸಿದೆ. ಅವರಿಗೆ ಜೀವ ಬೇಸರವಾಗುವವರೆಗೂ ಅವರನ್ನು ಹೀಯಾಳಿಸಿದೆ. ಅವರು ಎಲ್ಲವನ್ನೂ ಸಹಿಸಿದರು. ನನಗೆ ಒಂದು ಸಲವೂ ಎದುರುತ್ತರ ಕೊಡಲಿಲ್ಲ, ಬೆದರಿಸಲಿಲ್ಲ, ಬಯ್ಯಲಿಲ್ಲ. ನನ್ನ ಮೇಲೆ ಅವರು ಕೈಯೆತ್ತುವುದಂತೂ ಅವರ ಸ್ವಭಾವಕ್ಕೇ ವಿಸಂಗತವಾದ ಮಾತಾಗಿತ್ತು.

ನನ್ನಲ್ಲಿದ್ದ ಹಣ ಕರಗುತ್ತ ಬಂದ ಹಾಗೆ ಹೇಗಾದರೂ ಮಾಡಿ ದುಡ್ಡು ಗಳಿಸಬೇಕೆಂಬ ಹಂಬಲು ಬಲವಾಗತೊಡಗಿತು. ಕಾಶಪ್ಪನಿಲ್ಲವಾದರೆ ಇನ್ನೊಬ್ಬ ಮಾಸೆಪ್ಪ. ಜಗತ್ತಿನಲ್ಲಿ ಗಂಡಸರಿಗೇನು ಕೊರತೆಯೇ? ಕೈಯಲ್ಲಿ ನಾಲ್ಕು ಕಾಸು ಹೆಚ್ಚಾಗಿ ಕುಣಿಯತೊಡಗುತ್ತಲೂ ಕಾಮಿನಿಯರನ್ನು ಹುಡುಕುವ ಜಾತಿ ಗಂಡಸರದು. ನನ್ನಂಥ ಬಿಂಕದ ಸಿಂಗಾರಿ ಲಭಿಸುವುದು ಸಾಧ್ಯವಿದ್ದಾಗ ಪ್ರಯತ್ನಿಸದೆ ಸುಮ್ಮನಿರುವರೇ ಅವರು?

ನಾನು ಅತ್ತಿತ್ತ ಕಣ್ಣು ಹೊರಳಿಸತೊಡಗಿದೆ. ನನ್ನ ಗಾಳಕ್ಕೆ ಸಿಕ್ಕಿಬೀಳುವ ಮೀನುಗಳೆಲ್ಲಿರಬಹುದು? ಮನೆಯವರಿಗೆ ಗೊತ್ತಾಗದಂತೆ, ಕಾಶಪ್ಪ ಮತ್ತು

ಈರವ್ವ ಇವರಿಗೂ ಗೊತ್ತಾಗದಂತೆ ಆ ಕೆಲಸ ನಡೆಯಬೇಕು. ಸುಲೋಚನೆಗೂ ಸಂದೇಹ ಬರಬಾರದು. ಕುಮಾರನಿಗೂ ಗೊತ್ತಾಗಬಾರದು. ಅವರಿಬ್ಬರೂ ಮನೆಯಲ್ಲಿಲ್ಲದ ವೇಳೆಯಲ್ಲಿ ಈ ಆಟ ಸಾಗಬೇಕು. ಮಕ್ಕಳಿಲ್ಲದ ಮನೆಯಲ್ಲಿ ಏನು ಮಾಡಿದರೂ ನಡೆಯುತ್ತದೆ; ಮಕ್ಕಳಿರುವ ಮನೆಯಲ್ಲಿ ಮೈಯೆಲ್ಲ ಕಣ್ಣಾಗಿ ಮಾಡಬೇಕಾಗುತ್ತದೆ.

ನಾನು ನೋಡಿದೆ, ನೋಡಿದೆ. ನನ್ನ ಬಲೆಗೆ ಬೀಳಬಲ್ಲ ಪುರುಷ ಮೃಗ ಯಾವುದೂ ಕಾಣಿಸಲಿಲ್ಲ. ನನಗೆ ನಿರಾಸೆಯಾಗತೊಡಗಿತು. ಬಾಳಿನಲ್ಲಿ ಬೇಸರು ಹುಟ್ಟತೊಡಗಿತು.

ಆ ಮನಃಸ್ಥಿತಿಯಲ್ಲಿ ನಾನಿರುವಾಗಲೇ ಒಂದು ದಿನ, ಅಕಸ್ಮಾತ್ತಾಗಿ ಒಂದು ಮಿಕ ನನ್ನ ಹಳ್ಳಕ್ಕೆ ಬಿತ್ತು.

# ೨೭

ಅಂದು ರಾತ್ರಿ ಅವರು ಊಟ ಮಾಡಿ, ಸುಲೋಚನೆ ಮತ್ತು ಕುಮಾರ ಇಬ್ಬರನ್ನೂ ಸಂಗಡ ಕರೆದುಕೊಂಡು ತಮ್ಮ ತಂದೆಯ ಮನೆಗೆ ಹೋಗಿದ್ದರು. ಈಚೆಗೆ ಅವರು ಹಾಗೆ ಹೋಗುತ್ತಿದ್ದುದಿತ್ತು. ರಾತ್ರಿ ಹೋದವರು ಬೆಳಗಾದ ತರುವಾಯವೇ ಮರಳಿ ಬರುತ್ತಿದ್ದರು.

ನಾನೂ ಊಟ ತೀರಿಸಿಕೊಂಡು ವಿಮಲೆಯನ್ನು ಮಲಗಿಸಿ, ಕೊಂಚ ಹೊತ್ತು ಹೊರಗಡೆ ಕುಳಿತುಕೊಳ್ಳೋಣವೆಂದು ಕಟ್ಟೆಗೆ ಬಂದೆ. ಪ್ರಶಾಂತವಾದ ರಾತ್ರಿ. ಹುಣ್ಣಿಮೆಯ ಹತ್ತಿರದ ದಿನವಾದುದರಿಂದ ಸೊಗಸಾದ ಬೆಳುದಿಂಗಳು ಹರಡಿಕೊಂಡಿತ್ತು. ಅದನ್ನು ನೋಡಿದಾಗ ಮನಸ್ಸಿಗೆ ಎಷ್ಟೋ ಹಾಯೆನ್ನಿಸಿತು. ಇವರ ಬಂಗಾರದ ಪ್ರಕರಣ ನಡೆದ ಬಳಿಕ ನಾನು ಬೆಳುದಿಂಗಳಲ್ಲಿ ಬಂದು ಕುಳಿತುದು ಅದೇ ದಿನ. ಅತ್ತಿತ್ತ ಹೊರಳುತ್ತಿದ್ದ ನನ್ನ ದೃಷ್ಟಿ, ನಮ್ಮ ಮನೆಯೆದುರಿಗೆ, ನಾಲ್ಕಾರು ಮನೆಗಳ ಆಚೆ ಎತ್ತರದಲ್ಲಿದ್ದ ಮಹಡಿಯೊಂದರ ಕಡೆ ಹರಿಯಿತು. ಅಲ್ಲಿ ಪ್ರಖರವಾದ ವಿದ್ಯುದ್ದೀಪಗಳು ಬೆಳಗುತ್ತಿದ್ದುವು. ಕೆಲ ದಿನಗಳ ಹಿಂದೆಯಷ್ಟೇ ಒಬ್ಬ ಫೌಜದಾರರು ಆ ಮನೆಯನ್ನು ಬಾಡಿಗೆಗೆ ಹಿಡಿದು ಅಲ್ಲಿ ನೆಲಸಿದ್ದರೆಂಬುದು ನನಗೆ ಗೊತ್ತಿತ್ತು. ನಮ್ಮವರನ್ನು ಬಂಗಾರದ ಪ್ರಕರಣದಲ್ಲಿ ಬಂಧಿಸಿದ ಫೌಜದಾರರೇ ಅವರೆಂತಲೂ ಗೊತ್ತಾಗಿತ್ತು. ಅದಕ್ಕಿಂತ ಹೆಚ್ಚಿಗೆ ಅವರ ಬಗೆಗೆ ವಿಚಾರಿಸಲು ಅವಕಾಶ ಲಭಿಸಿರಲಿಲ್ಲ.

ನಾನು ಆ ಮಹಡಿಯ ಕಡೆಗೆ ನೋಡುತ್ತಿದ್ದ ಹಾಗೇ ಅಲ್ಲಿಯ ಬಾಗಿಲಲ್ಲಿ ಒಬ್ಬ ಗಂಡಸು ನಿಂತುಕೊಂಡು ನಮ್ಮ ಮನೆಯ ಕಡೆಗೇ ದೃಷ್ಟಿಸುತ್ತಿದ್ದುದೂ

ನನ್ನನ್ನು ಕಂಡು ಕೈಬೀಸಿ ಸಂಜ್ಞೆ ಮಾಡುತ್ತಿದ್ದುದೂ ಕಾಣಿಸಿತು. ನನ್ನನ್ನು ಆತ ತನ್ನ ಮನೆಗೆ ಕರೆಯುತ್ತಿರಬೇಕೆಂದೆನ್ನಿಸುತ್ತಲೂ ಒಂದು ಕ್ಷಣ ನನಗೆ ಗಾಬರಿಯಾಯಿತು. ಫೌಜದಾರನೇ ಇರಬೇಕು ಆತ. ನನಗೇಕೋ ಅಲ್ಲಿ ಕುಳಿತಿರಲು ಮನಸ್ಸಾಗಲಿಲ್ಲ. ಎದ್ದು ಒಳಗೆ ಹೋಗಿ ಹೊರಬಾಗಿಲನ್ನು ಮುಚ್ಚಿ ಚಿಲಕ ಹಾಕಿ ಕೊಠಡಿಗೆ ಬಂದು ಮಂಚದ ಮೇಲೊರಗಿದೆ. ಆದರೆ, ಕುತೂಹಲವನ್ನು ತಡೆಹಿಡಿಯಲಾಗಲಿಲ್ಲ. ಕಿಟಕಿಯಲ್ಲಿಣಿಕಿ ನೋಡಿದೆ. ಆತನಿನ್ನೂ ಮಹಡಿಯ ಬಾಗಿಲಲ್ಲೇ ನಿಂತುಕೊಂಡಿದ್ದ, ನನ್ನನ್ನೇ ಹುಡುಕುತ್ತಿದ್ದ. ಆ ಮನೆಗೆ ಬಂದಂದಿನಿಂದ ನನ್ನ ಮೇಲೆ ಅವನ ದೃಷ್ಟಿ ಬಿದ್ದಿರಬಹುದೆಂದು ನನಗೆನ್ನಿಸಿತು. ಪೋಲೀಸ್ ಖಾತೆಯಲ್ಲಿ ಇಂಥವರು ಬಹಳ ಮಂದಿ.

ಆ ಫೌಜದಾರರು ಮುಸಲ್ಮಾನರವರೆಂಬುದೂ ಅವರ ಹೆಸರು ಅಬ್ದುಲ್ ಖಾನ್ ಎಂಬುದೂ ನನಗೆ ಗೊತ್ತಿತ್ತು. ಆ ಸಂಗತಿಯನ್ನು ನಮ್ಮವರೇ ನನಗೆ ತಿಳಿಸಿದ್ದರು. ಅಬ್ದುಲ್‌ಖಾನ್ ಸಾಕಷ್ಟು ಲಂಚ ಹೊಡೆದು ಚೆನ್ನಾಗಿ ಸಂಪಾದನೆ ಮಾಡಿರಬೇಕೆಂದೂ ನಾನು ತಿಳಿದಿದ್ದೆ. ಅಂತೂ ನಾನು ಅವರ ದೃಷ್ಟಿಯನ್ನು ಸೆಳೆದಂತಾಯಿತು. ನಾನು ಅನೇಕ ದಿನಗಳಿಂದ ನಿರೀಕ್ಷಿಸಿಕೊಂಡಿದ್ದ ಸಂದರ್ಭವೂ ಬಂದಂತಾಯಿತೆಂದು ಸ್ವಲ್ಪ ಸಮಾಧಾನವಾಯಿತು. ಆದರೆ, ಮರುಕ್ಷಣವೇ ಯೋಚನೆ: ಅವರ ಹತ್ತಿರ ದುಡ್ಡೇನೋ ಇರಬಹುದು. ಆದರೆ, ಬೇರೆಯವರಿಂದ ದುಡ್ಡು ಸೆಳೆಯುವ ಚಟ ಕಲಿತುಕೊಂಡು ಈ ಫೌಜದಾರರು ನನಗೆ ದುಡ್ಡು ಕೊಡಬಲ್ಲರೇ? ಪೋಲೀಸ್ ಖಾತೆಯ ಜನರು ಬಹಳ ಧೂರ್ತರೆಂದು ಕೇಳಿದ್ದೇನೆ. ಸವಿಸವಿ ಮಾತಾಡಿ ಕಾರ್ಯ ಸಾಧಿಸಿಕೊಂಡ ತರುವಾಯ ಕೈಕೊಡುವುದೇ ಅವರ ಪದ್ಧತಿಯಂತೆ. ಅಬ್ದುಲ್ ಖಾನರೂ ಪಳಗಿರಬಹುದು ಈ ವಿದ್ಯೆಯಲ್ಲಿ....

ನಮ್ಮ ಮನೆಯಲ್ಲೂ ಇನ್ನೂ ದೀಪ ಉರಿಯುತ್ತಿತ್ತು. ಅದರ ಬೆಳಕಿನಲ್ಲಿ, ನಾನು ಕಿಟಕಿಯಲ್ಲಿ ನಿಂತುಕೊಂಡಿದ್ದುದನ್ನು ಅವರ ತೀಕ್ಷ್ಣ ದೃಷ್ಟಿ ಕಂಡುಕೊಂಡಿರಲು ಸಾಕು. ಅವರು ಸ್ವಲ್ಪ ಮುಂದೆ ಬಂದು ಮತ್ತೊಂದು ಬಾರಿ ಕೈ ಮಾಡಿದರು. ಏನು ಮಾಡಬೇಕೆಂಬುದು ತಿಳಿಯದೆ ನಾನು ಹಾಗೇ ನಿಂತು

ಕೊಂಡಿದ್ದೆ. ಆಕಾಶದಲ್ಲಿ ಹಕ್ಕಿಗಳು ಹಾರಿಹೋಗುವ ಹಾಗೆ ನನ್ನ ಮನಸ್ಸಿನಲ್ಲಿ ಯೋಚನೆಗಳು ಹಾರುತ್ತಿದ್ದುವು. ಅಬ್ದುಲ್ ಖಾನರು ಮುಸಲ್ಮಾನರು. ಅವರೊಡನೆ ಕೂಡುವುದರಿಂದ ಜಾತಿ ಕೆಡಲಿಕ್ಕಿಲ್ಲವೇ? ಕಾಶಪ್ಪನೇನೋ ನಮ್ಮ ಜಾತಿಯವನೇ. ಅವನೊಡನೆ ನಡೆದದ್ದು ನಡೆಯಿತು. ಆದರೆ ಈ ಅಬ್ದುಲ್ ಖಾನರೊಡನೆ....

ಆ ಯೋಚನೆಯ ಹಿಂದೆಯೇ ಇನ್ನೊಂದು ಬಗೆಯ ಯೋಚನೆ: ಅವರು ಮುಸಲ್ಮಾನರೆಂಬುದೇನೋ ನಿಜ. ಆದರೇನಾಯಿತು? ನಾನೇನು ಅವರಲ್ಲಿ ಊಟ ಮಾಡುವುದಿಲ್ಲವಲ್ಲ? ಕೇವಲ ಸಂಗ ಮಾಡಿದಷ್ಟಕ್ಕೇ ಜಾತಿ ಹೇಗೆ ಕೆಡುತ್ತದೆ? ಎಷ್ಟೋ ಮಂದಿ ಹೆಂಗಸರು ತಮ್ಮ ಜಾತಿಯವರಲ್ಲದ ಗಂಡಸರನ್ನಿಟ್ಟುಕೊಂಡಿಲ್ಲವೆ? ಅಲ್ಲದೆ, ನಾನು ಇವರ ಸಹವಾಸ ಮಾಡುವುದು ಹಣಕ್ಕಾಗಿ. ನಾನೇನು ಅವರನ್ನೇ ಮದುವೆಯಾಗುವುದಿಲ್ಲ. ಪರಪುರುಷರ ಸಂಗ ಮಾಡುವುದರಿಂದ ಶೀಲವೇ ಕೆಟ್ಟು ಹೋಗುವಾಗ ಇನ್ನು ಜಾತಿಯ ಮಾತೇನು! ಕಾಶಪ್ಪನ ಗೆಳೆತನವಾದಾಗಲೇ ನಾನು ಕೆಟ್ಟು ಹೋದಂತಾಗಿದೆ. ಸರಿ. ಮೊದಲೇ ಕೆಟ್ಟು ಹೋದವಳು ಇನ್ನಷ್ಟು ಕೆಡುವುದು. ಅದರಲ್ಲೇನೂ ಮಹತ್ವವಿಲ್ಲ....

"ಹಾಗಾದರೆ ನಿನಗೂ ಸೂಳೆಗೂ ಏನು ಅಂತರ?" ಎಂದು ಸವಾಲು ಹಾಕಿತು ಒಂದು ಯೋಚನೆ.

ಒಂದು ಕ್ಷಣ ನನ್ನ ಮೈ ಕಂಪಿಸಿತು. ಸೂಳೆ! ಹಣಕ್ಕಾಗಿ ದೇಹ ವಿಕ್ರಯಿಸುವ ಸೂಳೆ! ನಾನು....ನಾನೂ ಸೂಳೆಯೇ?

"ಹೌದು. ಹೌದು. ನೀನೂ ಸೂಳೆ. ಅದರಲ್ಲೇನು ಸಂಶಯ? ಪೇಟೆಯಲ್ಲಿ ಅಂಗಡಿಯಿಟ್ಟು ಸೂಳೆ ಬಹಿರಂಗವಾಗಿಯೇ ತನ್ನ ಮೈ ಮಾರಿಕೊಳ್ಳುತ್ತಾಳೆ. ನೀನು ಯಾರಿಗೂ ಗೊತ್ತಾಗದಂತೆ ಗುಟ್ಟಾಗಿ ಮಾರಿಕೊಳ್ಳುವಿ. ಇಷ್ಟೇ ಅಂತರವಲ್ಲವೇ ಅವಳಿಗೂ ನಿನಗೂ?"

ಆ ವಾದಕ್ಕೆ ಪ್ರತಿ ಹೇಳಲು ಸಾಧ್ಯವಾಗಲಿಲ್ಲ. ಆ ಮಾತನ್ನು ನಾನು ಒಪ್ಪಿಕೊಳ್ಳಲೇಬೇಕಾಯಿತು.

" ನಿಜ. ನಾನೂ ಸೂಳೆಯೇ. ನಾನೊಬ್ಬಳೇ ಯಾಕೆ? ಇಂದಿನ ಸಮಾಜದಲ್ಲಿನ ಹೆಂಗಸರೆಲ್ಲ ಸೂಳೆಯರೇ. ನನ್ನ ಹಾಗೇ ಎಷ್ಟು ಜನ ಸ್ತ್ರೀಯರು ತಮ್ಮ ಪುರುಷರಿಗೆ ಗೊತ್ತಾಗದಂತೆ ವ್ಯಭಿಚಾರ ನಡಸುತ್ತಿಲ್ಲ? ವ್ಯಭಿಚಾರಕ್ಕಿಳಿಯದಿದ್ದವರಲ್ಲಾದರೂ ಎಷ್ಟು ಜನರು ತಮ್ಮ ಪುರುಷರನ್ನು ಮನಃಪೂರ್ವಕವಾಗಿ ಪ್ರೀತಿಸುತ್ತಿರಬಹುದು? ತಮ್ಮ ನೈಸರ್ಗಿಕ ಆಸೆ ತೃಪ್ತವಾಗದ ಸ್ತ್ರೀಯರೆಷ್ಟು ಜನರು ಮನಸ್ಸಿನಲ್ಲೇ ತಮ್ಮ ದೈವವನ್ನು ಹಳಿಯುತ್ತಿರಬಹುದು! ಈ ಕಲಿಯುಗದಲ್ಲಿ, ದುಡ್ಡೇ ದೊಡ್ಡಪ್ಪನಾಗಿರುವ ಈ ಪ್ರಪಂಚದಲ್ಲಿ ಪುರಾಣಕಾಲದ ಪತಿವ್ರತೆಯರ ಹಾಗೆ ಬಾಳುವೆ ಮಾಡುತ್ತಿರುವವರು ಎಷ್ಟು ಜನರಿರಬಹುದು?"

ನನ್ನ ಕೃತ್ಯವನ್ನು ಸಮರ್ಥಿಸಿಕೊಳ್ಳುವುದಕ್ಕಾಗಿ ಜಗತ್ತಿಗೇ ಆಹ್ವಾನವೀಯುತ್ತಿದ್ದೆ ನಾನು!

ನನಗೆ ಬಹಳ ಧೈರ್ಯ ಬಂದಂತಾಯಿತು. ಫೌಜದಾರರು ಮುಂದೇನು ಮಾಡುವರೆಂಬುದನ್ನೇ ನಿರೀಕ್ಷಿಸುತ್ತಾ ನಿಂತುಕೊಂಡೆ. ಕೈಗೆ ಬಂದ ಹಕ್ಕಿಯನ್ನು ಬಿಡಬಾರದು. ನಮ್ಮ ಮನೆತನಕ್ಕೆ ಬಂದೊದಗಿದ ವಿಪತ್ತು ಈ ಫೌಜದಾರರಿಂದ ನಿವಾರಣೆಯಾಗಲೂ ಸಾಧ್ಯ. 'ಅವರ' ಮೇಲಿನ ಖಟ್ಲೆಯನ್ನೂ ಈತ ರದ್ದುಗೊಳಿಸಬಹುದೋ ಏನೊ. ಮನಸ್ಸು ಮಾಡಿದರೆ ಏನನ್ನು ಸಾಧಿಸಲಾರರು ಈ ಪೋಲೀಸ್ ಖಾತೆಯ ಜನರು!

ನಾನು ಮತ್ತೆ ಬಾಗಿಲು ತೆರೆದು ಕಟ್ಟೆಗೆ ಬಂದೆ. ತಂದೆಯ ಮನೆಯಲ್ಲಿದ್ದ 'ಅವರ' ಭಯವಂತೂ ಇರಲೇ ಇಲ್ಲ. ಸರಿ. ಇನ್ನಾರು ಕೇಳುವವರು? ಓಣಿಯ ಬಾಗಿಲುಗಳೆಲ್ಲ ಮುಚ್ಚಿಕೊಂಡಿದ್ದುವು. ಕಾಶಪ್ಪನ ಮನೆಯಿಂದಲೂ ಬೆಳಕು ಕಾಣುತ್ತಿರಲಿಲ್ಲ. ಸುಮಾರು ಹನ್ನೊಂದು ಗಂಟೆಯ ಸಮಯ. ನಾನು ಹೊರಗೆ ಬಂದೊಡನೆಯೇ ಫೌಜದಾರರು ಮತ್ತೆ ಕೈ ಬೀಸಿದರು. ನನಗರಿವಾಗದ ಹಾಗೇ ನನ್ನ ಬಲಗೈಯೂ ಮೇಲಕ್ಕೆ ಹೋಯಿತು. ಅದು ಹೆಣ್ಣಿಗೆ ತಕ್ಕ ನಡತೆಯಲ್ಲವೆನ್ನಿಸಿ ಕೊಂಚ ನಾಚಿಕೆಯಾಯಿತಾದರೂ ನಾನು ಆಗ ಹಿಂದೇಟು ಹಾಕುವಂತಿರಲಿಲ್ಲ. ಫೌಜದಾರರು ಒಡನೆಯೇ ಅಟ್ಟದಿಂದಿಳಿದು ನಮ್ಮ ಮನೆಯೆದುರಿಗೆ ಬಂದು ನಿಂತುಕೊಂಡರು. ನಾನು ಒಳ ಸೇರಿದೆ. ಅವರೂ ಬಹಳ ಗಟ್ಟಿ

ಗರು. ನನ್ನ ಹಿಂದೆಯೇ ಮನೆಯಲ್ಲಿ ನುಗ್ಗಿ, ಬಾಗಿಲು ಮುಚ್ಚಿ, ನನ್ನನ್ನು ಬಿಗಿಯಾಗಿ ಹಿಡಿದು ಚುಂಬಿಸಿದರು. ಮೊದಲಿನ ಒಂದು ಕ್ಷಣ ಜೀವ ಕಸಿವಿಸಿಗೊಂಡಂತಾಯಿತು. ಅವರ ಹಿಡಿತದಿಂದ ಬಿಡುಗಡೆ ಹೊಂದಲು ಯತ್ನಿಸಿದೆ. ಅವರು ಮಾತ್ರ ನನ್ನನ್ನು ಬಿಡುವ ಮನಃಸ್ಥಿತಿಯಲ್ಲಿರಲಿಲ್ಲ. ಚುಂಬನದ ಕಾವೇರಿದ ಹಾಗೇ ನಾನೂ ತಟಸ್ಥಳಾದೆ. ಒದ್ದಾಟ ನಿಂತುಹೋಯಿತು. ಎಷ್ಟು ಮೋಹಕವಾಗಿತ್ತು ತಾಯಿ, ಅವರ ಚುಂಬನದ ರೀತಿ! ಇವರಾಗಲಿ, ಕಾಶಪ್ಪನಾಗಲಿ ನನ್ನನ್ನು ಹಾಗೆ ಎಂದೂ ಚುಂಬಿಸಿರಲಿಲ್ಲ. ನಾನು ನೋಡಿದ ಇಂಗ್ಲಿಷ್ ಚಿತ್ರಪಟಗಳಲ್ಲಿನ ನಾಯಕರು ಚುಂಬಿಸುವ ರೀತಿಯಲ್ಲಿಯೇ ಅಬ್ದುಲ್ ಖಾನರೂ ನನ್ನನ್ನು ಚುಂಬಿಸುತ್ತಿದ್ದರು. ನನ್ನ ದೇಹವೆಲ್ಲ ನಡುಗಿತು – ಸುಖದ ಉತ್ಕಟತೆಯಿಂದ. ಅದು ಸುಖವೋ ದುಃಖವೋ ಆನಂದವೋ ಉನ್ಮಾದವೋ ಯಾವುದೂ ಅರ್ಥವಾಗಲಿಲ್ಲ. ನನ್ನ ಇರುವಿಕೆಯನ್ನೇ ನಾನು ಮರೆಯುವಂತಾಗಿತ್ತು. ಈ ಲೋಕವನ್ನು ದಾಟಿ ಬೇರಾವುದೋ ಲೋಕವೊಂದರಲ್ಲಿ ನಾನು ಸಂಚರಿಸುತ್ತಿದ್ದ ಹಾಗಾಗಿತ್ತು. ಅದೇನು ಸ್ವರ್ಗಲೋಕವೋ? ಇಂದ್ರಲೋಕವೋ? ಚಂದ್ರ ಲೋಕವೋ?

ಎರಡು ನಿಮಿಷಗಳ ಕಾಲ ನನ್ನ ತುಟಿಗಳನ್ನು ಹೀರಿಕೊಳ್ಳುತ್ತಿದ್ದು ಅನಂತರ ಅವರು ನನ್ನ ಮುಖವನ್ನು ಬಿಟ್ಟರು. ನಾನು ಹುಚ್ಚಿಯಂತಾಗಿ ಹೋಗಿದ್ದೆ. "ಇನ್ನೊಮ್ಮೆ ಚುಂಬಿಸಿರಿ, ಇನ್ನೊಮ್ಮೆ ಹಾಗೇ ಚುಂಬಿಸಿರಿ," ಎಂದು ಕೇಳಿಕೊಳ್ಳುವಷ್ಟು ಹುಚ್ಚಿಯಾಗಿದ್ದೆ.

ಅವರೇ ಮಾತಿಗಾರಂಭಿಸಿದರು:

"ನಿಮ್ಮ ಮನೆಯವರ ವ್ಯಾಲ ಖಟ್ಲೆಯಾಗಿದೆಯಲ್ಲವೆ? ನಿಮಗೂ ಬಹಳ ದುಃಖವಾಗಿರಬಹುದು. ಈ ಪ್ರಸಂಗದಿಂದ ನಿಮ್ಮನ್ನು ಪಾರುಮಾಡಲು ನನ್ನ ಕೈಲಾದದ್ದು ಮಾಡುತೀನಿ."

ನಾನು ಮೂಕಳಂತೆ ನಿಂತುಕೊಂಡಿದ್ದೆ. ಅವರು ನನಗೆ ಪೂರ್ಣವಾಗಿ ಅಪರಿಚಿತರು. ಅವರೊಡನೆ ನಾನು ಮಾತಾಡುವುದಾದರೂ ಹೇಗೆ?

ಅವರು ನನ್ನಂಥ ಎಷ್ಟು ಹೆಣ್ಣುಗಳನ್ನು ಕಂಡಿದ್ದರೋ! ನನ್ನ ಮನಃಸ್ಥಿತಿ

ಯನ್ನು ತಕ್ಷಣ ಗುರುತಿಸಿಕೊಂಡು, ಮಾತು ನಿಲ್ಲಿಸಿ, ಮತ್ತೆ ನನ್ನನ್ನು ಬರ ಸೆಳೆದು ತಬ್ಬಿಕೊಂಡು ಚುಂಬಿಸುತ್ತಾ ಮಂಚದ ಕಡೆ ನಡೆದರು. ಗಾಳಿಯೊಡನೆ ಓಡುವ ಮೋಡದಂತೆ ನಾನು ಅವರೊಡನೆ ನಡೆದಿದ್ದೆ. ಅವರೇನನ್ನು ಮಾಡುತ್ತಿದ್ದಾರೆ, ನಾನೇನನ್ನು ಮಾಡುತ್ತಿದ್ದೇನೆ – ಯಾವುದೂ ತಿಳಿಯದಂತಾಗಿತ್ತು. ಅವರಿಂದ ಹಣ ಕಿತ್ತುಕೊಂಡ ತರುವಾಯವೇ ಅವರಿಗೆ ದೇಹ ಒಪ್ಪಿಸಬೇಕೆಂಬ ಅರಿವೂ ನನಗಿಲ್ಲದಾಗಿತ್ತು. ನನ್ನ ಬಾಯಿಂದ ಒಂದು ಶಬ್ದವೂ ಹೊರಡಲಿಲ್ಲ. ಅವರೂ ಮತ್ತೆ ಮಾತಾಡಲಿಲ್ಲ.

ದೀಪ ಚಿಕ್ಕದಾಯಿತು.

ಸ್ವಲ್ಪ ಹೊತ್ತಿನ ತರುವಾಯ ಅವರು ಹೊರಡಲನುವಾದರು.

"ನಿಮ್ಮನ್ನ ನೋಡಿದಂದಿನಿಂದ ನನ್ನ ಮನಸು ನಿಮ್ಮನ್ನೇ ಹುಡುಕುತ್ತಿತ್ತು. ಇವತ್ತು ಇಬ್ಬರೂ ಕೂಡಿದೆವು. ನಾಳೆ ನಮ್ಮ ಮನೆಯ ಕಡೆ ಹಾಯುತ್ತೀರಾ? ಸ್ವಲ್ಪ ರೂಪಾಯಿ ಕೊಡುತೀನಿ."

ಆಗಲೂ ನನ್ನ ಬಾಯಿಂದ ಮಾತು ಬರಲಿಲ್ಲ.

"ನಮ್ಮ ಮನೆಯ ಅಂಗಳದಲ್ಲಿ ನಳ ಇದೆ. ಸುತ್ತಮುತ್ತಲಿನ ಹೆಂಗಸರು ನೀರಿಗಾಗಿ ಬರುತಿರುತಾರೆ. ನೀವೂ ಬರ್ರಿ. ಒಂದು ಕವರಿನಲ್ಲಿ ನೋಟು ಹಾಕಿ ಕೆಳಗೆ ಚೆಲ್ಲುತೀನಿ. ನೀವು ತಗೊಳ್ಳಬಹುದು. ನಮ್ಮ ಮನೆಯಲ್ಲೂ ಯಾರೂ ಇಲ್ಲ. ಊರಿಗೆ ಹೋಗಿದಾರೆ. ನೀವೇನೂ ಯಾರಿಗೂ ಅಂಜಬೇಕಾಗಿಲ್ಲ," ಎಂದು ಹೇಳಿ ಮತ್ತೊಮ್ಮೆ ನನ್ನನ್ನು ಚುಂಬಿಸಿ ಅವರು ಹೊರಟುಹೋದರು.

ಬಾಗಿಲಿಗೆ ಚಿಲಕ ಹಾಕಿ ಬಂದು, ಮುದುಡಿಹೋದ ಹಾಸುಗೆಯನ್ನು ಸರಿಪಡಿಸಿ, ಕೆದರಿದ ತಲೆಗೂದಲನ್ನು ಬಿಡಿಸಿ ಬಿಗಿಯಾಗಿ ಕಟ್ಟಿಕೊಂಡು ದೀಪವನ್ನಾರಿಸಿ ಮಲಗಿಕೊಂಡೆ. ಅಲ್ಪಾವಧಿಯಲ್ಲಿಯೇ ನಿದ್ದೆ ಬಂದು ನನ್ನನ್ನು ಸ್ವಪ್ನ ಪ್ರಪಂಚಕ್ಕೆ ಕೊಂಡೊಯ್ದಿತು. ಕನಸಿನಲ್ಲೂ ಫೌಜದಾರರ ಮುಖವೇ. ನಲವತ್ತರ ಪ್ರಾಯದ ಹೃಷ್ಟಪುಷ್ಟ ಶರೀರ: ತುಂಬಿದ ಮುಖ. ಎತ್ತರವಾದ ಹಣೆ. ನೇರವಾದ ಮೂಗು. ಸುಂದರ ಪುರುಷನಿಗಿರಬೇಕಾದ ಸಮಸ್ತ ಲಕ್ಷಣಗಳು. ಶೂರ ಪುರುಷನಲ್ಲಿರುವ ಶಕ್ತಿ ಚುಂಬನ ಮಾತ್ರದಿಂದಲೇ ಸ್ತ್ರೀಯರನ್ನು

ಪರಾಜಿತಗೊಳಿಸುವಂಥ ಶಕ್ತಿ. ಕನಸು....ಕನಸು....ಸವಿಗನಸು....ಬೆಳಗಾಗಿ ಎಚ್ಚರವಾದಾಗ ಅದೆಲ್ಲವೂ ಮರೆತುಹೋಗಿತ್ತು. ಆದರೂ ದೇಹದಲ್ಲಿ ಏನೋ ಒಂದು ಹೊಸ ಚೇತನ.

ನಾನು ಚಹಕ್ಕೆ ಎಸರಿಡುತ್ತಿದ್ದ ಹಾಗೆ ಅವರು ಮತ್ತು ಹುಡುಗರು ಬಂದರು. ಅವರಿಗೆಲ್ಲ ಚಹ ಕೊಟ್ಟು, ನಾನೂ ಕುಡಿದು, ನಳದಲ್ಲಿ ನೀರು ಬರುವ ಸಮಯವಾಗುತ್ತಲೂ ಮೊದಲು ಈರವ್ವನ ಮನೆಗೆ ಹೋಗಿ ಒಂದೆರಡು ಕೊಡ ತುಂಬಿ ತಂದು ಅನಂತರ ಫೌಜದಾರರ ಮನೆಯ ಕಡೆ ಹೊರಟೆ. ಅಂಗಳದಲ್ಲಿ ನಳವೇನೋ ಇತ್ತು; ನೀರು ತುಂಬುವವರಾರೂ ಇರಲಿಲ್ಲ. ನನಗೆ ಸಂಕೋಚ ವೆನ್ನಿಸದಿರಲಿಲ್ಲ. ನಾನು ಅತ್ತಿತ್ತ ದೃಷ್ಟಿ ಹೊರಳಿಸುವುದರೊಳಗಾಗಿಯೇ ಮೇಲಿ ನಿಂದ ಕವರು ಬಿತ್ತು. ಒಡನೆಯೇ ಅದನ್ನೆತ್ತಿ ಬ್ಲೌಜಿನೊಳಗಡೆ ಸೇರಿಸಿ ಮೇಲಕ್ಕೆ ದೃಷ್ಟಿ ಹೊರಳಿಸಿದೆ. ಮೀಸೆಯನ್ನರಳಿಸುವಂತೆ ಮಂದಹಾಸ ಬೀರುತ್ತಾ ನಿಂತುಕೊಂಡಿದ್ದರು ಫೌಜದಾರರು. ನನ್ನ ಮುಖದ ಮೇಲೂ ಮುಗುಳ್ನಗೆ ಮಿಂಚಿ ಮಾಯವಾಯಿತು. ಲಗುಬಗೆಯಿಂದ ಕೊಡ ತುಂಬಿ ಕೊಂಡು ಮನೆಗೆ ಬಂದೆ. ಕೊಡವನ್ನು ಅಡುಗೆ ಮನೆಯಲ್ಲಿಟ್ಟು, ಕೊಠಡಿಗೆ ಹೋಗಿ ಕವರು ತೆಗೆದು ನೋಡಿದೆ. ಹತ್ತು ರೂಪಾಯಿಯ ಹತ್ತು ನೋಟು ಗಳಿದ್ದುವು. "ಗೆದ್ದೆ!" ಎಂದು ನನಗೆ ನಾನೇ ಹೇಳಿಕೊಳ್ಳುತ್ತಾ ಎಂಭತ್ತು ರೂಪಾಯಿಗಳನ್ನು ಟ್ರಂಕಿಗೆ ಸೇರಿಸಿ ಇಪ್ಪತ್ತು ರೂಪಾಯಿ ಹಿಡಿದುಕೊಂಡು ಪಡಸಾಲೆಗೆ ಬಂದು, ಮನೆಗೆ ಬೇಕಾದ ಸಾಮಾನು ತರುವಂತೆ ಹೇಳಿ ಅವರಿಗೆ ಕೊಟ್ಟೆ. . ಅವರ ಮುಖದ ಮೇಲೆ ಆಶ್ಚರ್ಯದ ಭಾವ ಕಾಣಿಸಿಕೊಳ್ಳದಿರಲಿಲ್ಲ. ಒಂದೆರಡು ರೂಪಾಯಿ ಕೊಡುವುದಕ್ಕೆ ಸಿಡಿಮಿಡಿಗೊಳ್ಳುತ್ತಿದ್ದ ನಾನು ಹಸನ್ಮುಖ ದಿಂದ ಇಪ್ಪತ್ತು ರೂಪಾಯಿ ಕೊಟ್ಟರೆ ಆಶ್ಚರ್ಯವಾಗುವುದೂ ಸ್ವಾಭಾವಿಕವೇ ಆಗಿತ್ತು. ನನ್ನಲ್ಲಿ ಕಂಡು ಬಂದ ಆ ಆಕಸ್ಮಿಕ ಬದಲಾವಣೆಗೆ ಕಾರಣವೇನೆಂದು ಅವರು ಯೋಚಿಸಲಿಲ್ಲ. ನನ್ನ ಬಗೆಗೆ ಯೋಚನೆ ಮಾಡುವುದಕ್ಕೂ ಧೈರ್ಯ ವಿದ್ದಂತಿರಲಿಲ್ಲ ಅವರಲ್ಲಿ....

ಕೈ ಚೀಲಗಳನ್ನು ಹಿಡಿದುಕೊಂಡು ಅವರು ಪೇಟೆಗೆ ಹೊರಟರು.

ಸುಲೋಚನೆ ತಲೆ ಬಾಚಿಕೊಳ್ಳುವುದರಲ್ಲಿ ಮಗ್ನಳಾದಳು. ಕುಮಾರ ಪುಸ್ತಕ ಹಿಡಿದುಕೊಂಡು ಕುಳಿತ. ನಾನು ಮತ್ತೆ ಕೊಠಡಿಗೆ ಹೋಗಿ ಬಾಗಿಲು ಇಕ್ಕಿಕೊಂಡು ಕುಳಿತು ಫೌಜದಾರರಿಗೊಂದು ಚೀಟಿ ಬರೆದೆ :

"ನೀವು ಆದಷ್ಟು ಬೇಗ ನಮ್ಮವರ ಗೆಳೆತನ ಮಾಡಬೇಕು. ಅಂದರೆ ಮಾತ್ರ ನಾನು ನೀವು ಆಗಾಗ ಕೂಡಲು ಶಕ್ಯವಾಗಬಹುದು. ನಾನು ಮತ್ತೆ ನಿಮ್ಮನ್ನು ಕರೆಯುವವರೆಗೆ ನೀವು ಬರಬಾರದು. ಈಗ ನಮ್ಮವರು ಪೇಟೆಗೆ ಹೋಗಿದ್ದಾರೆ. ನೀವೂ ಈಗಿಂದೀಗ ಹೋಗಿ ಪೇಟೆಯಲ್ಲಿ ಅವರನ್ನು ಮಾತಾಡಿಸಿ ಪರಿಚಯ ಬೆಳಿಸಿಕೊಳ್ಳಿರಿ. ನಿಮ್ಮ ಮನೆಗೇ ಅವರನ್ನು ಕರೆದೊಯ್ದು ಖಟ್ಲೆಯ ಬಗ್ಗೆ ಮಾತು ತೆಗೆದು ಅವರನ್ನುಳಿಸುವುದಾಗಿ ಹೇಳಿದರೆ ಸಾಕು, ಮುಂದಿನದೆಲ್ಲ ನಾನು ನೋಡಿಕೊಳ್ಳುವೆ."

ಕೊಡ ತೆಗೆದುಕೊಂಡು ಮತ್ತೆ ಅವರ ನಳದ ಹತ್ತಿರ ಹೋಗಿ, ನನ್ನನ್ನೇ ನೋಡುತ್ತ ನಿಂತುಕೊಂಡಿದ್ದ ಫೌಜದಾರರಿಗೆ ಚೀಟಿಯನ್ನು ತಲಪಿಸಿ ನೀರು ತುಂಬಿಕೊಂಡು ಮನೆಗೆ ಮರಳಿದೆ. ಸ್ವಲ್ಪ ಹೊತ್ತಿನಲ್ಲಿಯೇ ಅವರು ಬಟ್ಟೆ ಧರಿಸಿಕೊಂಡು ಅಟ್ಟವಿಳಿದು ಹೋದುದೂ ಕಾಣಿಸಿತು. ಅಂತೂ ಕಾರ್ಯ ಸಫಲಗೊಂಡಿತೆಂಬ ಸಮಾಧಾನ ನನಗೆ.

ಎಲ್ಲರನ್ನೂ ಬೆದರಿಸಿಕೊಂಡು, ತನ್ನ ಅಧಿಕಾರದ ದುರುಪಯೋಗಮಾಡಿಕೊಳ್ಳುತ್ತಿದ್ದ ಆ ಫೌಜದಾರರೂ ನಾನು ಹೇಳಿದಂತೆ ಕುಣಿಯಲು ಸಿದ್ಧರಾದರಲ್ಲವೇ? ಚೆಲುವೆಯೂ ಯುವತಿಯೂ ಆದ ಹೆಣ್ಣಿನ ಸಾಮರ್ಥ್ಯವೆಂದರೆ ಎಷ್ಟು ಎಂಬುದರ ಸ್ಪಷ್ಟ ತಿಳಿವಳಿಕೆ ನನಗಾಗ ಬಂತು. ಮೋಹಿನಿ ಭಸ್ಮಾಸುರರ ಕತೆಯನ್ನು ನಾನು ಕೇಳಿದ್ದೆ. ಪುರಾಣಕಾಲದ ಮೋಹಿನಿಯೇ ನಾನು, ಫೌಜದಾರ ಭಸ್ಮಾಸುರ ಎಂದುಕೊಂಡು ನನ್ನಷ್ಟಕ್ಕೆ ನಾನೇ ನಕ್ಕೆ. ಈ ಕಲಿಯುಗದ ಭಸ್ಮಾಸುರನನ್ನು ಜಾಣ್ಮೆಯಿಂದ ಉಪಯೋಗ ಮಾಡಿಕೊಂಡು ನಮ್ಮವರ ಮೇಲಿನ ಸಂಕಟವನ್ನು ಹೋಗಲಾಡಿಸುವುದಲ್ಲದೆ, ಇದುವರೆಗೆ ಅವರಿವರಿಂದ ಲಂಚ ತಿಂದು ಅವನು ಕೂಡಿಸಿದ ಹಣವನ್ನೆಲ್ಲ ಕಿತ್ತುಕೊಳ್ಳಬೇಕೆಂದು ನಿಶ್ಚಯಿಸಿದೆ.

ನಾನು ಅಡುಗೆ ಮಾಡುತ್ತಲಿದ್ದ ಹಾಗೇ ಇವರು ಪೇಟೆಯಿಂದ ಬಂದರು. ಪೇಟೆಯಿಂದ ತೆಗೆದುಕೊಂಡು ಬಂದ ಸಾಮಾನುಗಳನ್ನು ಅಲ್ಲಲ್ಲಿ ಇಟ್ಟು ಫೌಜದಾರರ ಪ್ರಸ್ತಾಪವೆತ್ತಿದರು.

"ಇದೇ ಈಗ ಹಾದಿಯೊಳಗೆ ಭೆಟ್ಟಿಯಾಗಿದ್ದರು. ಬಹಳ ಒಳ್ಳೆಯ ಮನುಷ್ಯ. ನಮಗೆ ಮಕ್ಕಳು ಮರಿ ಇರುವದನ್ನ ಕೇಳಿ ಬಹಳ ನೊಂದು ಕೊಂಡರು. ಖಟ್ಲೆ ಬಿಡುಗಡೆಯಾಗಲು ಅಪ್ರತ್ಯಕ್ಷವಾಗಿ ಸಹಾಯ ಮಾಡುತೀನಂತ ಹೇಳಿದರು. ಮತ್ತೆ ಮನೆಗೆ ಬಂದು ಭೆಟ್ಟಿಯಾಗಬೇಕಂತ ಹೇಳಿದಾರೆ."

ನನಗೆ ಅತ್ಯಂತ ಸಂತೋಷವಾಯಿತು – ನಾನು ಎಣಿಸಿಕೊಂಡ ಯೋಜನೆ ನಿರ್ವಿಘ್ನವಾಗಿ ಮುಂದುವರಿಯುತ್ತಿದೆಯೆಂದು.

ನಾನು ಹೆಚ್ಚು ಮಾತಾಡಲಿಲ್ಲ.

" ಹೋಗಿ ಬರ್ರಿ ಹಾಗಾದರೆ," ಎಂದು ಹೇಳಿ ಸುಮ್ಮನಾದೆ.

"ಪೋಲೀಸರ ಖಟ್ಲೆಗಳ ಗುಟ್ಟು ಪೋಲೀಸರಿಗೇ ಗೊತ್ತು. ನಮ್ಮಂಥಾ ಸಾಧಾರಣ ಮಂದಿಗೆ ಅದು ತಿಳಿಯುವಂಥಾದ್ದಲ್ಲ. ಮನಸ್ಸು ಮಾಡಿದರೆ ಅವರು ಏನು ಬೇಕಾದರೂ ಮಾಡಬಲ್ಲರು," ಎಂದರವರು.

ತಮಗೆ ತೀರಾ ಅಪರಿಚಿತರಾದ ಫೌಜದಾರರು ಏಕಾಏಕಿಯಾಗಿ ಆ ರೀತಿ ಸಹಾಯಹಸ್ತ ಮುಂದೆ ಚಾಚುವುದರಲ್ಲಿ ಯಾವ ಗುಟ್ಟಿದ್ದಿತೆಂಬುದನ್ನು ಮಾತ್ರ ಇವರು ಯೋಚಿಸಲಿಲ್ಲ.

## ೨೮

ಮಾರನೆಯ ದಿನವೇ ಇವರು ಫೌಜದಾರರ ಮನೆಗೆ ಹೋಗಿ ಬಂದರು.

“ ಏನೇನಾಯಿತು? ಫೌಜದಾರರೇನಂದರು?”

“ ನಾನು ಪಾರಾಗುವ ಹಾಗೇ ಕಾಣುತದೆ ಗಿರಿಜಾ. ದೇವರು ದೊಡ್ಡವನು. ನನಗೇನು ಶಿಕ್ಷೆ ಆಗಲಿಕ್ಕಿಲ್ಲ ಅಂತ ಈಗ ನಂಬಿಕೆ ಬರುತದ.”

“ ಫೌಜದಾರರೂ ಹಾಗಂದರೇನು?”

“ ಹೌದು. ಅವರೂ ಹೇಳಿದರು. ‘ಇದೇನು ದೊಡ್ಡ ಪ್ರಕರಣ? ನೀವೇನು ಅಂಜಬ್ಯಾಡಿರಿ. ಇಂಥಾ ಎಷ್ಟೋ ಪ್ರಕರಣ ನನ್ನ ಕೈಯಲ್ಲಿ ಬಂದು ಆರೋಪಿಗಳು ಬಿಡುಗಡೆಯಾಗಿದಾರೆ. ಸಾಕ್ಷಿ ಪುರಾವೆ ಅದಲುಬದಲು ಮಾಡಿದರಾಯಿತು – ಕರಿಯದನ್ನು ಬಿಳಿಯದೆಂತ ಸಾಧಿಸಿ ತೋರಿಸಬಹುದು’ ಅಂದರು.”

“ ಸಾಕ್ಷಿದಾರರನ್ನ ಒಡೆಯೂದು ಹ್ಯಾಗಂತೆ? ಅವರಂತೂ ಸರ್ರಾಫರ ನಂಬಿಕೆಯ ಮಂದಿ.”

“ ಎಂಥವರನ್ನೂ ಒಡೆಯಬಹುದು ಅಂತಾರೆ ಫೌಜದಾರರು. ಅವರಿಗೆ ಅಶಕ್ಯವಾದದ್ದೇ ಇಲ್ಲವಂತೆ. ‘ಏನಾದರೂ ಪ್ರಯತ್ನಮಾಡಿ ನಿಮ್ಮನ್ನುಳಿಸುತೀನಿ. ನೀವು ಅದರ ಚಿಂತೆಯನ್ನೇ ಬಿಡಿರಿ.’ ಅಂತ ಅಂದರು. ಆದರೆ, ಅದರ ಸಂಗಡ, ಖಟ್ಲೆ ನಡಿಸುವದಕ್ಕೆ ನಾವು ಒಳ್ಳೆ ಜಾಣನಾದ ವಕೀಲನನ್ನೂ ಇಡಬೇಕಾಗುತದೆ ಅಂತ ಹೇಳಿದರು.”

“ ಹೌದು ಮತ್ತೆ! ವಕೀಲರಂತೂ ಬೇಕೇ ಬೇಕಲ್ಲ!”

" ಹೌದು. ಆದರೆ ದೊಡ್ಡ ವಕೀಲರಂದರೆ ಸಾವಿರಾರು ರೂಪಾಯಿ ಫೀ ಕೊಡಬೇಕಾಗುತದಲ್ಲ ಗಿರಿಜಾ."

" ಹೌದು ಮತ್ತೆ ! ಅವರೇನು ಪುಕಟ ಹಿಡೀತಾರೇನು ನಿಮ್ಮ ಖಟ್ಲೆ !"

" ಪುಕಟ ಯಾಕೆ ಹಿಡಿದಾರು ? ಆದರೆ ಇಷ್ಟೊಂದು ರೂಪಾಯಿ ತರೂದು ಎಲ್ಲಿಂದ ?"

" ನೀಲಕ್ಕನ್ನ ಕೇಳಿರಲ್ಲ ! ಗಂಟು ಮಾಡಿಟ್ಟುಕೊಂಡಿದಾಳೆ. ಪ್ರೀತಿಯ ತಮ್ಮನಿಗೆ ಕೊಡದೆ ಇನ್ಯಾರಿಗೆ ಕೊಡುತಾಳೆ !" ಎಂದು ನಾನು ಅಣಕವಾಡಿದೆ.

ಅದಕ್ಕೆ ಅವರು ಪ್ರತಿ ಹೇಳಲಿಲ್ಲ. ಹೇಳಿದರೆ ರಾದ್ಧಾಂತವಾಗುವುದೆಂಬು ದನ್ನು ಬಲ್ಲ ಅವರು ಬಾಯಿ ಮುಚ್ಚಿಕೊಂಡು ಕುಳಿತರು.

" ಫೌಜದಾರರು ಬಹಳ ಚಲೋ ಮನುಷ್ಯ ಅಂತ ಕಾಣುತದಲ್ಲ. ಒಮ್ಮಿಂದೊಮ್ಮೆಲೆ ನಿಮ್ಮ ಮ್ಯಾಲ ಇಷ್ಟು ಅಭಿಮಾನ ಹ್ಯಾಗೆ ಬಂತು ಅವರಿಗೆ ?" ಎಂದು ನಾನು ಬೇಕೆಂತಲೇ ಕೇಳಿದೆ.

" ಏನೋ ಯಾರಿಗೆ ಗೊತ್ತು. ಅವರು ಬಹಳ ದಯಾಳು. ನನ್ನ ಸಂಕಟ ನೋಡಲಾರದೆ ಸಹಾಯಮಾಡಲು ಮುಂದೆ ಬಂದಿರಬೇಕು. ದೇವರು ಅವರಿಗೆ ಒಳ್ಳೆಯ ಬುದ್ಧಿ ಕೊಟ್ಟಿದಾನೆ."

" ಒಳ್ಳೆಯ ದೇವರು ! ಕಾಮ ದೇವರು !" ಎಂದು ಮನಸ್ಸಿನಲ್ಲೇ ಅಂದು ಕೊಂಡು ನಾನು ಮನಸ್ಸಿನಲ್ಲಿಯೇ ನಕ್ಕುಬಿಟ್ಟೆ. ಎಂಥ ಮರುಳರು ಈ ಜಗತ್ತಿನ ಜನರು ! ಸುಳ್ಳು ಸುಳ್ಳೇ " ದೇವರು, ದೇವರು, ದೇವರಾಟ, ದೇವರ ಕೃಪೆ, ದೇವರ ಮಹಿಮೆ !" ಅಂತ ಹಾರಾಡುತ್ತಿರುತ್ತಾರೆ; ನಡೆವ ಘಟನೆಗಳಲ್ಲಿ ನಿಜ ವಾಗಿ ದೇವರ ಸಂಬಂಧವೇನೂ ಇಲ್ಲದಿದ್ದಾಗಲೂ !

ದಿನವೂ ರಾತ್ರಿ ಹುಡುಗರನ್ನು ಕರೆದುಕೊಂಡು ಇವರು ತಮ್ಮ ತಂದೆಯ ಮನೆಗೆ ಹೋಗುವ ಪರಿಪಾಠ ನಡೆದೇ ಇತ್ತು. ಸುಲೋಚನೆಯನ್ನು ಆ ಮನೆಗೆ ಕಳಿಸಲು ನನಗಿಷ್ಟವಿರಲಿಲ್ಲವಾದರೂ ಆಗ ನಾನು ಅದಕ್ಕೆ ಅಡ್ಡಿಮಾಡದೆ ಸುಮ್ಮ ನಿದ್ದುಬಿಟ್ಟೆ. ಫೌಜದಾರರೊಡನೆ ಕೂಡುವ ಸದವಕಾಶವನ್ನು ನಾನಾಗಿಯೇ ಕಳೆದುಕೊಳ್ಳುವುದುಂಟೇ ? ರಾತ್ರೆ ಹತ್ತು ಹನ್ನೊಂದು ಗಂಟೆಯ ವೇಳೆಗೆ

ಅವರು ತಮ್ಮ ಅಟ್ಟದ ಬಾಗಿಲಲ್ಲಿ ನಿಂತುಕೊಂಡು ನನ್ನ ಸಂಜ್ಞೆಗಾಗಿ ಕಾದಿರುತ್ತಿದ್ದರು. ಬೀದಿಯೆಲ್ಲ ನಿಶ್ಶಬ್ದವಾಗುತ್ತಲೂ ನಾನು ಕಿಟಕಿಯಲ್ಲಿ ನಿಂತು ಕೈ ಮಾಡುತ್ತಿದ್ದೆ. ಅವರೂ ಬುದ್ಧಿವಂತರು. ಬೀದಿಯಲ್ಲಿನ ಮನೆಗಳ ಮುಂದೆ ಜನರಿಲ್ಲವೆಂದು ಮನವರಿಕೆ ಮಾಡಿಕೊಂಡೇ ನಮ್ಮ ಮನೆಯಲ್ಲಿ ನುಗ್ಗುತ್ತಿದ್ದರು.

ನಾವಿಬ್ಬರೂ ಎಷ್ಟು ಎಚ್ಚರಿಕೆಯಿಂದಿದ್ದರೂ ಆ ಸಂಗತಿ ಸುಶೀಲೆಗೆ ಹೇಗೋ ಗೊತ್ತಾಯಿತು. ಹೇಗೆ ಗೊತ್ತಾಯಿತೆಂಬುದು ನನಗೆ ಗೊತ್ತಾದದ್ದು ಹಿಂದಿನಿಂದ.

ಒಂದು ದಿನ ಸಾಯಂಕಾಲ ಅವಳು ಶಾಲೆಯಿಂದ ಬಂದವಳೇ ತಮ್ಮ ಮನೆಗೂ ಹೋಗದೆ ನೇರವಾಗಿ ನನ್ನನ್ನು ಹುಡುಕಿಕೊಂಡು ಬಂದಳು. ನಮ್ಮ ಮನೆಯಲ್ಲೂ ಆಗ ಯಾರೂ ಇರಲಿಲ್ಲ. ಹುಡುಗರಿನ್ನೂ ಶಾಲೆಯಿಂದ ಹಿಂದಿರುಗಿ ಬಂದಿರಲಿಲ್ಲ. ಇವರೂ ಹೊರಗಡೆ ಎಲ್ಲಿಗೋ ಹೋಗಿದ್ದರು.

" ಬಾ ಸುಶೀಲಾ, ಕೂಡು. ಬಹಳ ದಿವಸವಾಯ್ತು ಭೆಟ್ಟಿಯಾಗಿ," ಎಂದು ಅವಳನ್ನು ಪ್ರೀತಿಯಿಂದಲೇ ಬರಮಾಡಿಕೊಂಡೆ.

" ಈಗ ನಮ್ಮಂಥವರ ಭೆಟ್ಟಿಯಾದರೂ ನಿನಗ್ಯಾತಕ್ಕೆ ಬೇಕು ಬಿಡು!" ಎಂದಳವಳು – ವ್ಯಂಗ್ಯವಾಗಿ ನಗುತ್ತ.

ಅಬ್ದುಲ್ ಖಾನರು ನಮ್ಮ ಮನೆಗೆ ಬರುತ್ತಿದ್ದುದು ಅವಳಿಗೆ ತಿಳಿದಿರಬಹುದೆಂದು ಆಗಲೇ ನನಗೆನ್ನಿಸಿತು. ಮತ್ತೂ ಯಾರು ಯಾರಿಗೆ ತಿಳಿದಿದೆಯೋ ಏನೋ....

ಸಮಾಜದ ನಿಂದೆಯನ್ನೆದುರಿಸಬೇಕಾಗುವುದೆಂಬ ಭೀತಿಯಿಂದ ನನ್ನೆದೆ ತಲ್ಲಣಗೊಂಡಿತಾದರೂ ಆ ದುಗುಡವನ್ನು ಮುಖದಲ್ಲಿ ವ್ಯಕ್ತಗೊಳಿಸದೆ ಸಹಜ ಸ್ವರದಲ್ಲಿಯೇ ಕೇಳಿದೆ:

" ಇಂಥಾ ಮಾತು ಯಾರು ಕಲಿಸುತಾ ಇದಾರೇ ನಿನಗೆ?"

" ಯಾರು ಅಂದರೆ? ನಿನಗೆ ಯಾರು ಕಲಿಸುತಿದಾರೋ ಅವರೇ!" ಎಂದು ಹೇಳಿ ಮುಸಿಮುಸಿ ನಕ್ಕಳು ಸುಶೀಲಾ.

ನನಗೆ ಕುತೂಹಲ, ವಿಸ್ಮಯ. ಸುಶೀಲೆಯ ಮಾತಿನ ಅರ್ಥವೇನು?

ಅಬ್ದುಲ್‌ಖಾನರು ಇವಳೊಡನೆಯೂ ಸಂಬಂಧವಿಟ್ಟುಕೊಂಡಿರುವರೋ ಹೇಗೆ? ಹಾಗೂ ಇರುವ ಸಂಭವವುಂಟು. ಪಟಂಗರಲ್ಲಿ ಪಟಂಗರೆಂದರೆ ಪೋಲೀಸರೇ ಅಲ್ಲವೆ? ಅದೂ ಅಲ್ಲದೆ, ಅಬ್ದುಲ್‌ಖಾನರು ಎಂಥ ಹೆಂಗಸನ್ನೂ ವಶಪಡಿಸಿ ಕೊಳ್ಳಬಲ್ಲ ಗಂಡಸು. ಸುಶೀಲೆಯಂಥ ಅವಿವಾಹಿತ ಕುಮಾರಿ ಅವರ ಬಲೆಗೆ ಸಹಜವಾಗಿಯೆ ಬಿದ್ದುಬಿಟ್ಟಿರುವ ಸಂಭವವುಂಟು. ಇವಳನ್ನೆಲ್ಲಿ ಭೆಟ್ಟಿಯಾಗು ತ್ತಿರಬಹುದು ಅವರು? ರಾತ್ರಿ ಅವರು ನಮ್ಮ ಮನೆಗೆ ಬರುವಂತೆ ಈ ಗಂಡು ಬೀರಿ ಅವರ ಮನೆಗೇ ಹೋಗುತ್ತಿರಬಹುದೋ ಏನೊ. ಯಾರದೇನು ಅಂಜಿಕೆ ಇವಳಿಗೆ?

"ಏನದು ಸರಿಯಾಗಿ ಹೇಳಬಾರದೇ ಸುಶೀಲಾ?"

"ಸರಿಯಾಗಿ ಹೇಳಿದೆ ಅಂತ ತಿಳಿದುಕೋ. ನಿನಗೆ ಸಿಟ್ಟು ಬಂದರೆ ನನ್ನ ಗತಿಯೇನು?"

"ನಾನೇನು ತಿಂದುಬಿಡುತೀನೇನು ನಿನ್ನ? ಇರಲಿ ನಿನ್ನ ಬಡಿವಾರ. ಏನದು ಹೇಳು. ಯಾರಿಗೂ ಸೊಪ್ಪು ಹಾಕದ ನೀನು ನನಗೆ ಅಂಜುವದಂದ ರೇನು?"

"ಇಷ್ಟು ದಿನ ಅಂಜಬೇಕಾಗಿರಲಿಲ್ಲ. ಈಗ ಮಾತ್ರ ಅಂಜುವ ಪ್ರಸಂಗ ಬಂದದೆ. ಊರನ್ನೆಲ್ಲಾ ಅಂಜಿಸುವವರೇ ನಿನ್ನ ಕೈಯೊಳಗಿರುವಾಗ...." ಎಂದು ಹೇಳಿ ಮಾತನ್ನು ಅಷ್ಟಕ್ಕೇ ನಿಲ್ಲಿಸಿ ಮತ್ತೆ ನಗತೊಡಗಿದಳು ಸುಶೀಲೆ.

ಅವಳಿಗೆಲ್ಲವೂ ಗೊತ್ತಾಗಿದೆಯೆಂದು ನನಗಾಗ ಸ್ಪಷ್ಟವಾಗಿ ತಿಳಿಯಿತು. ಮುಂದೇನನ್ನು ಹೇಳುವಳೋ ನೋಡೋಣವೆಂದು ನಾನು ಸುಮ್ಮನೆ ಕುಳಿತು ಕೊಂಡೆ.

"ಏನೂ ಅಡ್ಡಿಯಿಲ್ಲವ್ವಾ. ಚಲೋ ಆಸಾಮಿಯನ್ನೇ ಹಿಡಿದಿದ್ದಿ!" ಎಂದಳಾಕೆ.

ಅವಳಿಗೆ ಏನನ್ನು ಹೇಳಬೇಕೆಂಬುದು ತೋಚಲಿಲ್ಲ. ಹೇಳುವುದಾದರೂ ಏನನ್ನು? ನಿಜವನ್ನೇ ಹೇಳುತ್ತಿದ್ದಳಲ್ಲವೇ ಆಕೆ? ರಾತ್ರಿ ಅಬ್ದುಲ್‌ಖಾನರು ನಮ್ಮ ಮನೆ ಸೇರುವಾಗ ಅವಳು ಕದ್ದು ನೋಡಿರಬೇಕು. ಈಗ ನಾನು ಅದನ್ನು

ಅಲ್ಲಗಳೆಯುವುದರಿಂದ ಏನೂ ಉಪಯೋಗವಾಗದು. ಅದಕ್ಕೆ ಬದಲು ಅವಳನ್ನೂ ಗುಟ್ಟಿನಲ್ಲಿ ಸೇರಿಸಿಕೊಂಡು ಆ ಸಂಗತಿ ಬೇರೆಯವರಿಗೆ ಗೊತ್ತಾಗದಂತೆ ಯತ್ನಿಸುವುದೇ ಸರಿಯಾದ ಉಪಾಯ....

ಹಾಗೆ ಯೋಚಿಸುತ್ತ, ಒಂದೆರಡು ನಿಮಿಷ ಸುಮ್ಮನಿದ್ದು ಅನಂತರ,

"ನಿನಗೆ ಹ್ಯಾಗೆ ಗೊತ್ತಾಯಿತೇ?" ಎಂದು ಕೇಳಿದೆ.

"ನನಗೂ ಗೊತ್ತಿರಲಿಲ್ಲ ಇಷ್ಟು ದಿನ. ಮೊನ್ನೆ ರಾತ್ರೆ ಎರಡನೇ ಆಟಕ್ಕೆ ಸಿನಿಮಾಕ್ಕೆ ಹೋಗಿ ಮನೆಗೆ ಬರುತ್ತಿದ್ದಾಗ ನಿಮ್ಮ ಬಾಗಿಲಿನಿಂದ ಫೌಜದಾರರು ಹೊರಬಿದ್ದು ಹೋಗುತ್ತಿದ್ದುದನ್ನು ನೋಡಿದೆ."

"ಅವರು ಫೌಜದಾರರೇ ಅಂತ ಹ್ಯಾಗೆ ಹೇಳುತ್ತೀ?"

"ಅವರನ್ನ ನಾನು ಎಷ್ಟೋ ಸಲ ನೋಡಿದೀನಿ. ಬೆಳದಿಂಗಳಲ್ಲಿ ಸಹಜವಾಗಿ ಗುರುತಿಸಬಹುದು."

ನಾನು ಮತ್ತೆರಡು ಕ್ಷಣ ಸುಮ್ಮನಿದ್ದು ಕೇಳಿದೆ:

"ಬ್ಯಾರೆ ಯಾರಿಗಾದರೂ ಗೊತ್ತಾಗಿರಬಹುದೇ ಸುಶೀಲಾ?"

"ಗೊತ್ತಾದ ಹಾಗೆ ಕಾಣುವದಿಲ್ಲ. ಗೊತ್ತಾಗಿದ್ದರೆ ಇಷ್ಟೊತ್ತಿಗೆ ಓಣಿಯವರೆಲ್ಲ ಇದೇ ಮಾತು ಸುರು ಮಾಡುತ್ತಿದ್ದರಲ್ಲ!"

ಆ ವಿಷಯವನ್ನೇ ಮರೆಮಾಡಲೆಂದು ನಾನು ಸುಶೀಲೆಯ ಮದುವೆಯ ಪ್ರಸ್ತಾಪವೆತ್ತಿ ಕೇಳಿದೆ:

"ನಿನ್ನ ಮದುವೆಯೆಂದೇ ಸುಶೀಲಾ?"

"ನಾನು ಆದಂದು."

"ಅಂದರೆ?"

"ಇಂದು ನಾನು ತಯಾರಾದರೆ ಇಂದೇ. ಇಲ್ಲವಾದರಿಲ್ಲ."

"ಏನದು, ಬಿಡಿಸಿ ಹೇಳೇ."

"ನನ್ನ ವಿಚಾರಗಳು ನಿನಗೆ ಗೊತ್ತಿವೆಯಲ್ಲ ಗಿರಿಜಕ್ಕಾ. ಮದುವೆ ಅಂದರೇನೇ ನನಗೆ ತಿರಸ್ಕಾರ ಬಂದಂತಾಗಿದೆ. ಇಷ್ಟು ವರ್ಷ ಹಾಗೇ ಇರಲಿಲ್ಲವೇನು? ಇನ್ನು ಮುಂದೆಯೂ ಇರಬಹುದಲ್ಲ?"

"ಊಹೂಂ. ಹಾಗನ್ನಬಾರದು. ಇಂದಿನ ಜಗತ್ತಿನಲ್ಲಿ ಹೆಣ್ಣು ಹಾಗೇ ಒಂಟಿಯಾಗಿ ಬಾಳುವದು ಕಷ್ಟ. ನೆಪಕ್ಕಾದರೂ ಒಬ್ಬ ಗಂಡ ಇರುವದೊಳ್ಳೆಯದು. ಮಾಸ್ತರರೊಬ್ಬರು ನಿನ್ನ ಮದುವೆಯಾಗಲು ತಯಾರಿದ್ದರಲ್ಲೇ?"

"ಈಗಲೂ ತಯಾರಿದಾರೆ. ನನಗೇ ಮನಸ್ಸು ಒಪ್ಪದಾಗಿದೆ. ಈಗ ನಾನು ಮದುವೆಯಾದರೆ ತಂದೆಯ ಮನೆ ಬಿಟ್ಟು ಅವರ ಮನೆಗೆ ಹೋಗಬೇಕು. ನನ್ನ ಸಂಬಳದಿಂದ ನಮ್ಮ ತಂದೆಗೆ ಎಷ್ಟೋ ಸಹಾಯವಾಗುತಾ ಇದೆ. ಮುಂದೆ ಅದು ತಪ್ಪಿ ಹೋಗುವದಿಲ್ಲವೇನು?"

"ಅದ್ಯಾಕೆ ತಪ್ಪಬೇಕು? ನಿನ್ನ ಸಂಬಳವನ್ನ ತಂದೆಗೇ ಕೊಡುವದಾಗಿ ಕರಾರು ಹಾಕಿಯೇ ಮದುವೆಯಾಗಬಹುದಲ್ಲ ಸುಶೀಲಾ?"

"ಅದಕ್ಕವರು ಒಪ್ಪಿದರಲ್ಲವೇನು?"

"ಒಪ್ಪಿಸಿ ನೋಡಬಾರದೇ?"

"ಅದ್ಯಾಕೆ ನಿನಗೆ ಇಷ್ಟು ಅವಸರ ನನ್ನ ಮದುವೆಯ ಬಗ್ಗ?"

"ಯಾಕೆಂದರೇನು ಹೇಳುವದೇ? ಹೆಂಗಸರಿಗೆ ಮದುವೆ ಅಂದರೇನೇ ಹಿಗ್ಗು."

"ಮದುವೆಯಾಗಿ ಏನು ಬೇಕಾದ್ದು ಮಾಡಬಹುದು ಅಂತೀಯಾ?"

"ಎಲ್ಲರೂ ಯಾಕೆ ಮಾಡಬೇಕು? ನನ್ನ ಹಾಗೇ ಎಲ್ಲರೂ ಆಗಬೇಕು ಅಂತ ನಾನೆಂದು ಹೇಳಿದೆ?"

"ನನ್ನ ಮದುವೆಯ ವಿಚಾರ ಇರಲಿ. ಮೊದಲು ಸುಲೋಚನೆಗೊಬ್ಬ ಗಂಡನ್ನ ಹುಡುಕು," ಎಂದು ಗಂಭೀರವಾಗಿ ಹೇಳಿದಳಾಕೆ.

"ಹೌದೌದು. ಹುಡುಕಬೇಕು. ಮೊದಲು ಈ ಖಟ್ಲೆಯ ಗದ್ದಲ ಮುಗೀಬೇಕಲ್ಲ ತಾಯಿ."

"ಈ ಗದ್ದಲ ಮುಗಿಯುವದರೊಳಗೆ ಅವಳೇನಾದರೂ ಗದ್ದಲ ಮಾಡಿಕೊಂಡು ಕೂತರೇನು ಮಾಡುತ್ತೀ?"

"ಹಾ? ಅವಳು ಹಾಗೆಲ್ಲ ಮಾಡಬಹುದು ಅಂತೀಯಾ?"

"ಸಿಟ್ಟಾಗಬ್ಯಾಡ ಗಿರಿಜಕ್ಕಾ. ನಿನ್ನ ಮಗಳು ಅಂದರೆ ನನಗೂ ಅಭಿ

ಮಾನ. ಅವಳ ಹಿತಕ್ಕಾಗೇ ಹೇಳುತ್ತೀನಿ. ಬೇಗ ಮದುವೆ ಮಾಡಿಬಿಡು. ಈಗಿನ ಕಾಲದ ಹುಡುಗಿಯರು...."

"ನೀನು ಈಗಿನ ಕಾಲದಾಕೆಯೇ ಅಲ್ಲವೇನೇ?"

"ಅಲ್ಲ ಅಂತ ಎಲ್ಲಿ ಅಂದೆ? ಆದರೆ, ನನ್ನ ಹಾಗೇ ಸುಲೋಚನೆಯೂ ಆಗಬಾರದಲ್ಲ?"

"ನಿನ್ನ ಹಾಗೇ ಅವಳು ಬ್ರಹ್ಮಚಾರಿಣಿಯಾಗಿರುತೀನಂತ ಹಟ ಹಿಡಿದು ಬಿಟ್ಟರೆ?"

"ಅದು ಶಕ್ಯವಿಲ್ಲ. ಅವಳ ಸ್ವಭಾವ ಬ್ಯಾರೆ. ನನ್ನದು ಬ್ಯಾರೆ."

ಕತ್ತಲಾಗುವ ವೇಳೆಗೆ ಸುಶೀಲಾ ಎದ್ದು ಹೋದಳು. ಸುಮಾರು ಏಳು ಗಂಟೆಯ ಸಮಯಕ್ಕೆ ಕುಮಾರ ಬಂದ. ಸುಲೋಚನೆ ಮಾತ್ರ ಬರಲಿಲ್ಲ.

"ಸುಲೂ ಎಲ್ಲಿ ಕುಮಾರಾ?"

"ಎಲ್ಲಾದರೂ ಸಿನಿಮಾಕ್ಕೆ ಹೋಗಿದ್ದಾಳು. ಇನ್ನೇನು ಕೆಲಸ ಅವಳಿಗೆ?" ಎಂದ ಕುಮಾರ.

ಅಂದು ಅವಳು ಸಿನಿಮಾಕ್ಕೆ ಹೋಗಿದ್ದುದೂ ನಿಜವೇ. ಒಂಭತ್ತೂವರೆ ಗಂಟೆಗೆ ಅವಳು ಮನೆಗೆ ಬರುತ್ತಲೂ ನಾನು ಕೊಂಚ ಧ್ವನಿಯನ್ನೇರಿಸಿ ಕೇಳಿದೆ:

"ಯಾರ ಸಂಗಡ ಸಿನಿಮಾಕ್ಕೆ ಹೋಗಿದ್ದೆ ಸುಲೂ?"

ಅವಳು ಬೆಚ್ಚಿದಳು. ಅನಿರೀಕ್ಷಿತವಾದ ಪ್ರಶ್ನೆಯನ್ನೆದುರಿಸಲಾರದೆ ತತ್ತರಿಸಿದಳು.

"ಯಾರ ಸಂಗಡ ಹೋಗಿದ್ದಿಯೇ?" ಎಂದು ಅವರೂ ಕೇಳಿದರು.

ಈ ಮೊದಲು ಒಂದು ಬಾರಿಯೂ ನಾವು ಅವಳನ್ನು ಹಾಗೆ ವಿಚಾರಿಸಿರಲಿಲ್ಲ. ಅಂತೆಯೇ ಅವಳು ಸ್ವೇಚ್ಛೆಯಿಂದ ವರ್ತಿಸಲು ಸಾಧ್ಯವಾಗಿತ್ತು. ಬಹಳ ದಿನಗಳವರೆಗೆ ಕಡಿವಾಣವಿಲ್ಲದೆ ತಿರುಗಿಕೊಂಡಿದ್ದ ಕುದುರೆಯನ್ನು ಒಮ್ಮೆಲೇ ಅಂಕೆಯಲ್ಲಿ ತಂದುಕೊಳ್ಳುವುದು ಸುಲಭವಲ್ಲ.

"ಯಾರ ಸಂಗಡ ಹೋದರೇನಂತೆ!" ಎಂದು ತಾತ್ಸಾರ ತುಂಬಿದ ಸ್ವರದಲ್ಲಿ ಅವಳೆಂದಳು

ಅವಳನ್ನು ಹಿಡಿದು ಎರಡೇಟು ಬಿಗಿಯೋಣವೆನ್ನಿಸಿತು ನನಗೆ. ಅವರಂತೂ ಹುಡುಗರ ಮೇಲೆ ಎಂದೂ ಕೈಯೆತ್ತಿದವರಲ್ಲ. ನಾನೂ ಅಷ್ಟು ದಿನ ಯಾರನ್ನೂ ಹೊಡೆದು ಬಡಿದು ಮಾಡಿರಲಿಲ್ಲ. ಅಂದು ಮಾತ್ರ ನನಗೆ ಬಹಳ ರೇಗಿಹೋಗಿತ್ತು. ಯಾವ ಗೆಣೆಯನನ್ನೋ ಕಟ್ಟಿಕೊಂಡು ಅವಳು ಅಡ್ಡ ಹಾದಿ ಹಿಡಿದಿರುವಳೆಂದೇ ನನಗೆನ್ನಿಸುತ್ತಿತ್ತು.

"ಹೇಳುತೀಯೋ ಇಲ್ಲೋ?" ಎಂದು ನಾನು ಬೆದರಿಸಿದೆ.

"ಹೇಳುವದಿಲ್ಲ ಹೋಗು," ಎಂದವಳೇ ಅವಳು ಪುಸ್ತಕಗಳನ್ನು ಮೂಲೆಗೆ ಬಿಸುಟು ಕೊಠಡಿಯಲ್ಲಿ ಬಿದ್ದುಕೊಂಡಳು.

ಹೊಡೆಯಬೇಕೆನ್ನಿಸಿತು. ಆದರೂ ಹೊಡೆಯಲಾಗಲಿಲ್ಲ. ಅವಳ ಮಾತಿನಲ್ಲಿ ಎದ್ದು ಕಾಣಿಸಿದ ದಿಟ್ಟತನವನ್ನು ಗುರುತಿಸಿಕೊಂಡಾಗ ನನಗೇಕೋ ದಿಗಿಲಾಯಿತು, ಏನೋ ಭೀತಿ ಅವಳ ಬಗೆಗೆ.

ಅಂದು ಆಕೆ ಊಟ ಮಾಡಲಿಲ್ಲ. ಅವರು ಹೋಗಿ, ಸಂತೈಸಿ ಎಬ್ಬಿಸಿದರೂ ಅವಳು ಬರಲಿಲ್ಲ. ಬಿದ್ದರೆ ಬೀಳಲಿ ಎಂದು ನಾನೂ ಸುಮ್ಮನಿದ್ದೆ. ಊಟ ಮುಗಿಸಿ, ನಿತ್ಯದಂತೆ ಅವರು ಕುಮಾರನನ್ನು ಕರೆದುಕೊಂಡು ತಮ್ಮ ತಂದೆಯ ಮನೆಗೆ ಹೊರಟಾಗ ಅವಳೂ ಎದ್ದು ಅವರನ್ನು ಹಿಂಬಾಲಿಸಿಕೊಂಡು ಹೋದಳು. ಆಗ ಮಾತ್ರ ನನಗೆ ಇನ್ನಷ್ಟೂ ವಿವಂಚನೆಗಿಟ್ಟುಕೊಂಡಿತು. ಸುಲೋಚನೆಗೆ ಆ ಮನೆಯ ಬಗೆಗೇ ವಿಶೇಷವಾದ ಆಸ್ಥೆ ಹುಟ್ಟಿದೆಯೋ ಏನೊ. ನನ್ನ ಪರಮ ವೈರಿಯಾದ ಆ ನೀಲಕ್ಕ, ನನ್ನ ಹುಡುಗಿಯ ಮನಸ್ಸನ್ನು ಕಲುಷಿತಗೊಳಿಸಿ ಅವಳನ್ನು ನನ್ನಿಂದ ಸೆಳೆದುಕೊಳ್ಳುತ್ತಿರುವಳೋ ಏನೊ. ಸುಲೋಚನೆಯನ್ನು ಅವರ ಮನೆಗೆ ಕಳಿಸುವುದೂ ತಪ್ಪೇ. ಕಳಿಸಬಾರದು. ಇನ್ನು ಮುಂದೆ....

ಆದರೆ, ಅಬ್ದುಲ್‌ಖಾನರ ನೆನಪು ಬಂದು ಆ ವಿಚಾರವನ್ನು ಹೊಡೆದೋಡಿಸಿತು. ಸುಲಭವಾಗಿ ದುಡ್ಡು ಸಿಗುವ ಇಂಥ ಸಂದರ್ಭವನ್ನು ಕಳೆದುಕೊಳ್ಳುವುದು ಜಾಣತನವಲ್ಲ; ಸುಲೋಚನೆ ಒಂದೆರಡು ದಿನ ಆ ಮನೆಗೆ

ಹೋದರೂ ಅಂಥ ಹಾನಿಯೇನೂ ಆಗಲಾರದು; ಆ ಹುಡುಗನಿಗೆ ಮಾತ್ರ ಅವಳನ್ನು ಕೊಡದಿದ್ದರಾಯಿತಲ್ಲ, ಎಂದುಕೊಂಡೆ.

ಖಟ್ಲಿ ವಿಚಾರಣೆಗೆ ಬರುವ ದಿನಗಳೂ ಸಮೀಪಿಸಿದುವು. ವಕೀಲರನ್ನಿಡುವ ವಿಚಾರ ಹೊರಡುತ್ತಲೂ ಮತ್ತೆ ಹಣದ ಪ್ರಶ್ನೆಯೆದ್ದು ನಿಂತಿತು. ಏನಿಲ್ಲವೆಂದರೂ ಐದು ನೂರು ರೂಪಾಯಿಗಳಾದರೂ ಬೇಕಾಗಿದ್ದುವು – ಖರ್ಚಿಗಾಗಿ.

ಒಂದು ರಾತ್ರೆ ಫೌಜದಾರರ ಹತ್ತಿರ ಉಪಾಯವಾಗಿ ಮಾತು ತೆಗೆದು ಒಂದು ಸಾವಿರ ರೂಪಾಯಿಗಳನ್ನು ಸಾಲವಾಗಿ ಕೊಡಲು ಕೇಳಿದೆ.

" ಯಾಕೆ ?" ಎಂದೇನೂ ಅವರು ಕೇಳಲಿಲ್ಲ.

" ಈಗ ನನ್ನ ಹತ್ತರ ಅಷ್ಟು ಹಣ ಇಲ್ಲ ಗಿರಿಜಾ."

" ಇದ್ದಷ್ಟಾದರೂ ಕೊಡಿರಿ."

ಅವರು ಮೂರುನೂರು ರೂಪಾಯಿ ಕೊಟ್ಟು, ಒಂದೆರಡು ವಾರ ಕಳೆದ ಬಳಿಕ ಮತ್ತೆ ಕೊಡುವುದಾಗಿ ಹೇಳಿದರು. ಹೇಳಿದಂತೆಯೇ ಒಂದು ವಾರದೊಳಗಾಗಿ ಏಳು ನೂರು ರೂಪಾಯಿ ತಂದುಕೊಟ್ಟರು.

" ನಮ್ಮವರಿಗೆ ಈ ಸಂಗತಿ ಗೊತ್ತಾಗಬಾರದು ಹಂ !"

" ಹುಚ್ಚೀ ! ಅಷ್ಟೂ ತಿಳಿಯುವದಿಲ್ಲವೇನು ನನಗೆ !" ಎಂದು ಹೇಳುತ್ತಾ ಅವರು ನನ್ನನ್ನು ಚುಂಬಿಸಿದರು.

ಸ್ವಲ್ಪ ಹೊತ್ತು ಬಿಟ್ಟು ಅವರು ಕೇಳಿದರು :

" ನನ್ನದೊಂದು ಮಾತು ನಡಸಿಕೊಡ್ತೀಯಾ ಗಿರಿಜಾ ?"

" ಏನು ?"

" ಇಲ್ಲಿ ಕದ್ದುಮುಚ್ಚಿ ಬಂದು ಹೋಗುವದರಿಂದ ನಿಜವಾದ ಸುಖವೇ ಸಿಗದಾಗಿದೆ. ಒಂದೆರಡು ದಿನದ ಮಟ್ಟಿಗೆ ಎಲ್ಲಿಗಾದರೂ ಹೋಗಿ ಬರೋಣ, ಬರ್ತೀಯಾ ?"

ಎಂಥ ಯೋಚನೆ ! ನನ್ನ ಹೃದಯ ಪುಲಕಿತವಾಯಿತು.

## ೨೯

ಹೃದಯ ಪುಲಕಿತವಾಯಿತು. ನಿಜ. ಆದರೂ ಮನಸ್ಸು ಹಿಂಜರಿಯ ತೊಡಗಿತು. ನ್ಯಾಯಾನ್ಯಾಯಗಳ ಸಮಸ್ಯೆ ನನ್ನನ್ನು ಬಾಧಿಸಲಿಲ್ಲ. ಆ ಸೀಮೆಯನ್ನು ನಾನೆಂದೋ ದಾಟಿ ಬಂದಿದ್ದೆ. ಆದರೆ, ಫೌಜದಾರರ ಜೊತೆಗೆ ಬಹಿರಂಗವಾಗಿ ಪ್ರವಾಸ ಮಾಡಲು ಧೈರ್ಯ ಸಾಲದಾಗಿತ್ತು. ಯಾರಾದರೂ ನೋಡಬಹುದು. ನೋಡಿಯೇ ನೋಡುತ್ತಾರೆ. ಅದನ್ನು ಕುರಿತು ನನ್ನ ಗಂಡನೆದುರಿಗೆ ಅವರು ಹೇಳಿಯೇ ಹೇಳುತ್ತಾರೆ. ಮುಂದೆ? ಮುಂದೇನಾಗಬಹುದು? ಅವರು ನನ್ನನ್ನು ಹೇಗೆ ಕಾಣಬಹುದು?

ಒಂದು ರಾತ್ರಿಯೆಲ್ಲಾ ಯೋಚಿಸಿದಾಗ ಉಪಾಯವೊಂದು ಹೊಳೆಯಿತು. ಫೌಜದಾರರಿಂದ ಕಿತ್ತುಕೊಂಡಿದ್ದ ಸಾವಿರ ರೂಪಾಯಿಗಳಲ್ಲಿ ಸ್ವಲ್ಪವನ್ನಾದರೂ ನಮ್ಮವರ ಕೈಗೆ ಕೊಡಬೇಕಾಗಿತ್ತು – ವಕೀಲರ ರುಸುಮಿಗಾಗಿ. ನನ್ನ ತಂಗಿಯ ಹತ್ತಿರ ಆ ಹಣ ಸಾಲ ತೆಗೆದಿರುವುದಾಗಿ ಹೇಳಿಬಿಡುವುದು. ಅದೇ ಉದ್ದೇಶ ವಿಟ್ಟುಕೊಂಡು ಪ್ರಯಾಣ ಮಾಡಬಹುದು....

ನಾನು ಆ ವಿಚಾರವೆತ್ತುತ್ತಲೂ ಅವರು ತಕ್ಷಣ ಒಪ್ಪಿಕೊಂಡರು.

" ಹಾಗೇ ಮಾಡು ಗಿರಿಜಾ. ಹೋಗಿ ಬಾ ಗೌರವ್ವನ ಹತ್ತರ. ಆದರವರು ಕೊಟ್ಟಾರೋ ಇಲ್ಲೋ? ಸುಮ್ಮನೆ ಕೇಳಿ ಇಲ್ಲ ಅನ್ನಿಸಿಕೋಬಾರದು."

" ಗೌರಿಯ ಗಂಡ ಸಾವಿರಾರು ರೂಪಾಯಿ ಗಳಿಸ್ತಾ ಇದಾನೆ. ಏನೂ ತ್ರಾಸ ಇಲ್ಲ ಅವರಿಗೆ. ಐದಾರು ನೂರು ಕೊಡುವದೇನು ದೊಡ್ಡದಲ್ಲ. ನಮ್ಮ

ಮೇಲೆ ಬಂದ ಸಂಕಟ ಅವರಿಗೆ ಆಗಲೆ ಗೊತ್ತಾಗಿದ್ದರೆ ತಾವೇ ಬಂದು ಸಹಾಯ ಮಾಡುತ್ತಿದ್ದರು."

"ಸುಮ್ಮನೆ ಯಾಕೆ ಇನ್ನೊಬ್ಬರಿಗೆ ತ್ರಾಸ ಕೊಡಬೇಕು ಗಿರಿಜಾ ?"

"ಇದರಲ್ಲಿ ತ್ರಾಸದ ಪ್ರಶ್ನೆಯೇ ಇಲ್ಲ. ಸಂಬಂಧಿಕರಾದವರು ಪ್ರಸಂಗದಲ್ಲಿ ಒಬ್ಬರಿಗೊಬ್ಬರು ಸಹಾಯ ಮಾಡಲೇಬೇಕಾಗುತದೆ."

ವಿಮಲೆಯನ್ನೂ ಜೊತೆಗೆ ಕರೆದೊಯ್ಯಲು ಇವರು ಸೂಚಿಸಿದರು. ಯಾವುದೋ ನೆಪ ಹೇಳಿ ನಾನೊಬ್ಬಳೇ ಹೊರಟೆ. ಅಬ್ದುಲ್‌ಖಾನರು ಮರು ದಿವಸ ಬಂದು ನಿಲ್ದಾಣದಲ್ಲಿ ಕಾದಿರಬೇಕೆಂದು ಗೊತ್ತಾಗಿತ್ತು.

ತಂಗಿಯ ಮನೆಯಲ್ಲಿ ಒಂದು ದಿನ ಕಳೆಯಿತು. ನನ್ನ ಗಂಡನ ಮೇಲೆ ಬಂದ ಸಂಕಟದ ಬಗ್ಗೆ ಅವರು ಸಹಾನುಭೂತಿ ವ್ಯಕ್ತಗೊಳಿಸಿದರಲ್ಲದೆ ಅವಶ್ಯವೆನ್ನಿಸಿದಾಗ ಸಹಾಯ ಪಡೆಯಬಹುದಾಗಿಯೂ ಹೇಳಿದರು. ಮಾರನೆಯ ದಿನ ನಾನು ತಿರುಗಿ ಹೊರಟಾಗ ಗೌರಿಯ ಗಂಡ ನನಗಾಗಿ ಸೀರೆ ಕುಬುಸಗಳನ್ನೂ ಮಕ್ಕಳಿಗಾಗಿ ಬಟ್ಟೆಗಳನ್ನೂ ತಂದು ಕೊಟ್ಟ. ಅವುಗಳನ್ನು ನಿರಾಕರಿಸುವಂತಿರಲಿಲ್ಲ.

ಬಸ್ಸು ಏರಿ ರೈಲ್ವೆ ನಿಲ್ದಾಣಕ್ಕೆ ಬಂದು ಮುಟ್ಟಿದೆ. ಫೌಜದಾರರು ಟಿಕೀಟು ತೆಗೆಯಿಸಿ ನನ್ನನ್ನೆ ಎದುರುನೋಡುತ್ತಲಿದ್ದರು.

"ಯಾವಾಗ ಬಂದಿರಿ ?"

"ಇದೇ ಈಗ ಬಂದೆ ಬೆಳಗಿನ ಗಾಡಿಗೆ. ನಿನ್ನ ಸಂಗಡ ಮತ್ತೆ ಯಾರೂ ಬರಲಿಲ್ಲವೇನು ?"

"ಬಸ್ಸಿನಲ್ಲಿ ಕೂಡಿಸಿ ಹೋದರು. ನನ್ನ ತಂಗಿಯ ಮನೆಯಲ್ಲೂ ಹೆಚ್ಚು ಮಂದಿ ಇಲ್ಲ."

"ಒಳ್ಳೆಯದೇ ಆಯ್ತು. ಅವರ್ಯಾರಾದರೂ ಬಂದಿದ್ದರೆ ನಿನಗೆ ಓರೆಕೋರೆ ಟಿಕೀಟು ತೆಗೆಯಿಸಿ ಕಳಿಸಿಬಿಡುತ್ತಿದ್ದರು. ನಾನೂ ಕೈ ಬೀಸುತ್ತಾ ಹೊರಡಬೇಕಾಗುತ್ತಿತ್ತು," ಎಂದು ಹೇಳಿ ಅವರು ನಕ್ಕರು.

ಕಾಳಿಕಾನಗರಕ್ಕೆ ಹೋಗುವ ರೈಲು ಹತ್ತಿ ಕುಳಿತೆವು. ಇಂಟರ್ ವರ್ಗದ

ಗಾಡಿಯಾದುದರಿಂದ ಪ್ರಯಾಣಿಕರ ಗದ್ದಲವಿರಲಿಲ್ಲ. ಆದರೂ ನನಗೆ ಒಳಗೊಳಗೇ ನಡುಕ.

ನನ್ನ ಆಶಂಕೆಯನ್ನು ಫೌಜದಾರರು ಗುರುತಿಸಿ ನನಗೆ ಧೈರ್ಯವೀಯುತ್ತ ಹೇಳಿದರು :

" ಇಲ್ಲಿ ನಮ್ಮನ್ನ ಗುರುತಿಸುವವರ್‍ಯಾರೂ ಇಲ್ಲ. ಅಂಜಬ್ಯಾಡ."

ಅಂಜಬೇಡವೆಂದು ಅವರು ಹೇಳಿದಷ್ಟೂ ನನಗೆ ಅಂಜಿಕೆ ಹೆಚ್ಚಾಗುತ್ತಿತ್ತು. ಕಾಳಿಕಾನಗರದಲ್ಲಿಳಿದ ತರುವಾಯ ಮುದುಕಿಯೊಬ್ಬಳ ಮನೆಗೆ ಕರೆದುಕೊಂಡು ಬಂದರು. ಅವಳು ಕುಂಟಲಗಿತ್ತಿಯಿರಬೇಕೆಂದು ತೋರುತ್ತಿತ್ತು. ಅವಳ ಮನೆಯ ಹಿಂಭಾಗದ ಕೊಠಡಿಯಲ್ಲಿ ವಸತಿ ಮಾಡಿದುದಾಯಿತು. ಹಾ ಹಾ ಎನ್ನುವುದರೊಳಗಾಗಿ ಎರಡು ದಿನ ಕಳೆದುಹೋದುವು.

ಅಲ್ಲಿರುವಾಗಲೇ ನಾನು ಅವರಿಗೆ ಕಾಶಪ್ಪನ ವಿಷಯವನ್ನೂ ಹೇಳಿದೆ.

" ಅವರು ಬಹಳ ಒಳ್ಳೆಯವರು. ನಮಗೆ ಎಷ್ಟೋ ಸಲ ಸಹಾಯ ಮಾಡಿದಾರೆ. ಈಗ ಮಾತ್ರ ಬಹಳ ಕಷ್ಟದಲ್ಲಿದಾರೆ. ನೀವು ಅವರಿಗೂ ಏನಾದರೂ ಸಹಾಯ ಮಾಡಲಿಕ್ಕಾಗಲಿಕ್ಕಿಲ್ಲವೇನು ?"

ಅಬ್ದುಲ್ ಖಾನರದು ವಿಶಾಲ ಹೃದಯ. ಕಾಶಪ್ಪನೂ ನನ್ನ ಪ್ರಿಯಕರನೆಂಬ ಸಂಗತಿಯನ್ನರಿತಿದ್ದೂ ಅವರು ಅವನಿಗೆ ನೆರವಾಗಲು ಸಂತೋಷದಿಂದ ಒಪ್ಪಿಕೊಂಡರು.

" ಆ ಏ. ಓ. ಸಾಹೇಬನ ಮಾತು ಕೇಳಿ ನಮ್ಮ ಇನ್ಸ್‌ಪೆಕ್ಟರು ರೇಶಿಮೆ ಹಿಡಿದರು. ' ಮೊದಲೇ ಗೊತ್ತಾಗಿದ್ದರೆ ನಾನು ಅದನ್ನ ತಪ್ಪಿಸಬಹುದಾಗಿತ್ತು," ಎಂದರು ಫೌಜದಾರರು. " ಇನ್ನು ಮುಂದೆ ಮಾತ್ರ ಕಾಶಪ್ಪನವರು ರೇಶಿಮೆ ವ್ಯಾಪಾರ ಮಾಡುವದು ಬ್ಯಾಡ. ನೂಲು ತರಿಸಲಿ. ಅದರಲ್ಲೂ ಲಾಭಕ್ಕೆ ಕೊರತೆಯಿಲ್ಲ."

" ಅದನ್ನೂ ಇನ್ಸ್‌ಪೆಕ್ಟರು ಹಿಡಿದರೆ ?"

" ಅವರಿಗೆ ವರ್ಗವಾಗಿದೆ. ಇನ್ನೇನು ಐದಾರು ದಿನಗಳಲ್ಲೇ ಅವರು ಹೊರಟುಬಿಡುತಾರೆ."

ಊರಿಗೆ ಹಿಂದಿರುಗಿ ಬಂದೊಡನೆಯೆ ಅವರ ಕೈಗೆ ಐದುನೂರು ರೂಪಾಯಿ ಕೊಟ್ಟು ವಕೀಲರ ವ್ಯವಸ್ಥೆಮಾಡಲು ತಿಳಿಸಿದುದಾಯಿತು. ಕಾಶಪ್ಪನನ್ನು ಕಂಡು, ಫೌಜದಾರರೊಡನೆ ಮಾತನಾಡಿದ ವಿಷಯ ತಿಳಿಸುತ್ತಲೂ ಅವನಿಗೂ ಸಂತೋಷವಾಯಿತು.

" ನೀನು ಯಾವಾಗ ಅವರ ಗುರ್ತು ಮಾಡಿಕೊಂಡೆ ಗಿರಿಜಾ ?"

" ಅದೆಲ್ಲಾ ನಿಮಗ್ಯಾಕೆ? ನಾನು ಹೇಳಿದಷ್ಟು ಮಾಡಿರಲ್ಲ! ನಿಮ್ಮ ನೂಲಿನ ಮೋಟರಿನ ಹಿಂದೆಯೇ ಅಬ್ದುಲ್‌ಖಾನರೂ ಸರಕಾರಿ ಮೋಟರಿನಲ್ಲಿ ಬರುತಾರಂತೆ. ಹಾದಿಯಲ್ಲಿ ಯಾರಾದರೂ ನಿಮ್ಮನ್ನ ತಡೆದರೆ, ನಿಮ್ಮ ಮೋಟರನ್ನ ಹಿಡಿಯಲಿಕ್ಕೇ ತಾವೂ ಹೊರಟದ್ದಾಗಿ ಹೇಳಿ ಪಾರುಮಾಡುವರಂತೆ."

ದೇಶೀಯ ಸಂಸ್ಥಾನಗಳಲ್ಲಿ ನೂಲಿಗೆ ಕೊರತೆಯೇನೂ ಇರಲಿಲ್ಲ. ಅದರಲ್ಲಿ ಹೆಚ್ಚಿನದು ನಮ್ಮ ಭಾಗಕ್ಕೆ ಕಳವಿನಿಂದ ಬಂದು ಒಂದಕ್ಕೆರಡರಷ್ಟು ಬೆಲೆಗೆ ಮಾರಾಟವಾಗುತ್ತಿತ್ತು. ನೇಯುವುದಕ್ಕೆ ನೂಲು ಸಿಕ್ಕದೆ ನೇಕಾರರನೇಕರು ಹೊಟ್ಟೆಗಿಲ್ಲದೆ ಅಲೆಯುತ್ತಿದ್ದರು. ಆ ವಿಚಾರ ನನಗೆ ಗೊತ್ತಿದ್ದಿತಾದರೂ ಆಗ ನನಗೆ ಅವರ ಬಗೆಗೆ ಕನಿಕರವೇನೂ ಉಂಟಾಗಲಿಲ್ಲ. ಕಾಶಪ್ಪ ಪುನಃ ವ್ಯವಹಾರ ಮಾಡಬೇಕು, ಅವನ ಕೈಗೆ ಪುನಃ ಹಣ ಬರಬೇಕು; ಅದರಲ್ಲಿ ಅರ್ಧದಷ್ಟನ್ನಾದರೂ ನಾನು ಕಿತ್ತುಕೊಳ್ಳಬೇಕು ಎಂಬುದೊಂದೇ ಯೋಚನೆ ನನಗಿದ್ದುದು.

ನೂಲು ಸಾಗಿಸಿಕೊಂಡು ಬಂದ ಪ್ರತಿಸಲವೂ ಫೌಜದಾರರಿಗೆ ಎರಡು ನೂರು ರೂಪಾಯಿ ಕೊಡುವುದೆಂದು ಗೊತ್ತಾಯಿತು.

" ನೂಲು ತರುವ ಮೋಟರಿನ ಸಂಗಡ ರಾಚಪ್ಪನ್ನೇ ಕಳಿಸಿದರೆ ಹ್ಯಾಗೆ ಗಿರಿಜಾ ?" ಎಂದು, ಒಂದು ದಿನ ಮಾತು ತೆಗೆದ ಕಾಶಪ್ಪ.

" ಇಂಥಾದ್ದರಲ್ಲೆಲ್ಲಾ ಅವರಿಗೇನು ತಿಳೀತದೆ? ಏನಾದರೂ ಮಾಡಿಕೊಂಡು ಕೂತಾರು. ಬಂಗಾರ ಕೊಳ್ಳಲಿಕ್ಕೆ ಹೋಗಿ ಎಂಥಾ ಅನರ್ಥ ಆಯಿತು, ಗೊತ್ತಿಲ್ಲೇನು ?"

" ಫೌಜದಾರರು ಬೆಂಬಲಕ್ಕಿರುವಾಗ ಏನೂ ಆಗುವದಿಲ್ಲ ಗಿರಿಜಾ.

ನೀನೇನು ಅಂಜಬೇಕಾಗಿಲ್ಲ. ಈಗ ಮೋಟರಿನಲ್ಲಿ ನಾನು ಹೋದರೆ ಜನರು ನೋಡುತಾರೆ, ಮತ್ತೆ ರೇಶಿಮೆಯ ವ್ಯವಹಾರ ನಡಸಿದಾನೆ ಅನ್ನುತಾರೆ. ಯಾರಾದರೂ ಆಗದವರು ಡಿ. ಎಸ್. ಪಿ. ಯವರ ಹತ್ತರ ಹೋಗಿ ಚಾಡಿ ಹೇಳಿದರಂದರೆ ನಾನು, ಅಬ್ದುಲ್‌ಖಾನರು ಇಬ್ಬರೂ ಕೂಡೇ ಜೇಲಿಗೆ ಹೋಗ ಬೇಕಾದೀತು. ಅದಕ್ಕೇ, ಬಹಳ ವಿಚಾರಮಾಡಿ ಈ ಕೆಲಸಕ್ಕೆ ರಾಚಪ್ಪನ್ನೇ ಕಳಿಸಬೇಕೆಂತ ಮಾಡಿದೀನಿ. ಅವರಿಗೂ ನೌಕರಿಯಿಲ್ಲ. ಸ್ವಲ್ಪಾದರೂ ಸಂಪಾದನೆ ಮಾಡಲಿ."

ಸರಿ. ಅದೂ ಒಳ್ಳೆಯ ಯೋಚನೆಯೇ ಎಂದುಕೊಂಡೆ. ಕಾಶಪ್ಪ ಹೇಳಿದಾಗ ಇವರೂ ಒಪ್ಪಿಕೊಂಡರು. ಮೋಟಾರು ತೆಗೆದುಕೊಂಡು ಹೋಗಿ ಬಂದ ಪ್ರತಿಯೊಂದು ಸರತಿಗೂ ಇವರಿಗೆ ಒಂದು ನೂರು ರೂಪಾಯಿ ಕೊಡಲು ಕಾಶಪ್ಪ ಒಪ್ಪಿಕೊಂಡ.

ಮೊದಲು ಅವನೇ ಸಂಸ್ಥಾನದ ಪ್ರದೇಶಗಳಿಗೆ ಹೋಗಿ ನೂಲು ಖರೀದಿ ಮಾಡಿ ಶೇಖರಿಸಿಟ್ಟು ಬಂದ. ಅನಂತರ ಇವರು ಲಾರಿಗಳನ್ನು ತೆಗೆದುಕೊಂಡು ಹೋಗಿ ನೂಲು ತುಂಬಿಕೊಂಡು ಬಂದರು. ಸ್ವತಃ ಅಬ್ದುಲ್‌ಖಾನರೇ ಬೆಂಗಾವಲಿಗಿದ್ದುದರಿಂದ ಯಾವ ವಿಘ್ನವೂ ಒದಗಲಿಲ್ಲ.

ಹಾಗೆ ಆ ತಿಂಗಳೊಂದರಲ್ಲಿಯೇ ಹತ್ತು ಬಾರಿ ಮೋಟಾರು ಓಡಾಡಿದುವು. ಎಲ್ಲಾ ಖರ್ಚುವೆಚ್ಚ ಲಂಚ ರುಸುವತ್ತುಗಳನ್ನು ತೆಗೆದು ಹತ್ತು ಸಾವಿರ ರೂಪಾಯಿಯಾದರೂ ಲಾಭವಾಗಿರಬೇಕು ಕಾಶಪ್ಪನಿಗೆ. ನಮ್ಮವರಿಗೆ ಒಂದು ಸಾವಿರ. ಅಬ್ದುಲ್‌ಖಾನರಿಗೆ ಎರಡು ಸಾವಿರ. ನನಗೇ – ಖಾಸಗಿಯಾಗಿ ಎರಡು ಸಾವಿರ. ಕಾಶಪ್ಪನ ಬಟ್ಟೆಯಂಗಡಿ ಮತ್ತೆ ಚೇತರಿಸಿಕೊಂಡಿತು. ಮೊದಲಿನಂತೆಯೇ ಅವನ ಕೈಯಲ್ಲಿ ದುಡ್ಡು ಓಡಾಡತೊಡಗಿತು.

"ನಾವು ನೂಲು ತರುವ ಸಂಗತಿ ಜನರಿಗೆಲ್ಲಾ ಗೊತ್ತಾಗಿ ಹೋಗಿದೆ ಗಿರಿಜಾ. ಊರಲ್ಲೆಲ್ಲ ಬಹಳ ಬೊಬ್ಬಾಟ ನಡೆದಿದೆ. ಡಿ. ಎಸ್. ಪಿ. ಯವರಿಗೂ ಗೊತ್ತಾದಂತೆ ಕಾಣುತ್ತದಲ್ಲ? ಇನ್ನೇನು ಮಾಡುವದು?" ಎಂದು, ಒಂದು ದಿನ ಚಿಂತಾಕ್ರಾಂತನಾಗಿ ಹೇಳಿದ ಕಾಶಪ್ಪ.

" ಅಂದರೆ, ನಿಮ್ಮ ಮೋಟರು ಹಿಡಿಯಲು ಹುಕುಂ ಮಾಡಬಹುದೇನು ಸಾಹೇಬರು ?"

" ಮಾಡಿದರೂ ಮಾಡಬಹುದು. ಅಬ್ದುಲ್‌ಖಾನರ ಮ್ಯಾಲೂ ಸಂಶಯ ಬಂದಿರಬಹುದು ಸಾಹೇಬರಿಗೆ. ಅವರು ನಮ್ಮ ಲಾರಿಯ ಹಿಂದೆ ತಿರುಗು ವದನ್ನು ಮಂದಿ ನೋಡಿದಾರಲ್ಲ...."

" ನಾನಿವತ್ತೇ ಫೌಜದಾರರನ್ನ ಕೇಳುತೀನಿ. ಅವರು ಹೇಳಿದ ಹಾಗೆ ಮಾಡಿದರಾಯ್ತು. ಮತ್ತೆ ನಮ್ಮವರು ಜೇಲಿಗೆ ಹೋಗುವ ಪ್ರಸಂಗ ಬರಬಾರ ದಲ್ಲ!" ಎಂದೆ ನಾನು.

ಅಬ್ದುಲ್‌ಖಾನರೂ ಆ ವಿಚಾರವಾಗಿ ಚಿಂತಿಸುತ್ತಿದ್ದ ಹಾಗೆ ಕಾಣಿಸಿತು. ಅಂದು ರಾತ್ರೆ ನನ್ನನ್ನು ನೋಡುತ್ತಲೂ ಅವರು ಅದೇ ಸಂಗತಿಯನ್ನು ಪ್ರಸ್ತಾಪಿ ಸುತ್ತಾ,

" ಇನ್ನು ಕೆಲವು ದಿನವಾದರೂ ನೂಲಿನ ಸಾಗಾಟ ಬಂದ್ ಮಾಡ ಬೇಕಾಯ್ತು ಗಿರಿಜಾ," ಎಂದರು.

" ಕಾಶಪ್ಪನವರೂ ಚಿಂತೆ ಮಾಡುತ್ತಿದಾರೆ. ಡಿ. ಎಸ್. ಪಿ. ಯವರಿಗೆ ಸುದ್ದಿ ಹೋಗಿದೆಯಂತೆ. ಹೌದೇನು ?"

" ಹೋಗಿದ್ದರೂ ಹೋಗಿರಬಹುದು."

" ನೀವೇ ಸ್ವತಃ ಫೌಜದಾರರಾಗಿದ್ದು ನಿಮ್ಮ ವಿರುದ್ಧ ಹ್ಯಾಗೆ ಸುದ್ದಿ ಹೋಗುತಾವೆ ?"

" ನಾನೊಬ್ಬನೇ ಒಬ್ಬ ಅಧಿಕಾರಿಯಲ್ಲವಲ್ಲ ಗಿರಿಜಾ, ಈ ನಗರಕ್ಕೆ ? ನಾನಲ್ಲದೆ ಎಲ್. ಐ. ಬಿ. ಅಂತ ಅದೆ, ಸಿ. ಐ. ಡಿ. ಇದಾರೆ. ಅವರಿಗೂ ಗೊತ್ತಾಗುತಾವೆ ಇಂಥಾ ಸುದ್ದಿ."

" ಅವರೂ ಪೋಲೀಸರೇ ಅಲ್ಲೇನು ?"

" ಹೌದು. ಆದರೂ ಒಬ್ಬರಿಗೊಬ್ಬರಿಗೆ ಸ್ಪರ್ಧೆ ಇರುತದೆ, ನಾ ಮುಂದೆ ನೀ ಮುಂದೆ ಅನ್ನುವ ಜಿದ್ದು ಇರುತದೆ. ಆದರಿಂದಲೇ ಒಮ್ಮೊಮ್ಮೆ ಕಠಿಣ ಪ್ರಸಂಗ ಬರುತಾವೆ."

ಒಂದು ತಿಂಗಳಿನವರೆಗೂ ನೂಲಿನ ಸಾಗಾಟ ನಿಲ್ಲಿಸುವುದೆಂದು ಗೊತ್ತಾಯಿತು. ಕಾಶಪ್ಪ ಅಂಗಡಿಯ ಕಡೆಗೂ ನಮ್ಮವರು ಖಟ್ಲೆಯ ಕಡೆಗೂ ಅಬ್ದುಲ್ ಖಾನರು ನನ್ನ ಕಡೆಗೂ ತಮ್ಮೆಲ್ಲ ಲಕ್ಷ್ಯ ಹೊರಳಿಸಿದರು.

ಕಾಶಪ್ಪನ ಮೋಟರುಗಳನ್ನು ಹಿಡಿಯಲು ಸಿ. ಐ. ಡಿ. ಇಲಾಖೆಯವರು ಹದಿನೈದು ದಿನಗಳವರೆಗೂ ಹೊಂಚುಹಾಕಿ ಕುಳಿತಿದ್ದರೆಂದು ಅನಂತರ ತಿಳಿಯಿತು. ಅಷ್ಟು ದಿನ ಕಷ್ಟಪಟ್ಟರೂ ಬೇಟೆ ಕೈಗೆ ಸಿಗಲಿಲ್ಲವಾದ್ದರಿಂದ ಬೇಸರಗೊಂಡು ಆ ಹವ್ಯಾಸ ಬಿಟ್ಟುಕೊಟ್ಟರಂತೆ.

ಅವರು ಹಿಂದೆಗೆದ ನಾಲ್ಕು ದಿನಗಳಲ್ಲೇ ಕಾಶಪ್ಪನ ಸವಾರಿ ನೂಲಿನ ಸಂಗ್ರಹಕ್ಕೆ ಹೊರಟಿತು. ಅವನ ಹಿಂದೆಯೇ ನಮ್ಮವರು ಲಾರಿಗಳನ್ನು ತೆಗೆದುಕೊಂಡು ಹೋದರು. ಈ ಬಾರಿ ಬರುವ ಲಾಭದಲ್ಲಿ ಮೂವರೂ ಸಮ ಸಮವಾಗಿ ಹಂಚಿಕೊಳ್ಳಬೇಕೆಂದು ಅಬ್ದುಲ್‌ಖಾನರು ಸೂಚಿಸಿದರು. ಕಾಶಪ್ಪನೂ ಅದನ್ನೊಪ್ಪಿಕೊಂಡ. ನಾಲ್ಕು ಲಾರಿಗಳ ತುಂಬಾ ನೂಲು ಬಂದು ಬಿದ್ದು ಮಾರಾಟವೂ ಆಗಿಹೋಯಿತು. ಆರು ಸಾವಿರ ರೂಪಾಯಿ ಲಾಭವಾಯಿತು. ಒಬ್ಬೊಬ್ಬರಿಗೆ ಎರಡು ಸಾವಿರ ಬಂತು.

ಈ ಎರಡು ಸಾವಿರವನ್ನೂ, ಆ ಮೊದಲು ನೂಲಿನ ವ್ಯವಹಾರದಿಂದ ಬಂದಿದ್ದ ಎರಡು ಸಾವಿರವನ್ನೂ ಸೇರಿಸಿ ಸರಾಫನಿಗೆ ಕೊಟ್ಟು ರಾಜಿ ಮಾಡಿಕೊಳ್ಳುವುದೊಳ್ಳೆಯದೆಂದು ಇವರು ಯೋಚಿಸುತ್ತಿದ್ದರು. ಅಬ್ದುಲ್‌ಖಾನರಿಗಾಗಲಿ ನನಗಾಗಲಿ ಆ ವಿಚಾರ ಒಪ್ಪಿಗೆಯಾಗಲಿಲ್ಲ.

"ಅವನಿಗ್ಯಾಕೆ ರೂಪಾಯಿ ಸುರಿಯುತ್ತೀರಿ ನೀವು? ಖಟ್ಲೆ ಬಿಡುಗಡೆಯಾಗುವದಂತೂ ಖಂಡಿತ. ರೂಪಾಯಿಗಳೂ ಉಳಿಯುತ್ತವೆ, ನೀವೂ ಉಳಿಯುತ್ತೀರಿ," ಎಂದು ಅವರು ಹೇಳಿದರು.

ಹಲವು ದಿನಗಳಿಂದ ನನ್ನ ತಲೆಯಲ್ಲಿ ಹೊಸದೊಂದು ಯೋಚನೆ ರೂಪುಗೊಳ್ಳುತ್ತಲಿತ್ತು. ನಾಲ್ಕು ಸಾವಿರ ರೂಪಾಯಿ ಬಂಡವಲು ಸುರಿದರೆ ಚಿಕ್ಕದೊಂದು ಬಟ್ಟೆಯಂಗಡಿಯಾಗಬಹುದು. ಹೇಗೂ ಇವರಿಗೆ ನೌಕರಿಯಿಂದ ಸಸ್ಪೆಂಡ್ ಆಗಿ ಹೋಗಿದೆ. ಖಟ್ಲೆಯಲ್ಲಿ ಬಿಡುಗಡೆಯಾದ ತರುವಾಯ ಮತ್ತೆ

ನೌಕರಿ ಸಿಕ್ಕಬಹುದು. ಆದರೆ, ಆ ಹಾಳು ನೌಕರಿಯ ತಂಟೆಗೆ ಹೋಗದೆ ಇವರು ವ್ಯಾಪಾರಕ್ಕಿಳಿಯುವುದೇ ಉತ್ತಮ.

"ಹೌದು. ಸ್ವತಂತ್ರ ವ್ಯಾಪಾರವೇ ಚಲೋದು," ಎಂದು ಕಾಶಪ್ಪನೂ ಅಭಿಪ್ರಾಯವಿತ್ತ. "ಅವರು ಅಂಗಡಿ ಇಡಲಿ, ಸಹಾಯ ಮಾಡಲಿಕ್ಕೆ ನಾನಿದ್ದೇ ಇದೀನಲ್ಲ?"

ಅಂಗಡಿಯಿಡುವ ಯೋಚನೆಗೆ ಅವರು ಸಮ್ಮತಿಸಿದರಾದರೂ, ತಮ್ಮ ಹೆಸರಿನಲ್ಲಿ ಅದನ್ನು ಆರಂಭಿಸಿದಲ್ಲಿ ಸರಾಫನು ಜಪ್ತಿ ಹುಕುಮು ತಂದು ತೊಂದರೆ ಕೊಡಬಹುದೆಂಬ ಭಯ ವ್ಯಕ್ತಗೊಳಿಸಿದರು.

"ವಕೀಲರನ್ನು ಕೇಳಿ ನೋಡಿರಿ. ಅವರು ಹೇಳಿದಂತೆ ಮಾಡಿದರಾಯ್ತು."

ವಕೀಲರನ್ನು ವಿಚಾರಿಸಿದುದೂ ಆಯಿತು.

"ಸದ್ಯಕ್ಕಂತೂ ಅಂಗಡಿ ನನ್ನ ಹೆಸರಲ್ಲಿ ಬ್ಯಾಡ ಅಂದಿದಾರೆ ವಕೀಲರು."

"ಹಾಗಾದರೆ ಯಾರ ಹೆಸರಿನಲ್ಲಿಡೂಣು? ನನ್ನ ಹೆಸರಿನಲ್ಲೂ ಇಡಲಿಕ್ಕೆ ಬರುವದಿಲ್ಲ, ಹೌದಲ್ಲೋ?"

"ಇಲ್ಲ."

"ಗೌರವ್ವನ ಗಂಡನ ಹೆಸರಲ್ಲಿಟ್ಟರೆ ಹ್ಯಾಗೆ? ಹ್ಯಾಗೂ ಅವರು ಸಾಲವನ್ನೂ ಕೊಟ್ಟಿದಾರೆ."

"ಆಯಿತಲ್ಲ. ಅವನ ಹೆಸರಲ್ಲೇ ಇಡೂಣು."

ವಿಷಯವನ್ನೆಲ್ಲ ತಿಳಿಸಿ ಅವನಿಗೆ ಕಾಗದ ಬರೆದೆವು. ಅವನೂ ಅದಕ್ಕೊಪ್ಪಿದನಲ್ಲದೆ ಅವಶ್ಯವಿದ್ದಾಗ ಬಂಡವಲಿನ ಸಹಾಯವನ್ನೂ ಮಾಡುವುದಾಗಿ ಬರೆದು ತಿಳಿಸಿದ.

ಅಂಗಡಿಯೊಂದನ್ನು ಬಾಡಿಗೆಗೆ ತೆಗೆದುಕೊಂಡುದಾಯಿತು. ಕಾಶಪ್ಪನೂ ಇವರೂ ಮಹಾಲಿಂಗಪುರ, ರಬಕವಿ, ಗದಗ, ಹುಬ್ಬಳ್ಳಿ ಮೊದಲಾದ ಊರುಗಳಿಗೆ ಹೋಗಿ ಜವಳಿಯನ್ನು ಕೊಂಡು ತಂದರು. ಒಳ್ಳೆಯ ದಿನವೊಂದನ್ನು ನೋಡಿ ವ್ಯಾಪಾರ ಶುರು ಮಾಡಿದುದೂ ಆಯಿತು. ನೇಕಾರ ಮನೆತನದಲ್ಲೇ

ಜನಿಸಿದವರಾದ ಇವರಿಗೆ ಈ ವ್ಯಾಪಾರ ಕಷ್ಟದಾಯಕವೆನ್ನಿಸಲಿಲ್ಲ. ನಗರ ಸಭೆಯ ನೌಕರರೇ ಮೊದಲಾದ ಇವರ ಗೆಳೆಯರೆಲ್ಲರೂ ನಮ್ಮ ಅಂಗಡಿಯಲ್ಲಿಯೆ ಜವಳಿ ಕೊಳ್ಳತೊಡಗಿದರು. ಒಂದೆರಡು ತಿಂಗಳುಗಳಲ್ಲಿಯೇ ಅಂಗಡಿ ಅಭಿವೃದ್ಧಿಗೊಳ್ಳುವ ಲಕ್ಷಣಗಳು ಕಾಣಿಸಿಕೊಂಡುವು. ಇವರೂ ಕೂಡಾ ಶ್ರದ್ಧೆಯಿಂದಲೂ ವಿಶ್ವಾಸದಿಂದಲೂ ವರ್ತಿಸುತ್ತೆ ಬಂದು ಜನರ ನಂಬಿಕೆ ಗಳಿಸಿಕೊಳ್ಳ ತೊಡಗಿದರು.

ಕಾಶಪ್ಪನಿಗೆ ಮಾತ್ರ ಅಂಗಡಿಯ ಲಾಭವೊಂದರಲ್ಲಿಯೇ ತೃಪ್ತಿಯಿರಲಿಲ್ಲ. ಇನ್ನೂ ಹತ್ತೆಂಟು ಮೋಟಾರು ನೂಲು ತರಲು ಚಡಪಡಿಸುತ್ತಿದ್ದನಾತ. ಅಬ್ದುಲ್‌ಖಾನರಿಗೂ ಆಸೆಯೇ. ಸಮಪಾಲಿನ ಷರತ್ತಿನ ಮೇರೆಗೆ ಮತ್ತೆ ನಾಲ್ಕು ಮೋಟಾರು ನೂಲು ಬಂದಿತು. ಈ ಬಾರಿ ಇವರು ತಾವೂ ಸ್ವಲ್ಪ ನೂಲು ತಂದು ತಮ್ಮ ತಂದೆಯವರಿಗೆ ನೇಯಲು ಕೊಟ್ಟು, ಅವರು ತಯಾರಿಸಿದ ಸೀರೆಗಳನ್ನು ಅಂಗಡಿಯಲ್ಲಿಟ್ಟು ಮಾರತೊಡಗಿದರು. ಅದರಿಂದಾಗಿ ಅಂಗಡಿಗೆ ಇನ್ನಷ್ಟೂ ಲಾಭವಾಗತೊಡಗಿತು. ಕಾಶಪ್ಪನ ಕೈಯಲ್ಲಿ ಬಂಡವಲು ಬೆಳೆಯುತ್ತ ಬಂದಂತೆ ಅವನ ಅಂಗಡಿಯೂ ಊರ್ಜಿತಾವಸ್ಥೆಗೆ ಬಂದಿತು. ಅದರೊಡನೆ ನನ್ನ ಕೈಗೂ ಧಾರಾಳವಾಗಿ ಹಣ ಬರತೊಡಗಿತು.

ಆದರೆ, ಈ ವ್ಯವಹಾರದಿಂದಾಗಿ ಅಬ್ದುಲ್‌ಖಾನರ ಬಗೆಗೆ ವಿಪರೀತ ಅಪಪ್ರಚಾರ ನಡೆಯಿತು. ಅದೇ ದಿನಗಳಲ್ಲಿಯೆ ಅವರು ಒಂದು ಮನೆಯನ್ನು ಖರೀದಿಗೆ ತೆಗೆದುಕೊಂಡುದಲ್ಲದೆ ಒಂದು ಜಮೀನನ್ನೂ ಕೊಂಡುಕೊಂಡರು. ಆ ವಿಚಾರ ನಗರದಲ್ಲಿ ಹಬ್ಬುವುದಕ್ಕೂ ವಿಲಂಬವಾಗಲಿಲ್ಲ. ಅವರು ಪಕ್ಕಾ ಲಂಚಖೋರರೆಂದು ಜನ ಮಾತನಾಡತೊಡಗಿದರು. ಅವರಿಗೆ ವರ್ಗವಾಗುವುದೆಂಬ ವದಂತಿಯೂ ಹಬ್ಬಿತು. ಆದರೂ ಅವರು ಬಹಳ ಗಟ್ಟಿಗರು. ಅಂಥ ವಾತಾವರಣವನ್ನೂ ಕಡೆಗಾಣಿಸಿ ಮತ್ತೂ ನಾಲ್ಕು ಮೋಟಾರು ನೂಲು ಸಾಗಿಸಿಕೊಂಡು ಬಂದರು.

ಆದರೆ ಅದೇ ಕೊನೆಯ ಸಾಗಾಟವಾಯಿತು.

## ೩೦

....ಅದೇ ಕೊನೆಯ ಸಾಗಾಟವಾಯಿತು.

ಮತ್ತೆ ಸಿ. ಐ. ಡಿ. ಗಳು ಕಾದು ಕುಳಿತರು ಕಾಶಪ್ಪನ ಮೋಟಾರು ಗಳಿಗಾಗಿ.

ಅವರು ಹೊಂಚು ಹಾಕಿದ ವಾರ್ತೆ ನಮಗೆ ತಿಳಿಯುವುದಕ್ಕೂ ವಿಲಂಬ ವಾಗಲಿಲ್ಲ.

ನನಗೂ ಸಹ ಇತ್ತಿತ್ತಲಾಗಿ ಅದರ ಬಗೆಗೆ ಬೇಸರ ಬಂದ ಹಾಗಾಗಿತ್ತು. ರೂಪಾಯಿಗಳಿಂದಲೂ ಬಂಗಾರದಿಂದಲೂ ತುಂಬಿದ್ದ ಟ್ರಂಕನ್ನು ನೋಡಿದಾಗ ಲೆಲ್ಲ ನನಗೆ ಏನೋ ಒಂದು ಬಗೆಯ ಸಮಾಧಾನ ಲಭಿಸುತ್ತಿತ್ತು. ಹಣದ ಆಸೆ ಎಂದೆಂದಿಗೂ ತೀರುವುದಿಲ್ಲವೆಂದು ಹೇಳಲಾಗುತ್ತದೆ. ಅದು ಪೂರ್ಣವಾಗಿ ಸತ್ಯ ವೆಂದು ನನಗೆನ್ನಿಸುವುದಿಲ್ಲ. ಒಂದು ಸಮಯ ಬರುತ್ತದೆ; ಆಗ ಎಂಥ ಆಸೆ ಬುರುಕನೂ ತೃಪ್ತನಾಗುತ್ತಾನೆ; ಹಣ ಗಳಿಸುವುದು ಇಲ್ಲಿಗೆ ಸಾಕು ಎಂದು ಹೇಳಿಕೊಳ್ಳುತ್ತಾನೆ. ಅಡ್ಡ ಹಾದಿಯಿಂದ ಹಣ ಗಳಿಸುವವರಿಗಂತೂ ಹೀಗೆನ್ನಿ ಸುವುದೆಂದು ನನಗೆ ತೋರುತ್ತದೆ. ಬೇರೆಯವರ ಅನುಭವ ಹೇಗಿದೆಯೋ ನನಗೆ ತಿಳಿಯದು.

ನನ್ನ ಅನುಭವವಂತೂ ಹೀಗಿದೆ.

ನಾನಿಲ್ಲಿ ಹೇಳುತ್ತಿರುವುದು ನನ್ನ ಅನುಭವವನ್ನೇ. ಇತರರದನ್ನಲ್ಲ.

ಇನ್ನು ಸಾಕು ಈ ಕಳ್ಳ ಸಾಗಾಟ; ಇನ್ನು ಸಾಕು ಈ ಕಳ್ಳ ವ್ಯಭಿಚಾರ - ಎಂದು ನನ್ನ ಅಂತರಾತ್ಮ ಮತ್ತೆ ಮತ್ತೆ ಹೇಳುತ್ತಿತ್ತು.

ಕಾಶಪ್ಪ ಮತ್ತು ಅಬ್ದುಲ್ ಖಾನರ ಸಂಬಂಧವನ್ನೂ ನಾನು ನಿಧಾನ ವಾಗಿ ಕಡಮೆಮಾಡಲು ಯತ್ನಿಸತೊಡಗಿದೆ.

ಆದರೆ ನಾನು ಬಿಡಬೇಕೆಂದರೂ ಅವರು ಬಿಡದಾದರು. ಯಾವ ರೀತಿ ಯಿಂದ ಹೇಳಿದರೂ ಅವರು ಕೇಳದಾದರು.

"ಏನು, ನಿನಗೆ ವೈರಾಗ್ಯ ಬಂತೇನು?" ಎಂದು ಹಾಸ್ಯವಾಡಿದರು ಫೌಜದಾರರು.

"ವೈರಾಗ್ಯ ಬರುವ ವಯಸ್ಸೇನು ನನ್ನದು?"

"ಮತ್ತೆ? ಯಾಕೆ ನಮ್ಮ ಸಂಬಂಧ ತಪ್ಪಿಸುವ ಪ್ರಯತ್ನ?"

"ಏನೋ, ಬಹಳ ಬೇಸರ ನೋಡಿರಿ ಇದೆಲ್ಲಾ. ಓಣಿಯೊಳಗಿನ ಮಂದಿಗೂ ಗೊತ್ತಾಗಿ ಹೋದಂತಿದೆ. ನಾನು ಹೊರಗೆ ಹೊರಟರೆ ಸಾಕು, ಒಂದು ತರಹಾ ನಗುತ್ತಾರೆ."

"ಅವರೇನು ಮಹಾಸಂಭಾವಿತರು ಬಿಡು. ಅದನ್ನೆಲ್ಲಾ ನೀನು ಮನಸಿಗೆ ಹಚ್ಚಿಕೋಬಾರದು."

"ಹೌದು. ಮನಸಿಗೆ ಹಚ್ಚಿಕೋಬಾರದು. ಆದರೂ ಮನಸ್ಸು ತಡೆಯು ದಲ್ಲ? ಏನು ಮಾಡಲಿ? ಹಿಂದೆ ಆದದ್ದು ಆಗಿಹೋಯ್ತು. ಇನ್ನು ಮುಂದಾ ದರೂ ಚೆನ್ನಾಗಿರಬೇಕು ಅಂತ ಆಸೆ...."

"ಅಯ್ಯೋ ಹುಚ್ಚಿ! ಹುಣಿಸೇಗಿಡಕ್ಕೆ ಮುಪ್ಪು ಬಂದರೂ ಹುಳಿ ಹೋಗದು ಅನ್ನುವ ಮಾತು ಕೇಳಿಲ್ಲವೇನೇ?"

"ಇಂಥಾ ಎಷ್ಟೋ ಮಾತುಗಳಲ್ಲಿ ಎಷ್ಟೋ ಸಲ ಹುರುಳೇ ಇಲ್ಲ ಅಂತ ನಿಸುತದೆ. ಮನುಷ್ಯ ಪ್ರಾಣಿ ಮತ್ತು ಗಿಡ ಎರಡೂ ಒಂದೇ ಜಾತಿಯವಲ್ಲ."

ಸ್ವಲ್ಪ ಹೊತ್ತು ಸುಮ್ಮನಿದ್ದು ಮತ್ತೆ ಅವರೆಂದರು:

"ನನಗೆ ಈ ಸಾರಿ ಖಂಡಿತವಾಗಿ ವರ್ಗವಾಗುವ ಹಾಗೇ ಕಾಣುತದೆ. ಮೊನ್ನೆ ಇನ್ಸ್ಪೆಕ್ಟರಿಗೂ ನನಗೂ ಭಯಂಕರ ಚಕಮಕಿಯಾಯಿತು."

"ನೂಲಿನ ಸಾಗಾಟದ ಸಂಬಂಧದಲ್ಲೇನು?"

"ಹೌದು. ಅಂತೂ ಇಂತೂ ಆ ವ್ಯವಹಾರ ಮುಗಿಯಿತೆಂದೇ ಹೇಳ

ಬೇಕು. ಇನ್ಸ್‌ಪೆಕ್ಟರು ನನ್ನ ಮೇಲೂ ರಿಪೋರ್ಟು ಮಾಡಿರಬೇಕು.” ವರ್ಗ ವಾದರೆ ನಿನ್ನನ್ನು ಬಿಟ್ಟು ಹೋಗುವದಾದರೂ ಹ್ಯಾಗೆ?”

“ನಿಮಗೇನು ಕಡಿಮೆ ಬಿಡಿರಿ ನನ್ನಂಥವರು! ಊರಿಗೊಬ್ಬಳನ್ನ ಇಟ್ಟೇರೋ ಏನೊ.”

ಅವರು ಮೀಸೆಯನ್ನು ಕುಣಿಸುತ್ತ ನಕ್ಕರು.

“ಶಹಾಜಹಾನನ ಜನಾನಾದಲ್ಲಿ ಸಾವಿರಾರು ಮಂದಿ ಹೆಂಗಸರಿದ್ದರೂ ಅವನ ಹೃದಯ ಗೆದ್ದವಳು ಒಬ್ಬಳೇ–ಮುಮ್ತಾಜ್ ಮಹಾಲ್. ನಿನಗೆ ಗೊತ್ತಿಲ್ಲವೆ? ಸಿನಿಮಾದಲ್ಲಿ ನೋಡಿರಬಹುದಲ್ಲ?”

“ನೋಡಿದ್ದೀನಿ. ಆದರೆ, ಮುಮ್ತಾಜ್ ಮಹಾಲ್ ಅವನ ಹೆಂಡತಿಯಾಗಿ ದ್ದಳು. ನನ್ನ ಹಾಗೆ ಇಟ್ಟುಕೊಂಡ ಹೆಂಗಸಾಗಿರಲಿಲ್ಲ....”

ನನ್ನ ಬಾಯಿಯನ್ನು ತಮ್ಮ ಕೈಗಳಿಂದ ಮುಚ್ಚಿ ಅಬ್ದುಲ್‌ಖಾನರು ಹೇಳಿದರು :

“ಇಂಥಾ ಮಾತು ಆಡಬಾರದು ಗಿರಿಜಾ. ನನಗೆ ಬಹಳ ದುಃಖ ವಾಗುತದೆ.”

“ನನಗೆ ಆಗುವದಿಲ್ಲ ಅಂತೀರಾ?”

“ನೋಡಿದಿಯಾ, ಮತ್ತೆ ಶುರುಮಾಡಿದೆ ನಿನ್ನ ರಾಗಾನ!” ಎಂದು ಅಸಮಾಧಾನದಿಂದಲೇ ಹೇಳಿ ಅವರು ಎದ್ದು ಹೋದರು.

ಖಟ್ಲೆಯ ‘ಮುದ್ದತ್ತು’ ಮುಂದೆ ಬೀಳುತ್ತ ನಡೆದಿತ್ತು. ತಿಂಗಳುಗಳು ಬರುತ್ತಿದ್ದುವು, ಇರುತ್ತಿದ್ದುವು, ಹೋಗುತ್ತಿದ್ದುವು. ಅಂಗಡಿಯ ವ್ಯಾಪಾರವೂ ಭರದಿಂದ ಸಾಗಿತ್ತು.

ಅಬ್ದುಲ್‌ಖಾನರಿಗೆ ವರ್ಗವಾಗಿದ್ದಿತಾದರೂ ಅವರು ಮೇಲಾಧಿಕಾರಿಗಳ ಕೈಕಾಲು ಹಿಡಿದು ಏನೇನೋ ಶತಪ್ರಯತ್ನ ಮಾಡಿ ಮತ್ತೆ ಇಲ್ಲೇ ಉಳಿದು ಕೊಳ್ಳಲು ಹವಣಿಸುತ್ತಿದ್ದರು.

ನೂಲಿನ ವ್ಯವಹಾರವನ್ನು ಮಾತ್ರ ಮತ್ತೆ ಆರಂಭಿಸುವಂತಿರಲಿಲ್ಲ.

ಒಂದು ದಿನ ಅವರು ಸಹಜವಾಗಿ ಮಾತನಾಡುತ್ತ ಹೇಳಿದರು :

" ಈ ಖಟ್ಲೆಯ ಪೀಡಾ ಒಂದು ತಪ್ಪಿದರೆ ವ್ಯಾಪಾರ ಇನ್ನೂ ಚೆನ್ನಾಗಿ ನಡೀಬಹುದು ಗಿರಿಜಾ. ಏನಾರೆ ಮಾಡಿ ಅದನ್ನ ಮುಗಿಸಿಬಿಡೋದೆ ಚಲೋದು. ಮೊನ್ನೆ ಸರಾಫ ಭೆಟ್ಟಿಯಾಗಿದ್ದ. ಅವನೂ ರಾಜಿಯಾಗುವದಕ್ಕೆ ತಯಾರಿದಾನೆ. ಯಾಕೆ ಮುಗಿಸಿಬಿಡಬಾರದು ಅಂತೀನಿ."

" ರಾಜಿ, ಬ್ಯಾಡಾ ಅಂತ ಫೌಜದಾರರು ಹೇಳುತಾರಲ್ಲರೀ?"

" ಅವರೇನು ಸರಕಾರೀ ನೌಕರದಾರರು. ನಮ್ಮ ಸಂಕಟ ಅವರಿಗೆ ಗೊತ್ತಾಗುವದಿಲ್ಲ. ಅಂಗಡಿಯನ್ನು ಬಿಟ್ಟು ಕೋರ್ಟಿಗೆ ಎಡತಾಕುವದು ಬ್ಯಾಸ ರಾಯಿತು ನನಗೆ. ಒಂದು ದಿವಸ ಅಂಗಡಿ ಮುಚ್ಚಿದರೆ ನೂರಾರು ರೂಪಾಯಿ ಹಾನಿ."

" ಹೌದು. ನೀವನ್ನುವದೂ ನಿಜವೇ."

" ಅದಕ್ಕೇ ರಾಜಿಯಾಗಿ ಬಿಡೋಣ ಅನ್ನೂದು. ನನ್ನ ಹಾಗೇ ಸರಾಫ ನಿಗೂ ವ್ಯಾಪಾರದಲ್ಲಿ ಹಾನಿಯೇ. ಅವನೂ ಹಣ್ಣು ಹಣ್ಣಾಗಿ ಹೋಗಿರಬೇಕು."

" ರೂಪಾಯಿಯ ಮಾತೇ ಎತ್ತದೆ ರಾಜಿಯಾಗುವುದಕ್ಕೆ ಅವನು ತಯಾ ರಿದ್ದರೆ ಆಗಬಹುದಲ್ಲ?"

" ಹಾಗೆ ಹ್ಯಾಗಾದೀತು ಗಿರಿಜಾ? ನಾಲ್ಕು ಸಾವಿರ ಕೈಯಾರ ಕೊಟ್ಟಿ ದಾನೆ ಅವ. ನಾನೂ ತಗೊಂಡಿದೀನಿ. ಸ್ವಲ್ಪಿಲ್ಲ ಸ್ವಲ್ಪವಾದರೂ ಕೊಡಲೇ ಬೇಕಲ್ಲ ಅವನಿಗೆ?"

" ಅವನ ಬಗ್ಗೆ ಕನಿಕರ ಬಂತೇನು ನಿಮಗೆ? ನಿಮ್ಮಿಂದ ಬಂಗಾರ ತಗೊಳ್ಳುವಾಗ ಅದು ಎಲ್ಲಿಯದು ಅನ್ನುವದರ ವಿಚಾರ ಮಾಡಿದನೇನು ಅವ? ಅಗ್ಗದಲ್ಲಿ ಸಿಗುತದಂತ ತಗೊಳ್ಳಲಿಕ್ಕೆ ತಯಾರಾದ. ನಡೆದದ್ದರೊಳಗೆ ಅವನದೂ ತಪ್ಪಿಲ್ಲವೇನು?"

" ಲಾಭದಾಸೆ ಯಾರಿಗಿರುವದಿಲ್ಲ ಗಿರಿಜಾ? ನಾವು ಮಾಡಿದ್ದಾದರೂ ಸರಿಯಾದ ಕೆಲಸವೇನು? ನೂಲಿನ ಸಾಗಾಟ...."

" ನ್ಯಾಯ ಅನ್ಯಾಯ ನೋಡುತಾ ಕೂತರೆ ಈ ಪ್ರಪಂಚದೊಳಗೆ ಬದುಕ

ಲಿಕ್ಕೇ ಆಗಲಿಕ್ಕಿಲ್ಲ. ಒಬ್ಬರನ್ನ ಇನ್ನೊಬ್ಬರು ತಿಂದು ಬದುಕುವದೇ ಈ ಪ್ರಪಂಚದ ನ್ಯಾಯ...."

ಅವರು ಮುಂದೆ ಮಾತು ಬೆಳೆಸಲಿಲ್ಲ. ನಾನೂ ಸುಮ್ಮನಾದೆ.

ಮಾರನೆಯ ದಿನ ಸರಾಫನೇ ನನ್ನನ್ನು ಭೆಟ್ಟಿಯಾಗಲು ಬಂದ. ನನ್ನನ್ನು ಒಪ್ಪಿಸಿದರೆ ಮಾತ್ರ ರಾಜಿ ಸಾಧ್ಯವೆಂದು ಅವನೂ ತಿಳಿದುಕೊಂಡ ಹಾಗಿತ್ತು.

"ಗಿರಿಜಕ್ಕನವರು ಬಹಳ ದಿನಗಳಿಂದ ನಮ್ಮ ಅಂಗಡಿಗೆ ಬರಲಿಲ್ಲ," ಎಂದು ಬಹಳ ಉಪಾಯವಾಗಿ ಅವನು ಆರಂಭಿಸಿದ.

"ನಾವು ಇನ್ನೊಮ್ಮೆ ಬರದಂತೆ ನೀವು ಮಾಡಿಬಿಟ್ಟಿರಲ್ಲ ?"

"ಅಯ್ಯೋ! ಅಯ್ಯೋ! ಹಾಗಂದರೇನು ? ನಿಮ್ಮಂಥಾ ಹತ್ತು ಮಂದಿ ಗಿರಾಕಿಗಳಿದ್ದರೆ ಮಾತ್ರ ನಮ್ಮ ವ್ಯವಹಾರ ನಡೆಯುವದಲ್ಲವೇನು ? ನಡುವೆ ಏನೇನೋ ಆಯಿತು, ಹೋಯಿತು. ಅದನ್ನೆಲ್ಲಾ ಇಬ್ಬರೂ ಮರೆತುಬಿಡೋಣ. ಏನಂತೀರಿ ಅಕ್ಕನವರೆ ?"

"ನೀವು ಮರೆಯುವ ಹಾಗಿದ್ದರೆ ನಾವೂ ಮರೆತೇವು."

"ಹಾಗೇ ಆಗಲಿ. ಹಾಗೇ ಆಗಲಿ. ಎಲ್ಲಾ ಮೊದಲಿನಂತೆ ನಡೆದ ರಾಯಿತು."

ಅರ್ಧ ಹಣ ಕೊಟ್ಟು ಒಪ್ಪಂದ ಮಾಡಿಕೊಳ್ಳಬೇಕೆಂಬ ಅವನ ಸೂಚನೆ ಯನ್ನು ನಾನು ಸುತರಾಂ ಒಪ್ಪಲಿಲ್ಲ.

"ನಮ್ಮ ಹತ್ತರ ಈಗ ಒಂದು ಕಾಸೂ ಇಲ್ಲ. ನನ್ನನ್ನು ಕೇಳದೆ ಅವರು ಈ ರಾಡಿ ಮಾಡಿಕೊಂಡು ಕೂತರು. ನಾನಾದರೂ ಏನು ಮಾಡಲಿ ? ವಕೀಲ ರಿಗೇ ಸಾವಿರ ರೂಪಾಯಿ ಕೊಡಬೇಕಾಯಿತು. ನನ್ನ ತಂಗಿಯ ಹತ್ತಿರ ಸಾಲ ತಂದು ಕೊಟ್ಟದೀನಿ. ಈಗ ರಾಜಿ ಅಂದರೆ ವಕೀಲರ ಫೀ ವ್ಯರ್ಥ ಹೋದಂತಾಗು ತದೆ. ಅದನ್ನ್ಯಾರು ಕೊಡುವವರು ?" ಎಂದು ವಾದಿಸಿದೆ.

ಆ ಮಾತಿಗೆ ಸರಾಫ ಪ್ರತಿಹೇಳಲಿಲ್ಲ. ಯೋಚನೆಮಾಡಿ ಕೊನೆಯ ನಿರ್ಣಯಕ್ಕೆ ಬರುವುದಾಗಿ ಹೇಳಿ ಹೊರಟುಹೋದ.

ಮತ್ತೆರಡು ದಿನಗಳ ತರುವಾಯ ಅವನ ಕೊನೆಯ ನಿರ್ಣಯವೂ ನಮಗೆ

ಗೊತ್ತಾಯಿತು. ಕೊನೆಗೂ ನಾನೇ ವಿಜಯಿಯಾದೆ. ಯಾವ ಷರತ್ತನ್ನೂ ಹಾಕದೆ ರಾಜಿಗೊಪ್ಪಿಕೊಂಡನಾತ.

ಸರಿ. ಖಟ್ಲೆ ಹಿಂದೆಗೆದುಕೊಳ್ಳಲ್ಪಟ್ಟಿತು.

ಇವರ ಮೇಲಿನ ಸಸ್ಪೆಂಡ್ ಆಜ್ಞೆಯೂ ಹಿಂದೆಗೆದುಕೊಳ್ಳಲ್ಪಟ್ಟಿತಾದರೂ ಇವರು ಮತ್ತೆ ನಗರಸಭೆಯತ್ತ ಸುಳಿಯಲಿಲ್ಲ. ರಾಜೀನಾಮೆ ಬರೆದು ಅಂಚೆಗೆ ಹಾಕಿ ನೌಕರಿಗೆ ಕೊನೆಯ ನಮಸ್ಕಾರ ಹೇಳಿ ಅಂಗಡಿಯಲ್ಲಿಯೇ ಎಲ್ಲ ಲಕ್ಷ್ಯ ತೊಡಗಿಸಿದರು.

ಖಟ್ಲೆ ಮುಗಿಯುತ್ತಲೂ ಸುಲೋಚನೆಯ ಮದುವೆಯ ವಿಚಾರ ಮತ್ತೆ ನನ್ನನ್ನು ಕಾಡತೊಡಗಿತು. ಅವಳಾಗ ಬೆಳೆದು ನಿಂತ ಹುಡುಗಿ. ಹೈಸ್ಕೂಲಿನ ಕೊನೆಯ ತರಗತಿಯಲ್ಲಿ ಓದುತ್ತಿದ್ದಳು. ಖಟ್ಲೆಯ ತೊಂದರೆಗೆ ಸಿಲುಕಿಕೊಂಡು ನಾವು ಸಂಕಟ ಪಡುತ್ತಿದ್ದಾಗಲೂ ಅವಳ ಷೋಕಿಗೆ ಅಡ್ಡಿಯಾಗಿರಲಿಲ್ಲ. ಸ್ನೋ ಪೌಡರುಗಳ ವೈಭವ ನಿಂತಿರಲಿಲ್ಲ. ಅವಳಿಗೆ ದುಡ್ಡು ಎಲ್ಲಿಂದ ಸಿಗುತ್ತಿದ್ದಿತೆಂಬುದೇ ನನಗೆ ತಿಳಿಯದಂತಾಗಿತ್ತು. ಈಚೆಗೆ ನಾನಂತೂ ಹಣ ಕೊಡುವುದನ್ನು ನಿಲ್ಲಿಸಿಬಿಟ್ಟಿದ್ದೆ. ಹಾಗಾದರೆ ಇನ್ನಾರು ಕೊಡುತ್ತಿರಬೇಕು? ಯಾರಾದರೂ ಗೆಳೆಯರು?

ಆ ವಿಚಾರ ತಲೆಯೆತ್ತಿದೊಡನೆಯೇ ಅದರ ಬೆನ್ನು ಹಿಡಿದು ನೂರು ವಿಚಾರ ನುಗ್ಗುತ್ತಿದ್ದುವು. ಅವಳು ಗೆಳೆಯರನ್ನು ಕಟ್ಟಿಕೊಂಡು ಚಕ್ಕಂದ ಹೊಡೆಯುವುದೂ ದೊಡ್ಡ ಮಾತಲ್ಲ. ಎಷ್ಟೋ ಬಾರಿ ಸುಶೀಲೆ ಕೂಡಾ ಆ ಬಗೆಗೆ ನನ್ನನ್ನು ಎಚ್ಚರಿಸಿರಲಿಲ್ಲವೇ?

ಸಾಧ್ಯವಾದಷ್ಟು ಬೇಗ ಅವಳಿಗೊಂದು ಮದುವೆ ಮಾಡಿಬಿಟ್ಟು ಅವಳನ್ನು ಗಂಡನ ಮನೆಗೆ ಕಳಿಸಿಬಿಟ್ಟರೆ ಸಮಸ್ಯೆ ತಾನಾಗಿಯೇ ಬಗೆಹರಿಯುವುದೆಂದುಕೊಂಡು ಅವಳಿಗೆ ವರ ನೋಡುವಂತೆ ಇವರಿಗೆ ಒತ್ತಾಯಮಾಡಿದುದಾಯಿತು.

"ಹೌದೌದು. ನೋಡೋಣ, ನೋಡೋಣ," ಎಂದಿಷ್ಟೇ ಹೇಳಿ ಅವರು ಆ ವಿಚಾರ ಮರೆಯಿಸುತ್ತಿದ್ದರು.

ಹತ್ತಿಪ್ಪತ್ತು ಸಲವಾದರೂ ನಾನು ಆ ಮಾತು ಹೇಳಿರಬಹುದು. ಅವರದು ಯಾವಾಗಲೂ ಅದೇ ಉತ್ತರ: "ನೋಡೋಣ; ನೋಡೋಣ."

ನೋಡುವ ಹಾಗೂ ಇಲ್ಲ. ಯತ್ನಿಸುವ ಹಾಗೂ ಇಲ್ಲ. ವರ ಹುಡುಕುವ ಮಾತೇ ಅವರಿಗಿಷ್ಟವಿರಲಿಲ್ಲವೆಂದು ನನಗೆ ಗೊತ್ತಾಗಲು ಬಹಳ ದಿನ ಬೇಕಾಗ ಲಿಲ್ಲ.

ಅವರ ಮನಸ್ಸಿನಲ್ಲೇನಿರಬಹುದೋ ಎಂದು ಆಗ ನಾನು ಯೋಚಿಸು ವಂತಾಯಿತು. ಸುಲೋಚನೆಯನ್ನು ಕಲ್ಯಾಣನಿಗೇ ಕೊಡುವುದೆಂದು ಅವರು ನಿಶ್ಚಯಿಸಿಕೊಂಡಿರಲಿಕ್ಕಿಲ್ಲವಷ್ಟೆ? ಅಕ್ಕನಿಗೆ ವಚನವನ್ನೂ ಕೊಟ್ಟುಬಿಟ್ಟಿದ್ದಾರೆ. ಆ ವಚನವನ್ನುಳಿಸಿಕೊಳ್ಳುವುದೇ ಅವರ ಆಶಯವಾಗಿದೆಯೋ?

ನನ್ನ ವಿರೋಧವನ್ನೂ ಲೆಕ್ಕಿಸದೆ ಅವರು ತಮ್ಮ ಅಕ್ಕನ ಇಚ್ಛೆಯನ್ನು ನಡಸಿಕೊಡುವ ಧೈರ್ಯ ಮಾಡಬಹುದೋ?

ಹಾಗಾಗುವುದು ಅಸಂಭವವೇನೂ ಅಲ್ಲವೆಂದೆನ್ನಿಸುತ್ತಲೂ ನಾನು ನನ್ನ ನಿಶ್ಚಯವನ್ನೂ ಧೃಡಗೊಳಿಸಿದೆ.

ಸುಲೋಚನೆಗೊಬ್ಬ ವರನನ್ನು ಹುಡುಕಿಕೊಡಬೇಕೆಂದು ಅಬ್ದುಲ್ ಖಾನರಿಗೂ ನಾನು ಹೇಳಿದ್ದೆ. ಪ್ರಯತ್ನಮಾಡಿ ನೋಡುವುದಾಗಿ ಭರವಸೆ ನೀಡಿದ್ದ ಅಬ್ದುಲ್‌ಖಾನರು ಒಂದು ದಿನ ಆ ವಿಚಾರ ತೆಗೆದು ಹೇಳಿದರು:

"ನಮ್ಮಲ್ಲೊಬ್ಬ ಹುಡುಗನಿದಾನೆ. ಸುಲೋಚನೆಗೆ ಅನುರೂಪನಾಗ ಬಹುದು. ಮ್ಯಾಟ್ರಿಕ್ ಪಾಸು ಮಾಡಿದಾನೆ. ರೂಪ ಗುಣ ಎಲ್ಲಾ ಚಲೋದು. ಆದರೆ ನಿನ್ನ ಮಗಳು ಅವನ್ನ ಒಪ್ಪಿಯಾಳೋ ಇಲ್ಲೋ...."

"ಯಾಕೆ ಒಪ್ಪಲಿಕ್ಕಿಲ್ಲ? ಇಷ್ಟೆಲ್ಲಾ ಚಲೋ ಇದಾನಂತ ಹೇಳುತ್ತೀರಿ. ಏನು ಮಾಡುತಾನೆ ಅವ?"

"ನಮ್ಮ ಹುಡುಗ ಅಂತ ಹೇಳಿದೆನಲ್ಲ. ನಮ್ಮ ಖಾತೆಯಲ್ಲೇ ಕಾನಸ್ಟೇ ಬಲ್ ಆಗಿದಾನೆ. ಆದರೆ ಬಹಳ ಹುಷಾರು ಹುಡುಗ. ಬಡ್ತಿ ಸಂಪಾದಿಸಿ ಫೌಜದಾರನಾದರೂ ಆಗಬಹುದು. ಕಡೆಯವರೆಗೂ ಸಿಪಾಯಿಯಾಗೇ ಉಳೀ ಲಿಕ್ಕಿಲ್ಲ."

" ಹಾಗಿದ್ದರೇನು ಅಡ್ಡಿಯಿಲ್ಲ. ಅವನ್ನೊಮ್ಮೆ ಕರಕೊಂಡು ಬರ್ರಿ, ಹುಡುಗೀನ್ನ ನೋಡಲಿಕ್ಕೆ."

ಅವನು ಬಂದು ಸುಲೋಚನೆಯನ್ನು ನೋಡಿ ಒಪ್ಪಿಕೊಂಡುದೂ ಆಯಿತು. ಅವನನ್ನು ಕಂಡು ನನಗೂ ಮೆಚ್ಚುಗೆಯಾಯಿತು. ಆತ ಸ್ಫುರದ್ರೂಪಿ, ವಿನಯಶಾಲಿ, ಶಿಷ್ಟಾಚಾರ ಬಲ್ಲವನು. ಒಂದೆರಡು ಕೂರಿಗೆಗಳಷ್ಟು ಮನೆಯ ಹೊಲವೂ ಇದ್ದಿತಂತೆ. ತಂದೆ ತಾಯಿಗಳಿಗೆ ಒಬ್ಬನೇ ಮಗ. ಅವನ ಸಹವಾಸದಲ್ಲಿ ಸುಲೋಚನೆ ಸುಖಿಯಾಗಬಹುದೆಂದೇ ನನಗೆನ್ನಿಸಿತು.

ಅವಳಿಗೆ ಮಾತ್ರ ಹಾಗೆನ್ನಿಸಲಿಲ್ಲ. ನೋಡಲು ಬಂದವರು ಹೊರಟು ಹೋಗುತ್ತಲೂ ಅವಳು ಅಣಕದ ನಗೆಯೊಂದಿಗೆ ನುಡಿದಳು :

" ತಾ ನೋಡಿದರೆ ಪೋಲೀಸ್ ಸಿಪಾಯಿ. ನನ್ನಂಥವಳನ್ನ ಮದುವೆಯಾಗುತಾನಂತೆ!"

" ನಮ್ಮ ಹುಡುಗಿಯನ್ನ ಪೋಲೀಸ್ ಸಿಪಾಯಿಗೆ ಕೊಡೂದು ನನ್ನ ಮನಸ್ಸಿಗೂ ಬರುವದಿಲ್ಲ," ಎಂದರವರು.

" ಪೋಲೀಸನಾದರೇನಾಯ್ತು ? ಅವನಲ್ಲಿ ಯಾವ ಕುಂದು ತೆಗೆಯುತ್ತೀರಿ ನೀವು ? ಹುಡುಗ ಕಲಿತವ. ಮ್ಯಾಟ್ರಿಕ್ ಮಾಡಿದಾನೆ."

" ಈಗಿನ ಕಾಲದಲ್ಲಿ ಮ್ಯಾಟ್ರಿಕ್ ಅಂದರೇನು ದೊಡ್ಡದು ಬಿಡೇ. ನಮ್ಮ ಸುಲೋಚನೆಯೂ ಮ್ಯಾಟ್ರಿಕ್ ಮಾಡುತಾಳಲ್ಲ!"

" ಹಾಗಾದರೆ ಅವನು ಬ್ಯಾಡ ಅಂತೀರೇನು ನೀವು ?"

" ನನಗಂತೂ ಮನಸಿಗೆ ಬರುವದಿಲ್ಲ. ಸುಲೋಚನೆ ಒಪ್ಪಿದರೆ ಮಾತ್ರ ನನ್ನದೇನೂ ತಕರಾರಿಲ್ಲ."

" ನಾನು ಎಂದೆಂದೂ ಇಂಥವರನ್ನ ಮದುವೆಯಾಗುವದಿಲ್ಲ," ಎಂದು ಹೇಳಿದವಳೇ ಅವಳು ಹೊರಗಡೆ ಹೊರಟುಹೋದಳು.

ನಾನು ಕೋಪದಿಂದ ಅವರ ಕಡೆ ತಿರುಗಿ ಹೇಳಿದೆ :

" ಸಲಿಗೆ ಕೊಟ್ಟು ಕೊಟ್ಟು ಹುಡುಗೀನ್ನ ಕೆಡಿಸಿಬಿಟ್ಟರಿ. ಇನ್ನು ನನ್ನ ಮಾತು ಕೇಳಿಯಾಳೇ ಅವಳು!"

ಒಂದು ಗಳಿಗೆ ಸುಮ್ಮನಿದ್ದು ಅವರು ಶಾಂತವಾದ ಸ್ವರದಲ್ಲಿ ಹೇಳಿದರು :

"ಅವಳ ಮದುವೆಯದಾದರೂ ಯಾಕೆ ಅವಸರ? ಮೊದಲು ಅವಳ ಮ್ಯಾಟ್ರಿಕ್ ಮುಗಿಯಲಿ. ಆ ಮ್ಯಾಲ ನೋಡಿದರಾಯಿತು."

ಅಷ್ಟು ಹೇಳಿ ಅವರು ಕೋಟು ತೊಟ್ಟುಕೊಂಡು ಅಂಗಡಿಗೆ ಹೊರಟು ನಡೆದರು.

ನಾನು ಕೈ ಹಿಸುಕಿಕೊಳ್ಳುತ್ತಾ ಕುಳಿತುಕೊಂಡೆ.

ಆ ದಿನವೆಲ್ಲ ಸುಲೋಚನೆ ಮನೆಗೆ ಬರಲೇ ಇಲ್ಲ. ರಾತ್ರಿಯಾಯಿತು. ಆಗಲೂ ಅವಳ ಸುಳಿವಿಲ್ಲ.

ಆಗ ಮಾತ್ರ ನನಗೆ ಗಾಬರಿಗಿಟ್ಟುಕೊಂಡಿತು. ಸಿಟ್ಟು ಮಾಡಿಕೊಂಡ ಹುಡುಗಿ ಊರನ್ನೇ ಬಿಟ್ಟು ಎಲ್ಲಿಗಾದರೂ ಹೊರಟು ಹೋಗಿರಬಹುದೇ, ಯಾರನ್ನಾದರೂ ಕಟ್ಟಿಕೊಂಡು? ಸ್ವೇಚ್ಛೆಯಿಂದ ಬೆಳೆದ ಹುಡುಗಿ, ಎಂಥ ಕೃತ್ಯಕ್ಕು ಹಿಂಜರಿಯಲಾರಳು....

ಮತ್ತೆ ಯಾವುದೋ ವಿಚಾರ ಬಂದು, ಕುಮಾರನನ್ನು ಅವನ ಅಜ್ಜನ ಮನೆಗೆ ಓಡಿಸಿದೆ. ಹತ್ತು ನಿಮಿಷಗಳಲ್ಲಿಯೇ ಅವನು ತಿರುಗಿ ಬಂದು, ಸುಲೋಚನೆ ಅಲ್ಲಿಯೇ ಇರುವುದನ್ನು ತಿಳಿಸಿದ.

ನನ್ನ ಗಾಬರಿ ಸಂತಾಪವಾಗಿ ಪರಿಣಮಿಸಿತು.

"ಮನೆಗೆ ಬಾ ಅಂತ ಹೇಳಿದಿಯೋ ಇಲ್ಲೋ?"

"ಹೇಳಿದೆ. ಇನ್ನು ಮ್ಯಾಲ ಈ ಮನೆಗೆ ಬರೂದೇ ಇಲ್ಲ ಅಂದಳವ್ವಾ."

ಒಡನೆಯೇ ಅಲ್ಲಿಗೆ ಹೋಗಿ ಅವಳನ್ನು ಪೊರಕೆಯಿಂದ ಹೊಡೆದು ಎಳೆದು ಕೊಂಡು ಬರಬೇಕೆನಿಸಿತು. ಆದರೆ, ಅದಕ್ಕು ಮನಸ್ಸು ಸಿದ್ಧವಾಗಲಿಲ್ಲ. ಮತ್ತೆ ಆ ಮನೆಯಲ್ಲಿ ಕಾಲಿಡುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದೆನಲ್ಲವೇ ನಾನು? ಒಂದು ವೇಳೆ ಆ ಪ್ರತಿಜ್ಞೆಯನ್ನು ಮುರಿದು ನಾನು ಅಲ್ಲಿಗೆ ಹೋದರೂ ನೀಲಕ್ಕ ಸುಮ್ಮನಿರುವಾಕೆಯಲ್ಲ. ಹುಡುಗಿಯನ್ನು ನಾನು ಹೊಡೆಯಹೋದರೆ ನೀಲಕ್ಕ ನನ್ನನ್ನು ಹೊಡೆಯಲು ಬರಬಹುದು. ಬೀದಿಯಲ್ಲೆಲ್ಲ ದೊಡ್ಡ ಗದ್ದಲವಾಗ ಬಹುದು. ಅದರಿಂದ ಹೋಗುವುದು ನನ್ನ ಮಾನವೇ....

ಹಾಗೆ ಯೋಚಿಸಿ, ಕೋಪವನ್ನು ತಡೆ ಹಿಡಿದುಕೊಂಡು, ಅಂಗಡಿಯಿಂದ ಅವರು ಬರುತ್ತಲೂ ಸುಲೋಚನೆಯನ್ನು ಕರೆದುಕೊಂಡು ಬರುವ ಕೆಲಸವನ್ನು ಅವರಿಗೊಪ್ಪಿಸಿದೆ.

"ಒಳ್ಳೆಯದು," ಎಂದು ಹೇಳಿ ಹೋದ ಅವರೂ ಆ ರಾತ್ರೆ ಮರಳಿ ಬರಲಿಲ್ಲ.

ಕುಮಾರನೂ ವಿಮಲೆಯೂ ಉಂಡು ನಿದ್ರೆ ಹೋಗಿದ್ದರು.

ಅವರು ಬಂದ ಬಳಿಕ ಊಟ ಮಾಡಿದರಾಯಿತೆಂದು ನಾನು ಕಾದು ಕುಳಿತೆ. ಹನ್ನೊಂದು ಗಂಟೆಯಾಯಿತು. ಹನ್ನೆರಡೂ ಆಯಿತು. ಇನ್ನು ಅವರು ಬರುವುದಿಲ್ಲವೆಂದು ಮನವರಿಕೆಯಾಗುತ್ತಲೂ ಎದ್ದು ಮಂಚದ ಮೇಲುರುಳಿದೆ.

ನಾಲ್ಕು ದಿನಗಳುರುಳಿದುವು.

ಸುಲೋಚನಾ ಬರಲಿಲ್ಲ.

ನನಗೆ ಯಾವಾಗಲೂ ಅವಳ ಚಿಂತೆಯೇ. ಹುಡುಗಿ ನನ್ನ ಕೈತಪ್ಪಿ ಹೋದಳೆಂದೇ ನನಗೆನ್ನಿಸುತ್ತಿತ್ತು. "ಆ ನನ್ನ ವೈರಿ ನೀಲಕ್ಕ, ನನ್ನ ಮಗಳನ್ನೇ ವಶಪಡಿಸಿಕೊಂಡು ಸೇಡು ತೀರಿಸಿಕೊಂಡಳು.

ಗಾಯಗೊಂಡ ಹುಲಿಯ ಹಾಗಾಗಿತ್ತು ನನ್ನ ಸ್ಥಿತಿ. ಏನು ಮಾಡುವುದು ? ಏನು ಮಾಡುವುದು ?

ಯಾವುದೂ ತೋಚದಂತಾದಾಗ ಅಬ್ದುಲ್‌ಖಾನರನ್ನು ವಿಚಾರಿಸಿದೆ. ಅವರು ಮಾರ್ಮಿಕವಾಗಿ ನಗುತ್ತ ಹೇಳಿದರು :

"ಅವಳ ಬಗ್ಗೆ ಇಷ್ಟೊಂದು ಚಿಂತೆ ಯಾಕೆ ನಿನಗೆ? ಅವಳಿಗೇನೂ ಆಗಿಲ್ಲವಲ್ಲ ?"

ನೀಲಕ್ಕನಿಗೂ ನನಗೂ ನಡೆದ ಘರ್ಷಣೆಯ ವಿಚಾರವನ್ನೆಲ್ಲ ವಿವರಿಸಿ ಹೇಳಿದಾಗ ನನ್ನ ನಿಲುಮೆ ಅವರಿಗರ್ಥವಾಯಿತು. ಆಗಲೂ ನಗುನಗುತ್ತಲೇ ಅವರು ಹೇಳಿದರು :

"ನೀವು ಹೆಂಗಸರು ಪ್ರತಿಜ್ಞೆ ಮಾಡುವದೊಂದು, ದೇವರು ಮಾಡುವದೇ ಇನ್ನೊಂದು."

" ಹಾಂ ?"

" ನೀಲಕ್ಕನ ಮಗನಿಗೆ ಸುಲೋಚನೆಯನ್ನು ಕೊಡುವ ಪ್ರಸಂಗ ಬಂದರೆ ಜೀವ ಬಿಡುವದಾಗಿ ನೀನು ಪ್ರತಿಜ್ಞೆ ಮಾಡಿದೀಯಲ್ಲವೇನು ? ನಿನ್ನ ಮಗಳೂ ಆ ಹುಡುಗನನ್ನೇ ಮದುವೆಯಾಗಬೇಕೆಂತ ಪ್ರತಿಜ್ಞೆ ಮಾಡಿದಂತೆ ಕಾಣುತ್ತ ದಲ್ಲ ?"

ನನ್ನ ದೇಹದ ಕೆಳಗಿನ ಭೂಮಿಯೇ ಕುಸಿದುಹೋಗುತ್ತಿದ್ದ ಹಾಗೆ ಭಾಸವಾಗತೊಡಗಿತು. ಸುಲೋಚನೆ ಮತ್ತು ಕಲ್ಯಾಣ....ಅವನನ್ನೇ ಮದುವೆ ಯಾಗುವುದಾಗಿ ಅವಳು ನಿಶ್ಚಯಿಸಿಕೊಂಡಿರಬಹುದೇ ? ಪೋಲೀಸ್ ಸಿಪಾಯಿ ಯನ್ನಾಕೆ ನಿರಾಕರಿಸಲು ಅದೇ ಕಾರಣವೋ ಏನೊ....

ಅಬ್ದುಲ್‌ಖಾನರು ಮುಂದೆ ಹೇಳಿದರು :

" ಮೂರು ನಾಲ್ಕು ದಿನಗಳಿಂದ ಅವರಿಬ್ಬರನ್ನೂ ಸಿನಿಮಾ ಥಿಯೇಟರು ಗಳ ಮುಂದೆ ನೋಡುತ್ತಿದ್ದೀನಿ. ಹೊಸದಾಗಿ ಮದುವೆಯಾದ ಜೋಡಿಯಂತೇ ಕಾಣುತ್ತಾರೆ ಅವರು."

ನಾನು ದಿಙ್ಮೂಢಳಂತೆ ಕುಳಿತುಕೊಂಡಿದ್ದೆ. ಏನು ಹೇಳುವುದಕ್ಕೂ ತೋಚಲಿಲ್ಲ.

ಮಾರನೆಯ ದಿನ 'ಇವರು' ಅಂಗಡಿಗೆ ಹೊರಟು ನಿಂತಾಗ ನಿಶ್ಚಯದ ಧ್ವನಿಯಲ್ಲಿ ಹೇಳಿದೆ :

" ಸುಲೋಚನೆಯನ್ನ ನೀವು ಮನೆಗೆ ಕರೆದು ತರುತೀರೋ ಇಲ್ಲಾ ನಾನೇ ಈ ಮನೆ ಬಿಟ್ಟು ಹೋಗಲೋ ?"

ಅವರು ನನ್ನನ್ನು ವಿಚಿತ್ರವಾಗಿ ದಿಟ್ಟಿಸುತ್ತ ವಿಕಾರರಹಿತ ಧ್ವನಿಯಲ್ಲಿ ಹೇಳಿದರು :

" ನೀನ್ಯಾಕೆ ಹೋಗಬೇಕು ? ಅವಳಂತೂ ಹೋಗಿಬಿಟ್ಟಳು. ನಾನೂ ಹೋಗಿಬಿಟ್ಟರೆ ಒಳ್ಳೆಯದೇ ಆದೀತು."

ಶಾಂತವಾಗಿಯೇ ಅವರು ಆ ಮಾತನ್ನಾಡಿದ್ದರಾದರೂ ಅದು ನನ್ನೆದೆ ಯಲ್ಲಿ ಪ್ರಚಂಡವಾದ ಅಶಾಂತಿಯನ್ನೇ ಹುಟ್ಟಿಸಿತು. ಇಷ್ಟು ವರ್ಷಗಳವರೆಗೆ

ಒಂದು ಸಲವೂ ಈ ಬಗೆಯ ಅರ್ಥಗರ್ಭಿತ ಮಾತು ಹೊರಟಿರಲಿಲ್ಲ ಅವರ ಬಾಯಿಂದ. ಇಂದೇ ಹೊರಡಲು ಕಾರಣವೇನು? ನನ್ನ ರಹಸ್ಯಗಳೆಲ್ಲವೂ ಅವರಿಗೆ ಇತ್ತೀಚಿಗೆ ಗೊತ್ತಾಗಿರಬಹುದೋ ಏನೊ....

ಅವರು ಮತ್ತೆ ಮಾತನಾಡಲಿಲ್ಲ. ಎಂದಿನಂತೆಯೇ ನಿಧಾನವಾಗಿ ಅಡಿಯಿಡುತ್ತಾ ಮನೆಯಿಂದ ಹೊರಬಿದ್ದರು.

ಮಧ್ಯಾಹ್ನ ಅವರು ಊಟಕ್ಕೆ ಬರುವರೋ ಇಲ್ಲವೋ ಎಂದು ನಾನು ಚಿಂತಿಸುತ್ತಲಿದ್ದೆ. ಆದರವರು ಬಂದರು; ಅವರೊಡನೆ ಸುಲೋಚನೆಯೂ ಬಂದಳು. ನನಗೆ ಆಶ್ಚರ್ಯವಾಯಿತು, ಅದರೊಡನೆಯೇ ಕೊಂಚ ಸಮಾಧಾನವೂ ಆಯಿತು. ಆದರೂ, ಒಳಗೊಳಗೇ ಎದೆ ಬಡಿದುಕೊಳ್ಳುವುದು ಮಾತ್ರ ನಿಲ್ಲಲಿಲ್ಲ.

ಆ ದಿನ ಅವಳಿಗೇನನ್ನೂ ಆಡಬಾರದೆಂದು ಯೋಚಿಸಿ ನಾನು ಮೌನವ್ರತ ಸ್ವೀಕರಿಸಿದೆ. ಅವಳೂ ಮೌನವಾಗಿಯೇ ಇದ್ದಳು. ಅವರೂ ಅಷ್ಟೆಯೇ.

ಮುಂದೆ ಹತ್ತು ಹದಿನೈದು ದಿನಗಳವರೆಗೂ ವಿಶೇಷ ಘಟನೆ ಯಾವುದೂ ಜರಗಲಿಲ್ಲ. ಸುಲೋಚನೆ ದಾರಿಗೆ ಬಂದಳೆಂದೇ ನನಗೆನ್ನಿಸತೊಡಗಿತ್ತು.

ಆದರೆ, ವಾಸ್ತವವಾಗಿ ಅವಳು ದಾರಿಗೆ ಬಂದಿರಲಿಲ್ಲವೆಂಬ ಸತ್ಯ ಬೆಳಕಿಗೆ ಬರಲು ಹೆಚ್ಚು ದಿನ ಬೇಕಾಗಲಿಲ್ಲ.

ಒಂದು ಬೆಳಿಗ್ಗೆ ಹಾಸುಗೆಯಿಂದ ಏಳುತ್ತಲೂ ಅವಳು ವಾಂತಿ ಮಾಡಿಕೊಂಡಳು.

"ಯಾಕೇ? ಏನಾಯಿತೇ?" ಎಂದು ನಾನು ಕೇಳಿದೆ.

"ಏನಿಲ್ಲ, ಏನಿಲ್ಲ. ರಾತ್ರಿ ಉಳ್ಳಾಗಡ್ಡಿ ತಿಂದಿದ್ದರಿಂದ ವಾಂತಿಯಾಗಿರಬೇಕು," ಎಂದು ಹೇಳಿ ಆ ಸಂಗತಿಯ ಮೇಲೆ ತೆರೆಯೆಳೆದಳು.

ಮಾರನೆಯ ದಿನ ಬೆಳಗಿನಲ್ಲೂ ಮತ್ತೆ ವಾಂತಿ. ಅದರ ಮರುದಿನವೂ ಹಾಗೆಯೇ.

ಅಂದು ಅವಳು ಸ್ನಾನ ಮಾಡುತ್ತಿದ್ದಾಗ ಅವಳ ಸಮೀಪದಲ್ಲಿಯೆ ನಿಂತು

ಕೊಂಡು ಅವಳ ದೇಹದಲ್ಲಿನ ಸೂಕ್ಷ್ಮ ಬದಲಾವಣೆಗಳನ್ನು ಕಂಡುಹಿಡಿದ ತರು ವಾಯವಂತೂ ಸಂದೇಹಕ್ಕೆ ಆಸ್ಪದವೇ ಉಳಿಯಲಿಲ್ಲ.

" ಈ ತಿಂಗಳು ನೀನು ಮುಟ್ಟಾಗಲಿಲ್ಲವೇನೇ ?" ಎಂದು ಕೇಳಿದೆ.

ನನ್ನ ಪ್ರಶ್ನೆಯನ್ನು ಅವಳು ಬಹಳ ದಿನಗಳಿಂದಲೂ ನಿರೀಕ್ಷಿಸಿಕೊಂಡಿದ್ದ ಳೇನೊ; ಕೊಂಚವೂ ಬೆದರದೆ ಉತ್ತರವಿತ್ತಳು :

" ಇನ್ನೂ ಆಗಿಲ್ಲ."

" ಯಾಕೆ ?"

" ಯಾಕಂದರೇನು ಹೇಳುವದು ? ಕೆಲವರಿಗೆ ಹಾಗೂ ಆಗುತದೆ. ನಿನಗೆ ಗೊತ್ತಿಲ್ಲೇನು ? ಎರಡು ಮೂರು ತಿಂಗಳಿಗೊಮ್ಮೆ ಮುಟ್ಟಾಗುವವರೂ ಅದಾರೆ ಬೇಕಾದಷ್ಟು ಮಂದಿ ನಮ್ಮ ಶಾಲೆಯಲ್ಲಿ."

" ಅವರೆಲ್ಲರಿಗೂ ಮುಂಜಾನೆ ಎದ್ದ ಕೂಡಲೆ ವಾಂತಿಯಾಗುವದೇನು ?" ಎನ್ನುತ್ತಾ ಕೈಗೆ ಸಿಕ್ಕಿದ ಕಟ್ಟಿಗೆಯನ್ನೆತ್ತಿ ಅವಳನ್ನು ಹೊಡೆಯತೊಡಗಿದೆ.

ಅವಳು ಅದನ್ನೂ ನಿರೀಕ್ಷಿಸಿಕೊಂಡಿದ್ದ ಹಾಗಿತ್ತು. ಬಚ್ಚಲಿನಿಂದ ಈಚೆಗೆ ಬಂದವಳೇ ನನ್ನ ಕೈಲಿದ್ದ ಕಟ್ಟಿಗೆಯನ್ನು ಕಸಿದುಕೊಂಡು, ದೂರ ಸರಿದು ನಿಂತು,

" ಯಾಕೆಂತ ಹೊಡೀತೀ ನನ್ನ ?" ಎಂದು ಸವಾಲು ಹಾಕಿದಳು.

ನನಗೆ ಮತ್ತಷ್ಟೂ ರೇಗಿತು. ಅವಳನ್ನು ಹಿಡಿಯಲು ಯತ್ನಿಸಿದೆ. ಅವಳು ನನ್ನ ಕೈಗೆ ಸಿಕ್ಕಿಬೀಳಲಿಲ್ಲ. ಉಪಾಯವಾಗಿ ಅಡುಗೆಯ ಮನೆಯಿಂದ ಹೊರ ಬಿದ್ದು ಥಟ್ಟನೆ ಬಾಗಿಲನ್ನೆಳೆದು ಹೊರಗಡೆ ಚಿಲಕ ಹಾಕಿಕೊಂಡಳು. ಅಡುಗೆ ಮನೆಗಿದ್ದುದು ಅದೊಂದೇ ಬಾಗಿಲಲ್ಲವೆ ? ಬೋನಿನಲ್ಲಿ ಸಿಕ್ಕ ಮಿಕದಂತೆ ನಾನು ಚಡಪಡಿಸತೊಡಗಿದೆ.

" ಬಾಗಿಲು ತಗೀತೀಯೋ ಇಲ್ಲೋ ? ಯಾರನ್ನಿಟ್ಟುಕೊಂಡು ಬಸಿ ರಾಗಿದ್ದೀ ? ಯಾರ ಮರ್ಯಾದೆ ಕಳೆಯಬೇಕೆಂತ ಮಾಡಿದ್ದೀ ?"

ಅವಳು ಕೊಠಡಿಗೆ ಹೋಗಿ ಸೀರೆಯುಟ್ಟುಕೊಳ್ಳುತ್ತಿದ್ದಳೇನೊ. ಅಲ್ಲಿಂದಲೇ ಅವಳ ಧ್ವನಿ ಬಂತು :

" ನಿನಗೆ ಮರ್ಯಾದೆ ಅನ್ನೂದು ಇದ್ದರಲ್ಲೇನು ನಾನು ಕಳೆಯುವದು ?"

ಅಯ್ಯೋ ದೇವರೆ! ಇವಳಿಗೂ ಎಲ್ಲವೂ ಗೊತ್ತಾಗಿದೆಯೆ!

ನಿಂತುಕೊಂಡಲ್ಲಿಯೇ ನಾನು ಕುಸಿದು ಕುಳಿತೆ. ಎರಡು ನಿಮಿಷ ಬಿಟ್ಟು ಅವಳು ಮತ್ತೆ ಅಡುಗೆಯ ಮನೆಯ ಬಾಗಿಲ ಬಳಿ ಬಂದು ಹೇಳಿದಳು :

" ಮರ್ಯಾದೆಯಾಗಿ ನೀನೊಬ್ಬಾಕೆಯೇ ಇರು ಈ ಮನೆಯೊಳಗೆ. ಜೀವ ರಮಿಸದಿದ್ದರೆ ಕಾಶಪ್ಪನಾಗಲಿ ಫೌಜದಾರರಾಗಲಿ ಇದ್ದೇ ಇರುತಾರಲ್ಲ! ನೀನು ಮಾಡೂದು ಯಾರಿಗೂ ಗೊತ್ತಿಲ್ಲಂತ ತಿಳಿದಿದ್ದಿಯೇನು? ಊರಿಗೆಲ್ಲ ಡಂಗುರ ಡಂಗುರ ಆಗಿಹೋಗಿದೆ ನಿನ್ನ ಪುರಾಣ. ನಿನ್ನಿಂದಾಗಿ ನಾನು ಸಾಲೆಯೊಳಗೆ ತಲೆಯೆತ್ತಿ ತಿರುಗಾಡಲಿಕ್ಕೂ ಆಗಲಿಲ್ಲ. ಆಯಿತು. ತಾಯಿಯಂತೇ ಮಗಳಲ್ಲ ವೇನು? ನಿನ್ನಂತೇ ನಾನೂ ಆದೆ. ಇದರಲ್ಲಿ ನನ್ನದೇನೂ ತಪ್ಪಿಲ್ಲ. ಎಲ್ಲಾ ನಿನ್ನದೇ ಆಶೀರ್ವಾದ. ಗೊತ್ತಾಯಿತೇ ?" .

ನಾನು ಹುಚ್ಚಿಯಂತೆ ಎದ್ದು ಬಾಗಿಲು ಬಡಿಯುತ್ತ ಮಾತನಾಡಿದೆ.

" ಸುಲೂ, ಸುಲೂ. ನಿನಗೇನು ತಲೆ ಕೆಟ್ಟಿದೆಯೋ? ಬಾಯಿಗೆ ಬಂದ ಹಾಗೆಲ್ಲ ಮಾತಾಡುತಿದ್ದೀಯಲ್ಲ! ನನ್ನ ಹೊಟ್ಟೆಯಲ್ಲೇ ಹುಟ್ಟಿದ ಮಗಳಲ್ಲ ವೇನು ನೀನು? ನಿನ್ನ ಸ್ವಂತ ತಾಯಿಗೇ ಹೀಗೆಲ್ಲ ಅನ್ನುತ್ತಾರೇನೇ ?"

" ಸ್ವಂತ ತಾಯಿ! ಸ್ವಂತ ತಂದೆ! ಹ ಹ ಹ ಹ್ಹ!" ಎಂದಳು ಸುಲೋಚನೆ. " ನೀನು ನನ್ನ ಸ್ವಂತ ತಾಯಿ ಅನ್ನುವದೇನೋ ನಿಜ. ಆದರೆ, ನನ್ನ ಸ್ವಂತ ತಂದೆ ಯಾರು? ಯಾರೋ ಯಾರಿಗೆ ಗೊತ್ತು? ಬಹಳ ಮಾಡಿ ಕಾಶಪ್ಪನೇ ಇರಬಹುದು. ಅದಕ್ಕೇ ನನ್ನ ಮೈ ಬಣ್ಣ ಸ್ವಲ್ಪ ಕಪ್ಪಾಗಿರಬೇಕು. ನನಗೆ ಬುದ್ಧಿ ಬಂದಾಗಿನಿಂದ ಇದೇ ವಿಚಾರ ಮಾಡಿ ಮಾಡಿ ಎಷ್ಟೋ ಸಾರಿ ಕೆರೆಗೆ ಹಾರಿ ಪ್ರಾಣಬಿಡೋಣ ಅನ್ನಿಸಿತ್ತು. ಧೈರ್ಯವಾಗಲಿಲ್ಲ. ಕಡೆಗೆ ನಿಶ್ಚಯ ಮಾಡಿದೆ – ಯಾರಿಂದಲಾದರೂ ಹುಟ್ಟಿರಲೊಲ್ಲೆನೇಕೆ, ಅಂತೂ ಹುಟ್ಟಿ ಬಂದದ್ದಂತೂ ಆಗಿದೆ. ಎಲ್ಲಾ ಅವಮಾನವನ್ನೂ ಹೊಟ್ಟೆಯೊಳಗಿಟ್ಟುಕೊಂಡು ನಾಲ್ಕು ದಿನ ಆದರೂ ನಿನ್ನ ಹಾಗೇ ಚಕ್ಕಂದ ಹೊಡೆದು ಸಿಕ್ಕಷ್ಟು ಸುಖಪಡ

ಬೇಕೆಂದುಕೊಂಡೆ. ಕಲ್ಯಾಣನಿಗೆ ನನ್ನ ಕೊಡಬಾರದೆಂತ ಪಣ ತೊಟ್ಟಿರಲಿಲ್ಲ ವೇನು ನೀನು? ನೋಡು. ಅವನ ಸಂಗಡವೇ ನಾನು ಮದುವೆಯಾಗ್ತೀನಿ."

" ಸುಲೂ....ಸುಲೂ...."

" ನಿನ್ನ ಫಜೀತಿ ಮಾಡಬೇಕೆಂತಲೇ ನಾನು ಕಲ್ಯಾಣನ ಸಂಗ ಮಾಡಿದ್ದು. ಗೊತ್ತಾಯಿತೇ? ನೀನು ಇಲ್ಲಿ ಫೌಜದಾರರ ಕೂಡ ಮಜಾ ಹೊಡೀತಿದ್ದಿ. ನಾನು ಅಲ್ಲಿ ಕಲ್ಯಾಣನ ಕೂಡ. ನಮ್ಮ ಮದುವೆಯ ದಿನವೂ ಗೊತ್ತಾಗಿ ಹೋಗಿದೆ. ಮುಂದಿನ ತಿಂಗಳಿನ ಇಪ್ಪತ್ತನೆಯ ತಾರೀಖಿಗೆ ನಾವಿಬ್ಬರೂ ಗಂಡ ಹೆಂಡಿರಾಗ್ತೀವಿ. ಬಸಿರಾದದ್ದಕ್ಕೆ ನನಗೇನು ಅಂಜಿಕೆಯಿಲ್ಲ. ನೀನೂ ಅಂಜ ಬೇಕಾಗಿಲ್ಲ. ನಾನೀಗ ಹೋಗುತೀನಿ."

ಅಲ್ಲಿಗೆ ಮಾತು ನಿಂತುಹೋಯಿತು.

ಅವಳ ಹೆಜ್ಜೆಗಳ ಸದ್ದು ಅಡಗುತ್ತಿದ್ದ ಹಾಗೆಯೆ ಅವರ ಹೆಜ್ಜೆಗಳ ಸದ್ದು ಕೇಳಿಬಂತು. ಅವರೆಲ್ಲಿ ನಿಂತುಕೊಂಡಿದ್ದರೋ ಏನೊ. ಸುಲೋಚನೆಯಾಡಿದ ಮಾತುಗಳೆಲ್ಲವೂ ಅವರ ಕಿವಿಗೂ ಬಿದ್ದಿರಲು ಸಾಕು.

ಅವರ ಹೆಜ್ಜೆಗಳು ಬಾಗಿಲಿನವರೆಗೂ ಬಂದ ಹಾಗೆ ಕೇಳಿಸಿತು. ಹಾಕಿದ್ದ ಚಿಲಕವನ್ನೂ ಅವರು ತೆಗೆದರು. ಬಾಗಿಲನ್ನು ಮಾತ್ರ ದೂಡಲಿಲ್ಲ. ಮತ್ತೆ ಅವರ ಹೆಜ್ಜೆಗಳು ಅತ್ತ ಹೋದುವು. ಅವರು ಕೋಟು ಟೊಪ್ಪಿಗೆ ಹಾಕಿಕೊಂಡಿರ ಬೇಕು. ಎದ್ದು, ಬಾಗಿಲು ತೆಗೆದು ಓಡಿಹೋಗಿ ಅವರ ಕ್ಷಮೆ ಕೇಳಿಕೊಳ್ಳಬೇಕೆನಿ ಸಿತು. ಆದರೆ, ಮೇಲಕ್ಕೇಳುವುದಕ್ಕೇ ಆಗಲಿಲ್ಲ. ಕೈಕಾಲು ಬಿದ್ದುಹೋದವ ಳಂತೆ ಕುಳಿತುಕೊಂಡಿದ್ದೆ.

ಹೊರಗಡೆ ಆಟವಾಡುತ್ತಿದ್ದ ವಿಮಲೆಯನ್ನು ಅವರು ಕೂಗಿ ಕರೆದರು.

" ಅಜ್ಜಿಯ ಮನೆಗೆ ಬರ್ತೀಯಾ ವಿಮಲಾ?"

" ಹೂಂನಪ್ಪಾ," ಎಂದಳು ವಿಮಲೆ.

ನನ್ನ ಸರ್ವನಾಶವಾಗುವ ಹೊತ್ತು ಬಂದಿತ್ತು. ಆಗಲಾದರೂ ಎದ್ದು ಅವರನ್ನು ತಡೆಯೋಣವೆಂದುಕೊಂಡೆ. ಆದರೆ ಕಾಲುಗಳು ಅಲುಗಾಡಲಿಲ್ಲ.

ಅವರಿಗೆ ಮುಖ ತೋರಿಸುವುದಕ್ಕೆ ನಾಚಿಕೊಂಡು ಸತ್ತಂತಾಗಿತ್ತು ನನ್ನ ಮನಸ್ಸು; ನನ್ನ ಮೈ.

ಅವರು ಕೂಗಿದರು :

"ಕುಮಾರಾ, ಕುಮಾರಾ...."

ಕಾಶಪ್ಪನ ಮನೆಯಲ್ಲಿ ಓದಿಕೊಳ್ಳುತ್ತಿದ್ದ ಕುಮಾರ ಓಡಿಬಂದ.

"ಅಜ್ಜಿಯ ಮನೆಗೆ ಬರ್ತೀಯಾ ಕುಮಾರಾ ?"

"ಈಗ್ಯಾಕೆ ಅಪ್ಪಾ ?" ಎಂದ ಕುಮಾರ.

ಪ್ರಾಣ ಹೋಗುತ್ತಿದ್ದ ಹೊತ್ತಿನಲ್ಲೂ ಸ್ವಲ್ಪ ಆಸೆ ಸಂಚರಿಸಿದಂತಾಯಿತು. ಕುಮಾರನೊಬ್ಬನಾದರೂ ನನ್ನೊಡನೆ ಉಳಿಯಬಹುದೇನೊ....

"ಈಗಲೇ ಹೋಗಬೇಕು. ನಿನ್ನ ಕೋಟು ಟೊಪ್ಪಿಗೆ ಪುಸ್ತಕ ಎಲ್ಲಾ ಕಟ್ಟಿಕೊಂಡುಬಿಡು ಕುಮಾರಾ," ಎಂದರವರು.

ಓಡಿಹೋಗಿ ಅವರನ್ನು ಪ್ರತಿಭಟಿಸಿ ಕುಮಾರನನ್ನು ಹಿಡಿದಿಟ್ಟುಕೊಳ್ಳ ಬೇಕೆನ್ನಿಸಿತು. ಅನ್ನಿಸಿದ್ದುದೆಷ್ಟೊ ಅಷ್ಟೆ, ಆಗಲೂ ಏಳಲಾಗಲಿಲ್ಲ.

"ಮನೆ ಬಿಟ್ಟೇ ಹೋಗಿಬಿಡುವದೇ ಅಪ್ಪಾ ?" ಎಂದ ಕುಮಾರ. ಅವರ ಧ್ವನಿಯಲ್ಲಿ ಕಳವಳ ತುಂಬಿ ಬಂದಿತ್ತು.

"ಇಲ್ಲ ಕುಮಾರಾ. ಮತ್ತೆ ಬರೋಣ."

"ಅವ್ವ ಎಲ್ಲಿದಾಳಪ್ಪಾ ? ಅವ್ವನಿಗೆ ಹೇಳಿ ಬರ್ತೀನಿ."

"ಅವಳೆಲ್ಲೋ ಹೋಗಿದಾಳೆ ಹೊರಗೆ. ಯಾವಾಗ ಬರುತಾಳೋ ಏನೊ. ಹೋಗಿಬರೋಣ ಬಾ."

"ಅಡಿಗೇ ಮನೆಯೊಳಗಿದ್ದಾಳು. ನೋಡಿ ಬರ್ತೀನಿ ನಿಲ್ಲಪ್ಪಾ," ಎಂದ ವನೇ ಕುಮಾರ ಬಾಗಿಲು ತೆಗೆದು ಒಳನುಗ್ಗಿದ. ಆ ವೇಳೆಯೊಳಗಾಗಿ ನನ್ನ ಕಣ್ಣುಗಳಿಂದ ನೀರು ಸುರಿಯತೊಡಗಿತ್ತು.

"ಅಪ್ಪಾ, ಅವ್ವ ಇಲ್ಲಿದಾಳಪ್ಪಾ. ಯಾಕೋ ಅಳಾಕ ಹತ್ತಿದಾಳೆ."

ಕುಮಾರನನ್ನು ಎದೆಗವಚಿಕೊಂಡು ನಾನು ಬಿಕ್ಕಿ ಬಿಕ್ಕಿ ಅಳತೊಡಗಿದೆ. ನನ್ನ ಅಳುವಿನ ಧ್ವನಿ ಕಿವಿಗೆ ಬೀಳುತ್ತಲೂ ವಿಮಲೆಯೂ ಓಡಿಬಂದಳು.

ಮಕ್ಕಳಿಬ್ಬರನ್ನೂ ತಬ್ಬಿಕೊಂಡು ನಾನೆಷ್ಟು ಹೊತ್ತು ಅಳುತ್ತಲಿದ್ದೆನೋ ತಿಳಿಯದು. ಎದ್ದು, ಹೊರ ಬಂದು ನೋಡಿದಾಗ ಅವರಿರಲಿಲ್ಲ. ಅವರ ಬಟ್ಟೆಗಳೂ ಇರಲಿಲ್ಲ.

"ಅಪ್ಪನಿಗೂ ನಿನಗೂ ಜಗಳವಾಯಿತೇನವ್ವಾ?" ಎಂದ ಕುಮಾರ.

ಅವನಿಗೇನು ಉತ್ತರ ಹೇಳುವುದು?

"ಅವ್ವಾ, ಅವ್ವಾ, ಅಕ್ಕ ಎಲ್ಲಿ ಹೋದಳು?" ಎಂದಳು ವಿಮಲೆ.

ಅವಳಿಗೇನು ಉತ್ತರ ಹೇಳುವುದು?

ಆ ದಿನ ಹುಡುಗರನ್ನು ಶಾಲೆಗೆ ಕಳಿಸದೆ ಮನೆಯಲ್ಲಿಯೇ ಇರಿಸಿಕೊಂಡೆ.

ಸಾಯಂಕಾಲ 'ಅವರು' ಮನೆಗೆ ಬರಬಹುದೆಂಬ ನಂಬಿಕೆಯೇನೂ ಇರಲಿಲ್ಲವಾದರೂ ಬಂದರೂ ಬರಬಹುದೆಂಬ ಆಸೆಯಿನ್ನೂ ಜೀವ ಹಿಡಿದುಕೊಂಡಿತ್ತು.

ಆದರೆ ಅವರು ಬರಲಿಲ್ಲ.

ಮಾರನೆಯ ದಿನವೂ ಅವರು ಬರದಿರಲು ಕುಮಾರನಿಗೆ ಕಳವಳವಾಗಿರಲು ಸಾಕು. "ಅಜ್ಜನ ಮನೆಗೆ ಹೋಗಿ ಅಪ್ಪನ್ನ ಕರಕೊಂಡು ಬರಲೇನವ್ವಾ?" ಎಂದು ಕೇಳಿದ.

"ಏನೂ ಬ್ಯಾಡಪ್ಪಾ. ಅವರೇ ಬಂದಾರು ಮಧ್ಯಾಹ್ನ."

ಮಧ್ಯಾಹ್ನವಾಯಿತು. ಅವರು ಬರಲಿಲ್ಲ.

ರಾತ್ರಿಯಾಯಿತು. ಅವರು ಬರಲಿಲ್ಲ.

ಮತ್ತೊಂದು ದಿನ ಕಳೆಯಿತು. ಅವರು ಬರಲಿಲ್ಲ.

ತಿರುಗಿ ಬರಬಾರದೆಂದು ನಿರ್ಧರಿಸಿಕೊಂಡೇ ಹೋಗಿಬಿಟ್ಟರಬೇಕು ಅವರು. ಇನ್ನು ಈ ಮನೆಯಲ್ಲಿ ಅವರು ಕಾಲು ಹಾಕಲಿಕ್ಕಿಲ್ಲವೆಂದೇ ನನಗೆನ್ನಿಸುತ್ತಿತ್ತು.

ನಡೆದುದೇನೆಂಬುದನ್ನರಿಯದ ಹುಡುಗರಿಬ್ಬರೂ ವಿಚಿತ್ರವಾದ ವೇದನೆಗೊಳಗಾಗಿದ್ದರು. ನನ್ನನ್ನು ಪ್ರೀತಿಸುತ್ತಿದ್ದ ಹಾಗೇ ಅವರು ತಮ್ಮ ತಂದೆಯನ್ನೂ ಪ್ರೀತಿಸುತ್ತಿದ್ದರು.

ನಾಲ್ಕನೆಯ ದಿನ ಕುಮಾರನಿಗೆ ಸಹಿಸಲಾಗಲಿಲ್ಲ.

"ನಾನಿವತ್ತು ಅಂಗಡಿಗೆ ಹೋಗಿ ಅಪ್ಪನ್ನ ಭೆಟ್ಟಿಯಾಗಿ ಬರ್ತೀನಿ ಅವ್ವಾ."

ಬೇಡವೆಂದು ನಾನೆಷ್ಟು ಬಾರಿ ಹೇಳಿದರೂ ಕೇಳದೆ ಅವನು ಹೊರಟು ಹೋದ. ಇನ್ನೇನು ಮಾಡುವುದು? ಬೀದಿಗುಂಟ ಓಡುತ್ತ ಹೋಗಿ ಅವನನ್ನು ಹಿಡಿದುಕೊಂಡು ಬರುವ ಹಾಗಿತ್ತೇ? ಈಗ ಬಂದಾನು, ಇನ್ನೊಂದು ತಾಸಿಗೆ ಬಂದಾನು, ನನ್ನನ್ನು ಬಿಟ್ಟು ಅವನು ಅಲ್ಲಿರುವುದೇ ಅಸಾಧ್ಯ ಎಂದೆಲ್ಲ ಹೇಳಿ ಕೊಳ್ಳುತ್ತ ಅವನಿಗಾಗಿ ಕಾದು ಕುಳಿತೆ.

ಅವನು ಬರಲಿಲ್ಲ – ರಾತ್ರಿಯಾದರೂ.

ರಾತ್ರೆ ವಿಮಲೆಯನ್ನು ಎದೆಗೊತ್ತಿಕೊಂಡು ಕಂಬನಿ ಸುರಿಸುತ್ತಾ ಬಿದ್ದು ಕೊಂಡೆ.

"ಅವರೆಲ್ಲಾ ನನ್ನ ಬಿಟ್ಟು ಹೋದರು. ನೀನೂ ನನ್ನ ಬಿಟ್ಟು ಹೋಗ ಬ್ಯಾಡ ವಿಮಲಾ."

"ಇಲ್ಲ ಅವ್ವಾ."

"ಅವರು ಬಂದು ಕರೆದರೂ ಹೋಗಬಾರದು ವಿಮಲಾ."

"ಇಲ್ಲ ಅವ್ವಾ."

"ನೀಲವ್ವತ್ತೆ, ಕಲ್ಯಾಣ ಮಾಮಾ, ಅಜ್ಜಿ, ಸುಲೂ ಅಕ್ಕ ಯಾರು ಕರೆದರೂ ಹೋಗಬಾರದು ವಿಮಲಾ."

"ಇಲ್ಲವ್ವಾ. ಹೋಗುವದಿಲ್ಲ," ಎಂದು ಹೇಳಿ ವಿಮಲೆ ಕೇಳಿದಳು: "ಸುಲೂ ಅಕ್ಕ ಎಲ್ಲಿ ಹೋದಳವ್ವಾ?"

"ಅವಳು ಬಹಳ ಕೆಟ್ಟ ಹುಡುಗಿ. ನನ್ನ ಮಾತು ಕೇಳದೆ ಹೋಗಿ ಬಿಟ್ಟಳು. ಅವಳು ಭೆಟ್ಟಿಯಾದರೆ ನೀನು ಮಾತಾಡಬ್ಯಾಡ ವಿಮಲಾ."

"ಚಾಕಲೇಟು ಕೊಟ್ಟರೆ?"

"ಏನು ಕೊಟ್ಟರೂ ಮಾತಾಡಬಾರದು. ನಿನಗೆ ಬೇಕಾದಷ್ಟು ಚಾಕ ಲೇಟು ನಾ ಕೊಡಿಸ್ತೀನಿ. ತಿಳೀತೇ?"

“ ಊಂನವ್ವಾ.”

ಆ ಭೀಕರ ಇರುಳು ಕಳೆದು ಬೆಳಗಾಯಿತು. ಮೂರು ನಾಲ್ಕು ದಿನ ಗಳಿಂದ ಸ್ನಾನ ಮಾಡಿರಲಿಲ್ಲವಾದುದರಿಂದ ಅಂದು ನೀರು ಹಾಕಿಕೊಳ್ಳುವು ದೆಂದುಕೊಂಡು ನೀರೊಲೆಗೆ ಉರಿ ಹಚ್ಚುತ್ತಿದ್ದೆ. ಓಣಿಯ ಹುಡುಗರ ಜೊತೆ ಯಲ್ಲಿ ವಿಮಲೆ ಬೀದಿಯಲ್ಲಿ ಆಟವಾಡುತ್ತಿದ್ದಳು.

ಸ್ನಾನ ಮುಗಿಸಿ ಸೀರೆಯುಟ್ಟುಕೊಳ್ಳುತ್ತಾ ವಿಮಲೆಗೂ ನೀರು ಹಾಕುವು ದೆಂದು ಅವಳನ್ನು ಕೂಗಿದೆ. ಅವಳಿಂದ ‘ಓ’ ಬರಲಿಲ್ಲ.

ಎದೆ ಡವಡವನೆ ಬಡಿದುಕೊಳ್ಳುತ್ತಿರಲು ಹೊರಗೆ ಬಂದು ನೋಡಿದೆ. ಹುಡುಗರ ಗುಂಪಿನಲ್ಲಿ ವಿಮಲೆ ಕಾಣಿಸಲಿಲ್ಲ.

“ ನಮ್ಮ ವಿಮೂ ಎಲ್ಲಿ ಹೋದಳು ?” ಎಂದು ಒಬ್ಬ ಹುಡುಗನನ್ನು ಕೇಳಿದೆ.

“ ಇದೇ ಈಗ ಸುಲೋಚನಾ ಬಂದು ಕರಕೊಂಡು ಹೋದಳು.”

## ೩೧

ಮುಗಿಯಿತಲ್ಲ ಪ್ರಿಯಗೆಳತಿ, ಮುಗಿಯಿತು ನನ್ನ ಕಥೆ.

ಇನ್ನು ಳಿದುದೇನು ? ಈ ಜೀವವೊಂದು, ಅಷ್ಟೆ.

ಏಕಾಕಿಯಾಗಿ ಎಷ್ಟು ದಿನ ತಡೆದೀತು ಈ ಜೀವ ?

ಅವರಂತೂ ಇನ್ನು ಬರುವುದಿಲ್ಲ. ಕಾಶಪ್ಪನನ್ನಾಗಲಿ ಅಬ್ದುಲ್‌ಖಾನರನ್ನಾಗಲಿ ಮತ್ತೆ ಕೂಡಿಕೊಳ್ಳುವ ಅಪೇಕ್ಷೆಯೂ ನನಗಿಲ್ಲ.

ಸುಲೋಚನೆಯ ಬಗೆಗೆ ನಾನು ಕಟ್ಟಿಕೊಂಡಿದ್ದ ಕನಸೂ ಒಡೆದು ಹೋಯಿತು. ನಾನು ಸ್ವೀಕರಿಸಿದ ಪ್ರತಿಜ್ಞೆ....ನೀಲಕ್ಕನೊಡನೆ ನಾನು ಆಡಿದ್ದ ಮಾತು :

" ನನ್ನ ಮಗಳನ್ನ ನಿನ್ನ ಮಗನಿಗೆ ಕೊಟ್ಟರೆ ಅಂದೇ ಬಾವಿ ಹಾರಿಕೊಂಡು ಪ್ರಾಣ ಬಿಡುತೀನಿ."

ಕೊನೆಗೂ ನೀಲಕ್ಕನೇ ಗೆದ್ದಳು. ಅಂದು ಪ್ರತಿಜ್ಞೆ ಮಾಡಿದ ಹಾಗೆ ನಾನೀಗ ಬಾವಿಗೆ ಬಿದ್ದು ಪ್ರಾಣ ಕೊಡಬೇಕು. ನಾನು ಹಾಗೆ ಮಾಡುವುದನ್ನೇ ಎದುರು ನೋಡುತ್ತಿರಬೇಕು ಆ ನನ್ನ ವೈರಿ ; ಮಾತಿನಂತೆ ನಡೆಯದೆ ನಾನು ಹೇಡಿಯಂತೆ ಸುಮ್ಮನಿರುವುದನ್ನು ಕಂಡು ಗಹಗಹಿಸಿ ನಗುತ್ತಿರಬೇಕು.

ಬೀಳಬೇಕು, ಬಾವಿಗೆ ಬೀಳಬೇಕು....

ಎರಡು ಮೂರು ಬಾರಿ ಹೋಗಿ ಬಂದೆ ಬಾವಿಗೆ. ಬೀಳಲಾಗಲಿಲ್ಲ. ಮಾತಿಗಿಂತಲೂ ಪ್ರಾಣ ಹೆಚ್ಚಿನದು. ಪ್ರತಿಜ್ಞೆಗಿಂತಲೂ ಬದುಕು ಹೆಚ್ಚಿನದು.

ಜನರು ತಿಳಿದಷ್ಟು ಸುಲಭವಲ್ಲ ಆತ್ಮಹತ್ಯೆ. ಕಥೆ ಕಾದಂಬರಿಗಳಲ್ಲಿ ಮಾತ್ರ ಅದು ಬಹಳ ಸುಲಭ.

ನನ್ನದೂ ಒಂದು ಕಾದಂಬರಿಯ ಕಥೆಯಂತೆಯೇ ಆಯಿತು, ಇನ್ನೂ ವಿಚಿತ್ರವಾಯಿತು, ಇನ್ನೂ ಭೀಕರವಾಯಿತು. ಆದರೂ, ಕಾದಂಬರಿಗಳಂತೆ ನನ್ನ ಕಥೆಯ ಅಂತ್ಯವಾಗಲಾರದೆಂದು ತೋರುತ್ತದೆ.

ಕಾದಂಬರಿಗಳಲ್ಲಿನ ನಾಯಿಕೆಯರಿಗೆ ನನ್ನಂಥ ಸ್ಥಿತಿ ಬಂದಾಗ ಅವರೆದುರಿಗಿರುವ ದಾರಿಯೊಂದೇ ಒಂದು – ಸಾವು.

ಆದರೆ, ನಿಜವಾಗಿ ಸಾವು ಅಷ್ಟು ಸುಲಭವಲ್ಲ. ನನ್ನ ಹೆಜ್ಜೆ ಮುಂದುವರಿಯಲಾರದು ಆ ದಾರಿಯಲ್ಲಿ.

ಮುಂದೇನು ಹಾಗಾದರೆ? ಈ ನಗರವನ್ನೇ ತ್ಯಜಿಸಿ ಹೊರಟು ಹೋಗುವುದೇ?

ತಂದೆ ತಾಯಿಗಳಂತೂ ನನ್ನನ್ನು ಮನೆಯಲ್ಲಿ ಸೇರಿಸುವುದಿಲ್ಲ.

ತವರು ಮನೆಯಿದ್ದೂ ಇಲ್ಲದಂತೆ.

ಗಂಡನ ಮನೆಯಿದ್ದೂ ಇಲ್ಲದಂತೆ.

ಮುಂದೇನು ಹಾಗಾದರೆ? ಒಂಟಿಯಾಗಿ ಎಲ್ಲಿರುವುದು? ಏನನ್ನು ಮಾಡುವುದು?

ಕುಮಾರ ಮತ್ತು ವಿಮಲೆಯಾದರೂ ನನ್ನ ಜೊತೆಗಿದ್ದರೆ ಇದೇ ನಗರದಲ್ಲಿ ಬೇರೊಂದು ಕಡೆ ಮನೆ ಹಿಡಿದು ಅವರಿಗೆ ಶಿಕ್ಷಣ ಕೊಡಿಸುತ್ತಾ ಇರಬಹುದಾಗಿತ್ತು. ಈಗ ನನ್ನ ಹತ್ತಿರ ಹಣಕ್ಕೆ ಕೊರತೆಯಿಲ್ಲ, ಬಂಗಾರಕ್ಕೂ ಕೊರತೆಯಿಲ್ಲ. ಹತ್ತು ವರ್ಷ ಕೂತು ತಿಂದರೂ ಸಾಲುವಷ್ಟು ಸಂಪತ್ತಿದೆ ನನ್ನ ಹತ್ತಿರ.

ಹುಡುಗರಿಗಾಗಿಯೇ ಅಲ್ಲವೆ ನಾನಿದನ್ನೆಲ್ಲ ಕೂಡಿಸಿದ್ದು?

ನಾನು ಯೋಚಿಸಿದ್ದುದೇನು? ನಡೆದುದೇನು?

ನನ್ನ ಮಕ್ಕಳೂ ಶ್ರೀಮಂತರ ಮಕ್ಕಳಂತೆ ಬದುಕಬೇಕು, ಶ್ರೀಮಂತರ ಹುಡುಗರನ್ನು ಮದುವೆಯಾಗಿ ಶ್ರೀಮಂತಿಕೆಯ ಮನೆ ಸೇರಬೇಕು ಎಂದು

ಯೋಚಿಸಿಕೊಂಡಿದ್ದೆ. ನಾನು ಕರೆಯಿಸಿಕೊಂಡ ಹಾಗೆ ಅವರೂ 'ತಿರುಕರ ಮಕ್ಕಳೆಂದು' ಕರೆಯಿಸಿಕೊಳ್ಳಬಾರದೆಂದು ಇಷ್ಟೆಲ್ಲ ಸಾಹಸ ಮಾಡಿದೆ.

ಯಾರಿಗೆಂದು ಇದೆಲ್ಲವನ್ನೂ ನಾನು ಮಾಡಿದೆನೋ ಅವರೇ ನನ್ನನ್ನು ಬಿಟ್ಟು ಹೋದರಲ್ಲ....

ನಾನು ಮಾಡಿದ ಪಾಪಗಳಿಗೆ ಇದೇ ಪ್ರಾಯಶ್ಚಿತ್ತವೋ ಏನೊ....

ನನ್ನ ಕಂದರಿರಾ, ಕುಮಾರಾ, ವಿಮಲಾ! ನಿಮ್ಮನ್ನು ಬಿಟ್ಟು ನಾನು ಹ್ಯಾಗಿರಲಿ? ನನ್ನನ್ನು ಬಿಟ್ಟು ನೀವಾದರೂ ಹ್ಯಾಗಿರುತ್ತೀರಿ?

ನಿಮ್ಮ ಇಚ್ಛೆಯ ವಿರುದ್ಧವಾಗಿ ಅವರು ನಿಮ್ಮನ್ನಲ್ಲಿ ಹಿಡಿದಿಟ್ಟುಕೊಂಡಿರ ಬೇಕು. ನನ್ನನ್ನು ಬಿಟ್ಟು ನೀವಿರುವುದೇ ಸಾಧ್ಯವಿಲ್ಲ. ನಾನು ಬಲ್ಲೆ.

ಅಂದು, ಅವರನ್ನು ನೋಡಲು ಹೋದ ಹಾಗೇ ಇಂದು ನನ್ನನ್ನು ನೋಡುವ ನೆಪ ಮಾಡಿ ಇತ್ತ ಬರಬಾರದೇ, ನನ್ನ ಕುಮಾರಾ, ನಿನ್ನ ತಂಗಿ ಯನ್ನೂ ಕರೆದುಕೊಂಡು?

ನೀವು ಬರದಿದ್ದರೆ ನಾನು ಹುಚ್ಚಿಯಾಗಿ ಹೋಗುವುದು ಖಂಡಿತ. ಈ ಕನ್ನಡಿಯನ್ನು ನೋಡು ನೋಡುತ್ತಲೇ ನನಗೆ ಹುಚ್ಚು ಹಿಡಿಯುವುದು ಖಂಡಿತ.

× × × ×

"ಅವ್ವಾ...."

"ಅವ್ವಾ....ಅವ್ವಾ...."

ಬಂದರು! ನನ್ನ ಕರುಳಿನ ಕಂದರಿಬ್ಬರೂ ಬಂದುಬಿಟ್ಟರು.

ಈಗ ನನ್ನ ಜೀವದಲ್ಲಿ ಜೀವ ಬಂತು. ಬದುಕಿನಲ್ಲಿ ಮತ್ತೆ ಆಸೆ ಮೂಡಿತು.

ನಾನೆಂದುಕೊಂಡ ಹಾಗೇ ಆಯಿತು. ಇವರು ನನ್ನನ್ನು ಬಿಟ್ಟು ಅಲ್ಲಿರು ವುದು ಸಾಧ್ಯವೇ ಇಲ್ಲ.

"ಅವ್ವಾ...."

"ಅವ್ವಾ....ಅವ್ವಾ...."

"ನನ್ನ ಮಗೂ...."

" ನನ್ನ ಕಂದಾ....ನನ್ನ ಬಿಟ್ಟು ಹ್ಯಾಗಾದರೂ ಇದ್ದಿರಿ ಇಷ್ಟು ದಿವಸ?"

" ನಿನ್ನ ಹತ್ತರ ಹೋಗಬಾರದಂತ ಅಪ್ಪ ಅಜ್ಜಿ ಅತ್ತೆ ಅಕ್ಕ ಹೇಳಿ ನಮ್ಮನ್ನ ಬಿಡಲಿಲ್ಲ ಅವ್ವಾ. ತಪ್ಪಿಸಿಕೊಂಡು ಓಡಿಬಂದಿವಿ. ಅಜ್ಜ ಒಬ್ಬನೇ ಹೇಳಿದನವ್ವಾ ನಿನ್ನ ಹತ್ತರ ಹೋಗಲಿಕ್ಕೆ...."

" ನನ್ನ ಬಿಟ್ಟು ಇನ್ನು ಮ್ಯಾಲ ಎಂದೆಂದೂ ಅಲ್ಲಿಗೆ ಹೋಗಬ್ಯಾಡಿರಿ ನನ್ನ ಕಂದರಿರಾ."

" ಇಲ್ಲವ್ವಾ. ಎಂದೆಂದೂ ಹೋಗುವದಿಲ್ಲ."

" ಅಪ್ಪ ನಿನ್ನ ಬಿಟ್ಟು ಬಿಟ್ಟನಂತೆ. ಹೌದೇನವ್ವಾ?"

" ಹೌದಪ್ಪಾ. ನೀವಿಬ್ಬರೂ ಮಾತ್ರ ನನ್ನ ಬಿಡುವದಿಲ್ಲ ಹೌದಲ್ಲೋ?"

" ಇಲ್ಲವ್ವಾ. ಬಿಡುವದಿಲ್ಲ ಎಂದೆಂದೂ...."

---

## ಈ ಲೇಖಕರ ಇತರ ಕೃತಿಗಳು :

**ಕಾದಂಬರಿ—**

ಸ್ವಾತಂತ್ರ್ಯದೆಡೆಗೆ
ಮಾಡಿ ಮಡಿದವರು
ಜ್ವಾಲಾಮುಖಿಯ ಮೇಲೆ
ಮೋಹದ ಬಲೆಯಲ್ಲಿ
ಬೀದಿಯಲ್ಲಿ ಬಿದ್ದವಳು
ಮಣ್ಣು ಮತ್ತು ಹೆಣ್ಣು
ಜರತಾರಿ ಜಗದ್ಗುರು
ಖಾನಾವಳಿಯ ನೀಲಾ
ನೀ ನನ್ನ ಮುಟ್ಟಬೇಡ
ಜನಿವಾರ ಮತ್ತು ಶಿವದಾರ
ನಾನು ಪೋಲೀಸನಾಗಿದ್ದೆ
ಬಲೆಯ ಬೀಸಿದರು
ಬಂಗಾರದ ಜಿಂಕೆಯ ಹಿಂದೆ
ಗೋವಾದೇವಿ

**ಕಥಾಸಂಗ್ರ—**

ಕಾರವಾನ್
ಗುಲಾಬಿ ಹೂ
ಆಗಸ್ಟ್ ಒಂಭತ್ತು
ಸೆರೆಯಿಂದ ಹೊರಗೆ
ಜೋಳದ ಬೆಳೆಯ ನಡುವೆ

**ನಾಟಕ—**

ಪಟ್ಟಣದ ಹುಡುಗಿ

## ಮುಂದಿನ ಪ್ರಕಟನೆಗಳು

**ಮಣ್ಣಿನ ಮಗಳು**

ಶ್ರೀ ಕೃಷ್ಣಮೂರ್ತಿ ಪುರಾಣಿಕರ ಕಾದಂಬರಿ

●

**ಕಮಲ ಚಕ್ರ**

ಶ್ರೀ ಬಸವರಾಜ ಕಟ್ಟೀಮನಿಯವರ ಕಾದಂಬರಿ

●

**ಕಾಂಚನ - ಗಂಗಾ**

('ಕಾಮಿನಿ ಕಾಂಚನ'ದ ಎರಡನೇ ಭಾಗ)

ಶ್ರೀ ಅ. ನ. ಕೃ. ರವರ ಕಾದಂಬರಿ

●

**ಪದ್ಮಿನಿ ಪ್ರೇಮಾಪಹರಣ**

ಶ್ರೀ 'ಜಿಬಿಜ್'ರವರ ಕಾದಂಬರಿ

●

**ರಾಜ - ರಾಣಿ - ಗುಲಾಮ**

ಶ್ರೀ ರಾ. ವೆಂ. ಶ್ರೀನಿವಾಸರ ಕಾದಂಬರಿ

●

**ಹೊನ್ನಾವರದ ಹುಡುಗಿ**

ಶ್ರೀ ಮಾ. ನಾ. ಚೌಡಪ್ಪನವರ ಕಾದಂಬರಿ

●

**ಷಾಜಹಾನ್**

ಶ್ರೀ ಬಿ. ಪುಟ್ಟಸ್ವಾಮಯ್ಯನವರ ನಾಟಕ

